# ಶ್ರೀ ಪ್ರಸನ್ನವೆಂಕಟದಾಸರ ಭಾಗವತ

## (ದಶಮಸ್ಕಂಧ ಪೂರ್ವಾರ್ಧ)

ಸಂಪಾದಕರು

**ಟಿ. ಕೆ. ಇಂದುಬಾಯಿ**



**ಕನ್ನಡ ಅಧ್ಯಯನ ಸಂಸ್ಥೆ**

ಮೈಸೂರು ವಿಶ್ವವಿದ್ಯಾನಿಲಯ

೧೯೮೭

ŚHRI PRASANNAVENKATADAŚARA BHAGAVATA (compositions of Shri Prasanna Venkatadasa); Edited by T. K. Indubai, Published by the Institute of Kannada Studies, University of Mysore, Manasagangotri, Mysore-570 006. First Edition 1987. pp. lxviii + 172.



**ಬೆಲೆ : ರೂ. 15-00**

ಮಾರಾಟಗಾರರು : ನಿರ್ದೇಶಕರು, ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು–570 012

ಮುದ್ರಕರು : ಮಿತ್ರ ಪ್ರಿಂಟರ್ಸ್, ಇಂಡಸ್ಟ್ರಿಯಲ್ ಸಬರ್ಬ್, ವಿದ್ಯಾರಣ್ಯಪುರಂ, ಮೈಸೂರು–8

# ಮುನ್ನುಡಿ

ಕನ್ನಡ ಸಾಹಿತ್ಯದ ಸಾವಿರದೈನೂರು ವರ್ಷಗಳ ಸುದೀರ್ಘ ಇತಿಹಾಸದಲ್ಲಿ ಹರಿದಾಸ ಸಾಹಿತ್ಯ ಒಂದು ಪ್ರಮುಖ ಘಟ್ಟ. ಹೆಚ್ಚು ಕಡಿಮೆ ಐದು ಶತಮಾನಗಳ ವ್ಯಾಪ್ತಿಯ ಈ ಭಕ್ತಿ ಸಾಹಿತ್ಯ ಪ್ರಕಾರವನ್ನು ಸುಮಾರು ಇನ್ನೂರು ಜನ ಹರಿದಾಸರು ತಮ್ಮ ಬಗೆಬಗೆಯ ರಚನೆಗಳಿಂದ ಮುಖ್ಯವಾಗಿ ಕೀರ್ತನೆಗಳಿಂದ ಸಮೃದ್ಧವಾಗಿಸಿದ್ದಾರೆ. ಈ ಕೀರ್ತನೆಗಳು ಇಂದು ಜನಪ್ರಿಯವಾಗಿ ಪ್ರಚಾರದಲ್ಲಿವೆ. ಕೆಲವು ಮುಖ್ಯ ದಾಸರ ಹೆಸರುಗಳು ಮನೆಮಾತಾಗಿವೆ. ಸಾಹಿತ್ಯಿಕ ಶ್ರೀಮಂತಿಕೆಯಿಂದ ಮಾತ್ರವಲ್ಲದೆ ದ್ವೈತ ಸಿದ್ಧಾಂತವನ್ನು ಅಧ್ಯಯನ ಮಾಡುವ ದೃಷ್ಟಿಯಿಂದಲೂ ಹರಿದಾಸಸಾಹಿತ್ಯ ಮಹತ್ವದ್ದಾಗಿದೆ. ಕರ್ನಾಟಕ ಸಂಗೀತಕ್ಕೆ ಹರಿದಾಸರ ಕೀರ್ತನೆಗಳ ಕೊಡುಗೆಯಂತೂ ಅಸಾಧಾರಣವಾದದ್ದು.

ನಮ್ಮ ಪ್ರಾಚೀನ ಸಾಹಿತ್ಯದ ಇತರ ಕೃತಿಗಳೊಂದಿಗೆ ದಾಸ ಸಾಹಿತ್ಯವನ್ನು ಹೋಲಿಸಿದಾಗ ಎದ್ದು ಕಾಣುವ ಒಂದು ಮುಖ್ಯಅಂಶವೆಂದರೆ ಈ ಸಾಹಿತ್ಯದ ವಾಕ್ ಪರಂಪರೆ. ಗ್ರಂಥಸ್ಥವಾಗಿ ಉಳಿದುಬಂದಿರುವುದಕ್ಕಿಂತಲೂ ಜನರ ಬಾಯಲ್ಲಿ ನಿಂತಿರುವುದೇ ಹೆಚ್ಚು. ಭಕ್ತರ ಹೃದಯದ ಮೊರೆಗಳಾದ ಈ ಕೀರ್ತನೆಗಳು ತಲೆಮಾರಿನಿಂದ ತಲೆಮಾರಿಗೆ ಹಬ್ಬಿಬಂದಿವೆ. ನೆನಪಿನಲ್ಲಿ ನಿಂತ ಈ ರಚನೆಗಳ ಗ್ರಂಥರೂಪದ ಕಡೆ ಯಾರೂ ಅಷ್ಟಾಗಿ ಗಮನ ವಹಿಸಲಿಲ್ಲ. ಈ ಕಾರಣದಿಂದ ಕೀರ್ತನೆಗಳ ಅಧಿಕೃತ ಪಠ್ಯ ಆವೃತ್ತಿಗಳು ನಮಗೆ ದೊರೆಯುವುದಿಲ್ಲ. ನಮ್ಮ ಸಾಹಿತ್ಯ ಚರಿತ್ರೆಯ ಒಂದು ದೊಡ್ಡ ಕೊರತೆ ಇದು. ಕೆಲವು ಲೇಖಕರು ಪ್ರಕಾಶಕರು ಹರಿದಾಸ ಸಾಹಿತ್ಯ ಪ್ರಕಟಣೆಯನ್ನು ಕೈಗೊಂಡಿರುವುದೇನೋ ನಿಜ. ಆದರೆ ಶಾಸ್ತ್ರೀಯ ದೃಷ್ಟಿಯಿಂದ ಸಮಗ್ರ ದಾಸಸಾಹಿತ್ಯವನ್ನು ಸಂಪಾದಿಸುವ ಕೆಲಸಕ್ಕೆ ಯಾರೂ ಈವರೆಗೆ ಕೈಹಾಕಿಲ್ಲ. ಇದನ್ನು ಗಮನಿಸಿ ಹರಿದಾಸ ಸಾಹಿತ್ಯದ ಸಂಗ್ರಹ, ಸಂಪಾದನೆ, ಪ್ರಕಟಣೆಗಳನ್ನು ವಿಮರ್ಶಾತ್ಮಕವಾಗಿ ಕೈಗೊಳ್ಳುವ ಯೋಜನೆಯೊಂದನ್ನು ೧೯೭೦ರಷ್ಟು ಹಿಂದೆಯೇ ಕನ್ನಡ ಅಧ್ಯಯನ ಸಂಸ್ಥೆ ಸಿದ್ಧಪಡಿಸಿ, ನೆರವು ಕೇಳಿ ವಿಶ್ವವಿದ್ಯಾನಿಲಯ ಧನಸಹಾಯ ಆಯೋಗಕ್ಕೆ ಒಪ್ಪಿಸಿತು. ಆ ಯೋಜನೆಯ ಮುಖ್ಯ ಅಂಶಗಳು ಇವು :

(೧) ಹಸ್ತಪ್ರತಿಗಳ ಸಂಗ್ರಹ-ಕ್ಷೇತ್ರಕಾರ್ಯ : ಕರ್ನಾಟಕದ ವಿವಿಧ ಭಾಗಗಳಲ್ಲಿ ಅಗತ್ಯಬಿದ್ದರೆ ಹೊರಗೂ ಸಂಚರಿಸಿ ಹಸ್ತಪ್ರತಿಗಳನ್ನು ಸಂಗ್ರಹಿಸುವುದು; ಕೀರ್ತನೆಗಳನ್ನು ಧ್ವನಿಗ್ರಹಣಮಾಡಿ ಸಂಗ್ರಹಿಸುವುದು; ಹಾಡುಗಾರಿಕೆಯ ವಿವಿಧ ಸಂಪ್ರದಾಯಗಳನ್ನು ಗುರುತಿಸಿ ಅವನ್ನು ಉಳಿಸಿಕೊಳ್ಳಲು ಕ್ರಮಗಳನ್ನು ಕೈಗೊಳ್ಳುವುದು.

(೨) ಸಂಪಾದನೆ: ಹಸ್ತಪ್ರತಿಗಳಲ್ಲಿ ವಾಕ್ ಸಂಪ್ರದಾಯದಲ್ಲಿ ದೊರೆಯುವ ಸಾಹಿತ್ಯವನ್ನು ಆಧರಿಸಿ ಶಾಸ್ತ್ರೀಯ ಗ್ರಂಥ ಸಂಪಾದನ ಕ್ರಮಂಗಳಿಗನುಸಾರವಾಗಿ ಅಧಿಕೃತ ಪಠ್ಯಗಳನ್ನು ಸಿದ್ಧಪಡಿಸುವುದು.

(೩) ಪ್ರಕಟಣೆ: ಹೀಗೆ ಸಿದ್ಧಗೊಳಿಸುವ ಸಾಹಿತ್ಯವನ್ನು, ವಿಷಯ ಗಾತ್ರಗಳಿಗೆ ಅನುಗುಣವಾಗಿ ಬೇರೆ ಬೇರೆ ಸಂಪುಟಗಳಲ್ಲಿ ಪ್ರಕಟಿಸುವುದು; ಪ್ರತಿಯೊಂದು ಸಂಪುಟಕ್ಕೂ ಅಗತ್ಯವಾದ ಕವಿ ಕಾವ್ಯ ಸಂಬಂಧವಾದ ಪೀಠಿಕೆಯನ್ನೂ ಅಭ್ಯಾಸಿಗಳಿಗೆ ನೆರವಾಗುವ ಸೂಚಿಗಳನ್ನೂ ಕೊಟ್ಟು ಪ್ರಕಟಣೆಗಳು ಸಾಮಾನ್ಯರಿಗೂ ವಿದ್ವಾಂಸರಿಗೂ ಉಪಯೋಗವಾಗುವಂತೆ ನೋಡಿಕೊಳ್ಳುವುದು.

(೪) ಹರಿದಾಸ ಸಾಹಿತ್ಯದ ಬೇರೆ ಬೇರೆ ಮುಖಗಳನ್ನೂ ಇತರ ಭಕ್ತಿಪಂಥಗಳೊಡನೆ ಅದರ ಸಂಬಂಧವನ್ನೂ, ಕನ್ನಡ ಸಾಹಿತ್ಯಕ್ಕೆ ಹರಿದಾಸರ ಕೊಡುಗೆಗಳನ್ನೂ ಚರ್ಚಿಸುವ ಪ್ರಕಟಣೆಗಳನ್ನು ಹೊರತರುವುದು.

ಸುಮಾರು ಹದಿನೈದು ವರ್ಷಗಳ ಅವಧಿಯಲ್ಲಿ ಮೂರುಲಕ್ಷ ರೂಪಾಯಿಗಳ ವೆಚ್ಚದಲ್ಲಿ ಪೂರ್ಣಗೊಳ್ಳುವ ಈ ಯೋಜನೆಯನ್ನು ವಿಶ್ವವಿದ್ಯಾನಿಲಯದ ಧನಸಹಾಯ ಆಯೋಗ ಭಾಗಶಃ ಒಪ್ಪಿ ನಾಲ್ಕನೇ ಯೋಜನೆಯ ಅವಧಿಯಲ್ಲಿ ಸ್ವಲ್ಪ ಹಣವನ್ನು ಮಾತ್ರ ನೀಡಿ, ಮೂವರು ಸಂಶೋಧನ ಸಹಾಯಕರನ್ನೂ ಇಬ್ಬರು ಪ್ರತಿಕಾರರನ್ನೂ ನೇಮಿಸಿಕೊಳ್ಳಲು ಅವಕಾಶ ಮಾಡಿಕೊಟ್ಟಿತು. ಇದೇ ನೆರವನ್ನು ಐದನೆಯ ಯೋಜನೆಯಲ್ಲೂ ಮುಂದುವರಿಸಿ ಕೇವಲ ಎರಡು ವರ್ಷಗಳವರೆಗೆ ನೆರವನ್ನು ಮುಂದುವರಿಸಿತ್ತು. ನಮ್ಮ ವಿಶ್ವವಿದ್ಯಾನಿಲಯದ ಅಧಿಕಾರವರ್ಗದವರ ನೆರವಿನಿಂದ ಯೋಜನೆ ಈಗಲೂ ಮುಂದುವರಿದಿದೆ. ಯೋಜನೆ ೧೯೬೮ರಲ್ಲಿಯೇ ಅಸ್ತಿತ್ವಕ್ಕೆ ಬಂದರೂ, ಗ್ರಂಥಗಳ ಪ್ರಕಟಣೆಯಲ್ಲಿ ತೀವ್ರ ವಿಳಂಬವಾಯಿತು. ಅಗತ್ಯವಾದ ಸಾಮಗ್ರಿಯ ಸಂಪಾದನೆಯಲ್ಲಿಯೇ ಆರಂಭದ ಕೆಲವು ವರ್ಷಗಳು ಕಳೆದುವು. ಮೂಲ ಯೋಜನೆಯಂತೆ ಹೆಚ್ಚು ಕೆಲಸಗಾರರನ್ನು ನೇಮಿಸಿಕೊಳ್ಳುವುದು ಸಾಧ್ಯವಾಗಲಿಲ್ಲ. ಈ ಪರಿಸ್ಥಿತಿಯೇ ವಿಳಂಬಕ್ಕೆ ಕಾರಣ.

ಯೋಜನೆಯ ಆರಂಭದಿಂದಲೂ ಇಬ್ಬರು ಸಂಶೋಧನ ಸಹಾಯಕರು, ಒಬ್ಬರು ಪ್ರತಿಕಾರರು ಕೆಲಸ ಮಾಡುತ್ತಾ ಬಂದಿದ್ದಾರೆ. ಇಷ್ಟರವರೆಗೆ ಕೀರ್ತನೆಗಳ ಸುಮಾರು ೨೮,೦೦೦ ಸೂಚಿಕಪಟ್ಟಿಕೆಗಳನ್ನು ಸಿದ್ಧಪಡಿಸಿ ಅವುಗಳನ್ನು ಅಕಾರಾದಿಯಾಗಿ ಜೋಡಿಸಿಡಲಾಗಿದೆ. ಕನ್ನಡನಾಡಿನ ಬೇರೆ ಬೇರೆ ಭಾಗಗಳಲ್ಲಿ ಸಂಚರಿಸಿ ಸುಮಾರು ೩೦೮ ಅಮೂಲ್ಯ ಹಸ್ತಪ್ರತಿಗಳನ್ನು ಸಂಗ್ರಹಿಸಲಾಗಿದೆ. ವಿವಿಧ ಭಾಗಗಳಲ್ಲಿ ಜನರು ಕೀರ್ತನೆಗಳನ್ನು ಹಾಡುವ ಸಂಪ್ರದಾಯವನ್ನು ಈಗಲೂ ಹೇಗೆ ಉಳಿಸಿಕೊಂಡು ಬಂದಿದ್ದಾರೆಂಬುದನ್ನು ಅಧ್ಯಯನ ಮಾಡಲು ನೂರಾರು ಕೀರ್ತನೆಗಳನ್ನು ಧ್ವನಿ ಮುದ್ರಿಸಿಕೊಳ್ಳಲಾಗಿದೆ. ಈ ಚಟುವಟಿಕೆಗಳ ಫಲವಾಗಿ ಈಗ ಕನ್ನಡ ಅಧ್ಯಯನ ಸಂಸ್ಥೆ ಹರಿದಾಸ ಸಾಹಿತ್ಯದ ಅದ್ವಿತೀಯ ಭಂಡಾರವಾಗಿದೆ.

ಹರಿದಾಸ ಸಾಹಿತ್ಯದ ಶಾಸ್ತ್ರೀಯ ಆವೃತ್ತಿಯ ಯೋಜನೆಗೆ ಅನುಸಾರವಾಗಿ ಹರಿದಾಸರಲ್ಲಿ ಮೊದಲಿಗರಾದ ಶ್ರೀಪಾದರಾಜರ ಕೀರ್ತನೆಗಳ ಸಂಪುಟ ೧೯೭೩ರಲ್ಲಿಯೂ ಶ್ರೀ ಮಹಿಪತಿರಾಯರ ಕೀರ್ತನೆಗಳ ಸಂಪುಟ ೧೯೭೭ರಲ್ಲಿಯೂ, ಶ್ರೀ ಗೋಪಾಲದಾಸರ ಕೀರ್ತನೆಗಳ ಸಂಪುಟ ೧೯೭೭ರಲ್ಲಿಯೂ ಪ್ರಕಟವಾದವು. ಶ್ರೀಪಾದರಾಜರ ಕೃತಿಗಳ ಬಿಡುಗಡೆಯ ಸಂದರ್ಭದಲ್ಲಿ ನಡೆದ ಹರಿದಾಸ ಸಾಹಿತ್ಯಕ್ಕೆ ಸಂಬಂಧಿಸಿದ ವಿಚಾರಗೋಷ್ಠಿಯಲ್ಲಿ ವಿವಿಧ ವಿದ್ವಾಂಸರು ಮಂಡಿಸಿದ ಪ್ರಬಂಧಗಳನ್ನು ಸಂಕಲಿಸಿ 'ಹರಿದಾಸ ಸಾಹಿತ್ಯ ಸಮೀಕ್ಷೆ' ಎಂಬ ಹೆಸರಿನಿಂದ ೧೯೮೦ರಲ್ಲಿ ಪ್ರಕಟಿಸಲಾಯಿತು. ಶ್ರೀ ವಾದಿರಾಜರ ಕೀರ್ತನೆಗಳ ಸಂಪುಟವೂ ೧೯೮೦ರಲ್ಲಿ ಪ್ರಕಟವಾಯಿತು. ಹರಪನಹಳ್ಳಿ ಭೀಮವ್ವನ ಹಾಡುಗಳ ಸಂಗ್ರಹ ೧೯೮೪ರಲ್ಲಿ ಪ್ರಕಟವಾಯಿತು. ಈಗ ಪ್ರಸ್ತುತ ಮಾಲೆಯಲ್ಲಿ ಒಟ್ಟು ೧೫ ಪುಸ್ತಕಗಳು ಒಟ್ಟಿಗೇ ಪ್ರಕಟವಾಗುತ್ತಿವೆ. ಅವುಗಳಲ್ಲಿ :

೧. ಶ್ರೀ ಜಗನ್ನಾಥದಾಸರ ಕೃತಿಗಳು
೨. ಶ್ರೀ ವಾದಿರಾಜರ ದೀರ್ಘಕೃತಿಗಳು
೩. ಶ್ರೀ ಪ್ರಸನ್ನವೆಂಕಟದಾಸರ ಕೃತಿಗಳು
೪. ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು
೫. ಶ್ರೀ ರಾಮದಾಸರ ಕೃತಿಗಳು
೬. ಶ್ರೀ ಪ್ರಸನ್ನವೆಂಕಟದಾಸರ ಭಾಗವತ

—ಈ ಆರು ಪುಸ್ತಕಗಳೂ ಮೊದಲ ಬಾರಿಗೆ ಪ್ರಕಟವಾಗುತ್ತಿವೆ.

ನಾವು ಒಟ್ಟು ಯೋಜನೆಗೇ ಇಟ್ಟುಕೊಂಡ ಕ್ರಮದಂತೆ "ಶ್ರೀ ಜಗನ್ನಾಥದಾಸರ ಕೃತಿಗಳು", "ಶ್ರೀ ಪ್ರಸನ್ನವೆಂಕಟದಾಸರ ಕೃತಿಗಳು", "ಶ್ರೀ ವಾದಿರಾಜರ ದೀರ್ಘ ಕೃತಿಗಳು" ಹಾಗೂ "ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು"—ಈ ಸಂಪುಟಗಳು ಎರಡೆರಡು ಆವೃತ್ತಿಗಳಲ್ಲಿ ಪ್ರಕಟವಾಗುತ್ತಿವೆ. ಒಂದು ಪಂಡಿತ ಆವೃತ್ತಿ: ಇನ್ನೊಂದು ಜನಪ್ರಿಯ ಆವೃತ್ತಿ. ಜನಪ್ರಿಯ ಆವೃತ್ತಿಯಲ್ಲಿ ಮೊದಲನೆಯದರ ಪಾಂಡಿತ್ಯಪರಿಕರಗಳು ಇರುವುದಿಲ್ಲ. ಸಂಕ್ಷಿಪ್ತ ಪ್ರಸ್ತಾವನೆ ಹಾಗೂ ಕೀರ್ತನೆಗಳ ಪಠ್ಯಭಾಗ ಮಾತ್ರ ಇರುತ್ತದೆ. ಕಡಿಮೆ ಬೆಲೆಯಲ್ಲಿ ಈ ಸಾಹಿತ್ಯದ ಶುದ್ಧ ಆವೃತ್ತಿ ಹೆಚ್ಚು ಜನರ ಕೈಸೇರಬೇಕೆಂಬುದು ಈ ಯೋಜನೆಯ ಒಂದು ಮುಖ್ಯ ಉದ್ದೇಶ. ಆದರೆ ಮಹಿಪತಿರಾಯರ ಕೃತಿಗಳು, ಹರಪನಹಳ್ಳಿ ಭೀಮವ್ವನ ಹಾಡುಗಳ ಸಂಪುಟಗಳಂತೆಯೇ ಶ್ರೀ ರಾಮದಾಸರ ಕೃತಿಗಳು ಹಾಗೂ ಶ್ರೀ ಪ್ರಸನ್ನವೆಂಕಟದಾಸರ ಭಾಗವತಗಳ ಪ್ರಕಟಣೆಯಲ್ಲೂ ಎರಡು ಆವೃತ್ತಿಗಳ ಅಗತ್ಯ ಕಾಣಿಸದಿದ್ದುದರಿಂದ ಅವುಗಳ ಒಂದೊಂದೇ ಆವೃತ್ತಿಯನ್ನು ಪ್ರಕಟಿಸಲಾಗಿದೆ. ಡಾ. ಜಿ ವರದರಾಜರಾಯರು, ಕನ್ನಡ ಅಧ್ಯಯನ ಸಂಸ್ಥೆಯಲ್ಲಿ, ವಿಶ್ವವಿದ್ಯಾನಿಲಯ ಧನಸಹಾಯ ಆಯೋಗದ ವತಿಯಿಂದ ಸಂಶೋಧಕರಾಗಿದ್ದು ಆ ಅವಧಿಯಲ್ಲಿ ಸಿದ್ಧಪಡಿಸಿದ ಸಂಶೋಧನ ಪ್ರಬಂಧ ಈಗ 'ಹರಿದಾಸಸಾಹಿತ್ಯಸಾರ' ಎಂಬ ಪುಸ್ತಕದ ರೂಪದಲ್ಲಿ ಪ್ರಕಟವಾಗುತ್ತಿದೆ.

ಇವುಗಳೊಂದಿಗೆ 'ಶ್ರೀಪಾದರಾಜರ ಕೃತಿಗಳು' (ಸಂ. ಡಾ. ಜಿ. ವರದರಾಜ ರಾವ್) ಎರಡು ಆವೃತ್ತಿಗಳಲ್ಲಿಯೂ, 'ಶ್ರೀ ಗೋಪಾಲದಾಸರ ಕೃತಿಗಳು' (ಸಂ. ಡಾ. ಟಿ. ಎನ್. ನಾಗರತ್ನ) ಜನಪ್ರಿಯ ಆವೃತ್ತಿಯೂ ಮರುಮುದ್ರಣವಾಗುತ್ತಿರುವುದು ಸಂತಸದ ಸಂಗತಿ. ಅಂತೆಯೇ ೧೯೮೦ರಲ್ಲಿ ಪ್ರಕಟವಾಗಿದ್ದ 'ಹರಿದಾಸ ಸಾಹಿತ್ಯ ಸಮೀಕ್ಷೆ'- ಪ್ರಬಂಧಗಳ ಸಂಕಲನವೂ ಪುನರ್ಮುದ್ರಣವಾಗುತ್ತಿರುವುದು ಹರಿದಾಸರ 'ಪವಾಡ'ಗಳಿಗೆ ಸಾಕ್ಷಿ. ಈ ಎಲ್ಲ ಹೊತ್ತಗೆಗಳೂ ಹರಿದಾಸ ಸಾಹಿತ್ಯದ ಕೆಲವೇ ಮಂದಿ ಹಿರಿಯ ವಿದ್ವಾಂಸರಲ್ಲಿ ಒಬ್ಬರಾದ ಡಾ. ಜಿ. ವರದರಾಜರಾಯರ ಸಲಹೆ ಸೂಚನೆಗಳ ಮೇರೆಗೆ ಡಾ. ಟಿ. ಎನ್. ನಾಗರತ್ನರವರ ನೇತೃತ್ವದಲ್ಲಿ ಪ್ರಕಟವಾಗುತ್ತಿವೆ.

ಪ್ರಸ್ತುತ ಪ್ರಕಟಣೆಗಳಲ್ಲಿ 'ಶ್ರೀ ಪ್ರಸನ್ನವೆಂಕಟದಾಸರ ಭಾಗವತ' ವನ್ನು ಹರಿದಾಸ ಸಾಹಿತ್ಯ ಸಂಶೋಧನೆಯ ಯೋಜನೆಯಲ್ಲಿ ಸಂಶೋಧನ ಸಹಾಯಕರಾಗಿರುವ ಶ್ರೀಮತಿ ಟಿ. ಕೆ. ಇಂದುಬಾಯಿಯವರು ಸಂಪಾದಿಸಿ ಶ್ರೀ ಪ್ರಸನ್ನವೆಂಕಟದಾಸರ ಜೀವನ ಕೃತಿಗಳನ್ನು ಕುರಿತ ಪ್ರಸ್ತಾವನೆಯನ್ನು ಬರೆದಿದ್ದಾರೆ. ಈ ಕೃತಿಯನ್ನು ಏಕೈಕ ಪ್ರತಿ (ಮಂ. ೩೨)ಯಿಂದ ಸಂಪಾದಿಸಲಾಗಿದೆ.

ಯೋಜನೆ ಅಸ್ತಿತ್ವಕ್ಕೆ ಬಂದಂದಿನಿಂದ ಕನ್ನಡ ನಾಡಿನ ಉದ್ದಗಲಗಳಲ್ಲಿ ಅನೇಕ ಜನ ನಮಗೆ ಪರಿಚಯವಿರುವವರು ಇಲ್ಲದವರು ನಾನಾ ಬಗೆಯಾದ ನೆರವು ನೀಡಿದ್ದಾರೆ. ಅವರೆಲ್ಲರನ್ನೂ ಪ್ರತ್ಯೇಕವಾಗಿ ಹೆಸರಿಸುವುದು ಅಸಾಧ್ಯ. ವಿಶ್ವವಿದ್ಯಾನಿಲಯ ಧನ ಸಹಾಯ ಆಯೋಗದವರು ಯೋಜನೆಯನ್ನು ಒಪ್ಪಿ ಧನ ಸಹಾಯ ಮಾಡಿದ್ದಾರೆ. ಅಂತೆಯೇ ಮೈಸೂರು ವಿಶ್ವವಿದ್ಯಾನಿಲಯವೂ ಈ ಯೋಜನೆಯ ಬಗೆಗೆ ಆಸಕ್ತಿ ತೋರಿ ನೆರವು ನೀಡಿದೆ. ಎಲ್ಲಕ್ಕಿಂತ ಹೆಚ್ಚಾಗಿ ಹರಿದಾಸ ಸಾಹಿತ್ಯ ಮಾಲೆಯ ಪುಸ್ತಕಗಳ ಪ್ರಕಟಣೆಗಾಗಿ ಕರ್ನಾಟಕದ ಘನಸರ್ಕಾರ ೧೯೮೭-೮೭ನೆಯ ಸಾಲಿಗೆ ಮೂರು ಲಕ್ಷ ರೂಪಾಯಿಗಳನ್ನು ಮಂಜೂರುಮಾಡಿದೆ. ಶ್ರೀ ಪ್ರಧಾನ್ ಗುರುದತ್ತ ಪ್ರಕಟಣೆಯ ಮೇಲ್ವಿಚಾರಣೆ ನೋಡಿಕೊಂಡಿದ್ದಾರೆ. ಶ್ರೀಮತಿ ನಗುವನಹಳ್ಳಿ ಪಿ. ರತ್ನ ಕರಡಚ್ಚುಗಳನ್ನು ತಿದ್ದುವುದರಲ್ಲಿ ನೆರವಾಗಿದ್ದಾರೆ. ಅತ್ಯಂತ ಕಡಿಮೆ ಸಮಯದಲ್ಲಿ ಗುರುತರವಾದ ಹೊಣೆ ವಹಿಸಿ ಮುದ್ರಣ ಕಾರ್ಯವನ್ನು ನಿರ್ವಹಿಸಿರುವ 'ಮಿತ್ರ ಪ್ರಿಂಟರ್ಸ್'ನ ಮಾಲೀಕರಿಗೂ ಸಿಬ್ಬಂದಿವರ್ಗದವರಿಗೂ ನಮ್ಮ ಅನಂತ ವಂದನೆಗಳು.

ಹರಿದಾಸ ಸಾಹಿತ್ಯದ ಶಾಸ್ತ್ರೀಯ ಆವೃತ್ತಿಯ ಯೋಜನೆಯನ್ನು ಇನ್ನೂ ಉತ್ತಮಪಡಿಸಲು ಹೆಚ್ಚು ಹೆಚ್ಚು ಉಪಯುಕ್ತಗೊಳಿಸಲು ಬರುವ ಎಲ್ಲ ಸಲಹೆ ಸೂಚನೆಗಳನ್ನು ಕೃತಜ್ಞತೆಯಿಂದ ಸ್ವಾಗತಿಸಲಾಗುವುದು.

ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ
ಏಪ್ರಿಲ್ ೨೫, ೧೯೮೭

ಎಚ್. ತಿಪ್ಪೇರುದ್ರಸ್ವಾಮಿ
ಪ್ರಧಾನ ಸಂಪಾದಕ

# ಪರಿವಿಡಿ


| | ಪುಟ |
|---|---|
| ಮುನ್ನುಡಿ | v |
| ಮುಖ್ಯ ಸಂಕೇತಗಳ ವಿವರ | x |
| ಪೀಠಿಕೆ | xiii |
| ಕೀರ್ತನೆಗಳ ಕ್ರಮಸೂಚಿಕೆ | lxiii |
| ಶ್ರೀ ಪ್ರಸನ್ನವೆಂಕಟದಾಸರ ಭಾಗವತ | ೧ |
| ಅನುಬಂಧ ೧–ಪೂರ್ವಕಥೆಗಳು ಮತ್ತು ಟಿಪ್ಪಣಿಗಳು | ೧೪೫ |
| ಅನುಬಂಧ ೨–ಕಠಿಣ ಶಬ್ದಗಳ ಅರ್ಥ | ೧೫೭ |
| ಅನುಬಂಧ ೩ -ಶಬ್ದಸೂಚಿಗಳು | ೧೬೬ |
| ಅನುಬಂಧ ೪–ಕೀರ್ತನೆಗಳ ಅಕಾರಾದಿ ಸೂಚಿ | ೧೬೮ |
| ಸಹಾಯಕ ಸಾಹಿತ್ಯ | ೧೭೧ |

# ಮುಖ್ಯ ಸಂಕೇತಗಳ ವಿವರ

| ಸಂಕೇತಗಳು | ಮೂಲ |
|---|---|
| ಅ. | ಅಧ್ಯಾಯ |
| ಅ.ಪ. | ಅನುಪಲ್ಲವಿ |
| ಕೀ. | ಕೀರ್ತನೆ |
| ನು. | ನುಡಿ |
| ಪ. | ಪಲ್ಲವಿ |
| ಪ್ರ. ಭಾ. | ಪ್ರಸನ್ನವೆಂಕಟದಾಸರ ಭಾಗವತ |
| ಪು. | ಪುಟ |
| ಪುನಾಚೂ. | ಪುರಾಣನಾಮಚೂಡಾಮಣಿ |
| ಪುಭಾಕೋ. | ಪುರಾಣಭಾರತಕೋಶ |
| ಭಾ. | ಭಾಗವತ |
| ಮೂ.ಭಾ. | ಮೂಲ ಭಾಗವತ |
| ಶ್ರೀಜ. | ಶ್ರೀ ಜಗನ್ನಾಥದಾಸರು, ಟಿ. ಕೆ. ವೇಣುಗೋಪಾಲದಾಸರು. |
| ಸಂ. | ಸಂಪಾದಕರು |
| ಸ್ಕಂ. | ಸ್ಕಂಧ |

# ಪೀಠಿಕೆ

## ಶ್ರೀ ಪ್ರಸನ್ನವೆಂಕಟದಾಸರ ಜೀವನ ವಿಚಾರ

ಪ್ರಸನ್ನವೆಂಕಟದಾಸರು ಪ್ರಸಿದ್ಧ ಹರಿದಾಸರಲ್ಲೊಬ್ಬರು. ಇವರು ವಿಜಯದಾಸರ ಸಮಕಾಲೀನರು. ಇವರ ಜನನಕಾಲ ಖಚಿತವಾಗಿ ತಿಳಿಯದಿದ್ದರೂ, ದೊರೆತ ಕೆಲವು ಆಧಾರಗಳಿಂದ ಇವರ ಜೀವಿತಕಾಲ ಕ್ರಿ.ಶ.ಸು. ೧೬೮೦–೧೭೫೨ ಎಂದು ಭಾವಿಸಲಾಗಿದೆ. ಕಾಖಂಡಕಿ ನರಸಪ್ಪಯ್ಯನವರು ಇವರ ತಂದೆ. ತಾಯಿ ಲಕ್ಷ್ಮೀಬಾಯಿ. ವೆಂಕಟೇಶ ಎನ್ನುವುದು ಇವರ ಜನ್ಮನಾಮ. ಇವರಿಗೆ ಒಬ್ಬ ಅಣ್ಣ ಇದ್ದರೆಂದು ತಿಳಿದುಬರುತ್ತದೆ. ಚಿಕ್ಕಂದಿನಲ್ಲೇ ಹೆತ್ತವರನ್ನು ಕಳೆದುಕೊಂಡ ಇವರು ಅಣ್ಣನ ಆಶ್ರಯದಲ್ಲಿದ್ದರು. ಅಣ್ಣನಿಗೆ ವಿವಾಹವಾಗಿತ್ತು. ಅತ್ತಿಗೆಗೆ ಇವರ ಬಗ್ಗೆ ಅಂಥ ಪ್ರೀತ್ಯಾದರಗಳೇನೂ ಇರಲಿಲ್ಲ. ಹಿರಿಯರ ಉಪೇಕ್ಷೆಗೊಳಗಾದ ಇವರಿಗೆ ಬಾಲ್ಯದಲ್ಲಿ ವಿದ್ಯಾಭ್ಯಾಸವೂ ಸರಿಯಾಗಿ ನಡೆಯಲಿಲ್ಲ. ಪುರಾಣವಾಚನ ಮಾಡುತ್ತಿದ್ದ ಇವರ ಅಣ್ಣ ಸುತ್ತಿನ ಹಳ್ಳಿಗಳಲ್ಲೆಲ್ಲ ಜನಪ್ರಿಯ ವ್ಯಕ್ತಿಯಾಗಿದ್ದರು. ಆದರೆ ಇವರ ದಿನಚರಿ ದನಗಳನ್ನು ಮೇಯಿಸುವುದರಲ್ಲಿ, ಅತ್ತಿಗೆಗೆ ಮನೆಗೆಲಸಗಳನ್ನು ಮಾಡಿಕೊಡುವುದರಲ್ಲಿ ಸಾಗುತ್ತಿತ್ತು.

ಹೀಗೆಯೇ ಇವರ ಬದುಕು ಸಾಗುತ್ತಿದ್ದಾಗ ಒಂದು ದಿನ ಅತ್ತಿಗೆಯ ನಿಷ್ಠುರ ಮಾತುಗಳಿಗೆ ನೊಂದು ಮನೆಯನ್ನು ಬಿಟ್ಟು ತಿರುಪತಿಗೆ ಹೋಗುತ್ತಾರೆ. ಅಲ್ಲಿ ಹರಿದಾಸರ ಪ್ರೇರಣೆ ಹಾಗೂ ವೆಂಕಟೇಶನ ಅನುಗ್ರಹದಿಂದ ತಾವೂ ಹರಿದಾಸರಾಗಿ ಮಾರ್ಪಡುತ್ತಾರೆ. ಕೆಲವು ಕಾಲ ತಿರುಪತಿಯಲ್ಲೇ ಇದ್ದ ಇವರು ನಂತರದಲ್ಲಿ ಗುರುಗಳ ಶೋಧನೆಗೆ ತೊಡಗುತ್ತಾರೆ. ಮುದ್ಗಲ ಜನಾರ್ದನಾಚಾರ್ಯ ಎಂಬುವರ ಶಿಷ್ಯರಾಗಿ ಸಂಸ್ಕೃತ, ಭಾರತ, ಭಾಗವತ, ಪುರಾಣ, ದ್ವೈತಸಿದ್ಧಾಂತಗಳಲ್ಲಿ ಪಾಂಡಿತ್ಯವನ್ನು ಗಳಿಸಿ ಬಾಗಲಕೋಟೆಗೆ ಮರಳಿ ಬರುತ್ತಾರೆ. ಹೀಗೆ ಊರಿಗೆ ಮರಳಿದ ನಂತರ ಹರಿಭಕ್ತಿಪ್ರಚಾರವನ್ನು ಕೈಗೊಂಡು, ಅನೇಕ ಕೃತಿಗಳನ್ನು ರಚಿಸಿ ಪ್ರಸನ್ನವೆಂಕಟದಾಸರೆಂದು ಪ್ರಸಿದ್ಧರಾಗುತ್ತಾರೆ. ಇವರಿಗೆ ವಿವಾಹವಾಗಿ ವೆಂಕಟಕೃಷ್ಣಾಚಾರ್ಯ ಎಂಬ ಮಗನಿದ್ದುದಾಗಿ ತಿಳಿದುಬರುತ್ತದಾದರೂ ವಿವಾಹ ಆದದ್ದು ಯಾವಾಗ, ಹೆಂಡತಿಯ ಹೆಸರೇನು ಎನ್ನುವುದು ತಿಳಿಯುವುದಿಲ್ಲ.ಬಾದಾಮಿಯಲ್ಲಿರುವ 'ಶ್ರೀ ಪ್ರಸನ್ನವೆಂಕಟರ ಕಟ್ಟೆ' ಯನ್ನು ಇವರ ಮರಿಮಕ್ಕಳಾದ ಅಣ್ಣಯ್ಯಾಚಾರ್ಯರು ಕಟ್ಟಿಸಿದರೆಂದು ತಿಳಿದುಬರುತ್ತದೆ. ಪ್ರತಿ ಭಾದ್ರಪದ ಶುದ್ಧ ದ್ವಾದಶಿಯಂದು ಇವರ ಪುಣ್ಯತಿಥಿಯನ್ನು ಆಚರಿಸಲಾಗುತ್ತದೆ.

## ಕೃತಿಗಳ ಸಮೀಕ್ಷೆ

ಹರಿಭಕ್ತರೂ ಉಭಯಭಾಷಾ ಪಂಡಿತರೂ ಆಗಿದ್ದ ಪ್ರಸನ್ನವೆಂಕಟರು 'ಪ್ರಸನ್ವೆಂಕಟ' ಎಂಬ ಅಂಕಿತದಲ್ಲಿ ಅನೇಕ ಕೃತಿಗಳನ್ನು ರಚಿಸಿದ್ದಾರೆ. ಇದುವರೆಗೆ ಅವರ

೪೫೦ ಕೃತಿಗಳು ಸಿಕ್ಕಿವೆ. ಅವುಗಳಲ್ಲಿ ೨೬೮ ಕೃತಿಗಳನ್ನು ನಿಸ್ಸಂದಿಗ್ಧವಾಗಿ ಇವರವೆಂದು ಭಾವಿಸಬಹುದಾಗಿದೆ. ೧೩೫ ಕೃತಿಗಳು ಏಕೈಕ ಆಕರದಲ್ಲಿ ಸಿಕ್ಕಿವೆ. ಅಂಕಿತ ಸಂದಿಗ್ಧತೆಯಲ್ಲಿ ೪೬ ಕೃತಿಗಳಿವೆ. ಇವುಗಳಲ್ಲಿ ಏಳು ಉಗಾಭೋಗಗಳೂ, ಹತ್ತು ಸುಳಾದಿಗಳೂ, ಐದು ದೀರ್ಘಕೃತಿಗಳೂ ಇವೆ. ಐದು ದೀರ್ಘಕೃತಿಗಳ ಹೆಸರುಗಳು ಹೀಗಿವೆ.–(೧) ನಾರದ ಕೊರವಂಜಿ (೨) ನಾರಾಯಣ ಪಂಜರ (೩) ಪ್ರಸನ್ನವೆಂಕಟರ ಭಾಗವತ (೪) ಶ್ರೀಕೃಷ್ಣ ಪಾರಿಜಾತ (೫) ಸಮಸ್ತ ನಾಮಮಣಿಗಣ ಷಟ್ಚರಣ ಪದ್ಯಮಾಲಾ. ಇವುಗಳಲ್ಲದೆ ಇನ್ನೂ ಅನೇಕ ಗ್ರಂಥಗಳನ್ನು ಇವರು ಬರೆದಿರುವರೆಂಬುದಕ್ಕೆ ಸಾಕ್ಷ್ಯ ಸಿಕ್ಕುತ್ತದಾದರೂ ಆ ಕೃತಿಗಳು ಸಿಕ್ಕಿಲ್ಲ. (ಹೆಚ್ಚಿನ ವಿವರಗಳಿಗೆ ನೋಡಿ : ಪೀಠಿಕೆ, ಶ್ರೀ ಪ್ರಸನ್ನವೆಂಕಟದಾಸರ ಕೃತಿಗಳು, ಸಂ. ಟಿ. ಕೆ. ಇಂದುಬಾಯಿ)

ಶ್ರೀ 'ಪ್ರಸನ್ನವೆಂಕಟರ ಭಾಗವತ' ವೆಂದು ಪ್ರಸಿದ್ಧವಾಗಿರುವ ಈ ಕೃತಿ, ಸಂಸ್ಕೃತದ ಭಾಗವತ ದಶಮಸ್ಕಂಧದ ಪೂರ್ವಾರ್ಧವನ್ನು ಆಧರಿಸಿ ರಚಿತವಾಗಿರುವ ೬೭ ಬಿಡಿ ಕೀರ್ತನೆಗಳ ಗುಚ್ಛವಾಗಿದೆ. ಸಂಸ್ಕೃತದಲ್ಲಿರುವ ಮೂಲ ಭಾಗವತದ ದಶಮಸ್ಕಂಧ ಪೂರ್ವಾರ್ಧದಲ್ಲಿ ೪೯ ಅಧ್ಯಾಯಗಳಿವೆ. ಅವರಲ್ಲಿ ಕೃಷ್ಣನ ಜನನದ ಕಾರಣದಿಂದ ಮೊದಲಾಗಿ ಕೃಷ್ಣನ ಜನನ, ಗೋಕುಲದಲ್ಲಿ ಅವನು ಬೆಳೆದದ್ದು, ಕೃಷ್ಣನನ್ನು ಕೊಲ್ಲಲು ಕಂಸ ಮಾಡುವ ವ್ಯರ್ಥ ಪ್ರಯತ್ನಗಳು, ಕೃಷ್ಣನಿಂದ ಕಂಸವಧೆ, ಕೊನೆಗೆ ಕೃಷ್ಣನ ಮಾತಿನಂತೆ ಅಕ್ರೂರ ಹಸ್ತಿನಾವತಿಗೆ ಹೋಗಿ ಪಾಂಡವರ ಸ್ಥಿತಿಗತಿಯನ್ನು ವಿಚಾರಿಸಿಕೊಂಡು ಬರುವವರೆಗಿನ ವಿಸ್ತಾರವಾದ ಕಥೆ ಬರುತ್ತದೆ. ಈ ಕೃಷ್ಣಕಥೆಯನ್ನು ಶುಕಮುನಿ ಪರೀಕ್ಷಿತನ ಕೇಳಿಕೆಯ ಮೇರೆಗೆ ಹೇಳುತ್ತಾನೆ.ಇದೇ ಕಥೆಯನ್ನು ಪ್ರಸನ್ನವೆಂಕಟದಾಸರು ತಮ್ಮ ಹರಿಭಕ್ತಿಗೆ ವಾಹಕವನ್ನಾಗಿಸಿ ೬೭ ಬಿಡಿ ಕೀರ್ತನೆಗಳಲ್ಲಿ ಅಭಿವ್ಯಕ್ತಿಸಿದ್ದಾರೆ. ಇವು ಬಿಡಿ ಕೀರ್ತನೆಗಳ ರೂಪದಲ್ಲಿದ್ದರೂ ಒಟ್ಟಾಗಿ ಸಂಸ್ಕೃತ ಭಾಗವತವನ್ನು ಆಧರಿಸಿ ಬಂದಿರುವುದರಿಂದ ಇವುಗಳನ್ನು ದಾಸರ ಹೆಸರಿನೊಂದಿಗೆ "ದಾಸವರ್ಯ ಶ್ರೀ ಪ್ರಸನ್ನವೆಂಕಟರ ಭಾಗವತ" ಎಂದು ಕರೆದು ಈ ಮೊದಲೇ ಪ್ರಕಟಿಸಲಾಗಿದೆ. ಪ್ರಸ್ತುತ ಪ್ರಸನ್ನವೆಂಕಟರ ಭಾಗವತಕ್ಕೂ ಮೂಲ ಭಾಗವತಕ್ಕೂ ಇರುವ ಸಾಮ್ಯ ವೈಷಮ್ಯಗಳನ್ನು ಪರಿಶೀಲಿಸುವ ಮೂಲಕ ಪ್ರಸನ್ನವೆಂಕಟರ ಭಾಗವತದ ಈ ಕೀರ್ತನೆಗಳ ವೈಶಿಷ್ಟ್ಯವನ್ನು ಗುರುತಿಸಬಹುದಾಗಿದೆ.

ಅಧ್ಯಾಯ ೧, ಶ್ಲೋಕ ೧-೧೬ರಲ್ಲಿ ಪರೀಕ್ಷಿತರಾಜನು ಶುಕಮುನಿಯನ್ನು ಕುರಿತು, 'ಮುನಿಶ್ರೇಷ್ಠನೆ, ಸೂರ್ಯಚಂದ್ರರ ವಂಶವಿಸ್ತಾರವನ್ನು ತಿಳಿಸಿರುವೆ. ಪರಮ ಧಾರ್ಮಿಕನಾದ ಯದುರಾಜನ ಚರಿತ್ರೆಯನ್ನು ತಿಳಿಸಿರುವೆ. ಭಗವಂತನು ಆ ಯದುವಂಶದಲ್ಲಿ ಅವತರಿಸಿ ನಡೆಸಿದ ಲೋಕಾದ್ಭುತ ಕಾರ್ಯಗಳನ್ನು ಸವಿಸ್ತಾರವಾಗಿ ಹೇಳಬೇಕು' ಎಂದು ಕೇಳಿದಾಗ ಶುಕಮುನಿ ಕೃಷ್ಣನ ಚರಿತ್ರೆಯನ್ನು ಹೇಳಲು ಪ್ರಾರಂಭಿಸುತ್ತಾನೆ. ಮೂಲದ ಈ ಭಾಗ ಪ್ರಸನ್ನವೆಂಕಟರ ಭಾಗವತದಲ್ಲಿ ೨ ನೆಯ ಕೀರ್ತನೆಯಲ್ಲಿ ತುಂಬ ಸಂಕ್ಷಿಪ್ತವಾಗಿ ಬರುತ್ತದೆ. ಮೂಲದಲ್ಲಿ ಪರೀಕ್ಷಿತ ಮಹಾರಾಜನ ಮಾತುಗಳಲ್ಲಿ ಬರುವ ಹರಿಮಹಿಮೆಯ ವರ್ಣನೆ ಇಲ್ಲಿ ದಾಸರಿಂದಲೇ ನೇರವಾಗಿ ಬರುತ್ತದೆ. ಮೊದಲ ಕೀರ್ತ

ನೆಯೂ ಪೂರ್ಣವಾಗಿ ಹರಿಸ್ತುತಿಯಾಗಿದೆ. ಭಾಷೆ ಸಂಸ್ಕೃತಮಯವೂ ಪ್ರೌಢವೂ ಆಗಿದೆ. "ವೇದಗರ್ಭನುತ ಶ್ರೀಪಾದಾಬ್ಜಯುಗ್ಮ ಜಯ, ಗೋಸಮೂಹ ದ್ವಿಜದೇವದ್ವೇಷಿ ಕುಲಹರಣ ಜಯ"–ಇತ್ಯಾದಿ ಸಾಲುಗಳು ದಾಸರ ಸಂಸ್ಕೃತಭಾಷಾಪಾಂಡಿತ್ಯಕ್ಕೆ ಕನ್ನಡಿ ಹಿಡಿಯುತ್ತವೆ. ಹರಿಸ್ತುತಿ ಬರುವಲ್ಲೆಲ್ಲ ಈ ಅಂಶ ಸಾಮಾನ್ಯವಾಗಿ ಕಾಣಸುತ್ತದೆ.

ಹರಿಯನ್ನು ಕುರಿತ ಭಾವ ಒಟ್ಟಿನಲ್ಲಿ ಮೂಲಕ್ಕೆ ಭಿನ್ನವಲ್ಲದಿದ್ದರೂ ವಿವರಗಳಲ್ಲಿ ವ್ಯತ್ಯಾಸವಿದೆ. ಕೀ.೧ ಮತ್ತು ೨ ರ ಸ್ತುತಿಯ ಮಾತುಗಳಿಗೂ ಮೂಲ ಭಾಗವತದ ಪರೀಕ್ಷಿತನ ಮಾತುಗಳಿಗೂ ಇರುವ ವ್ಯತ್ಯಾಸದಲ್ಲಿ ಈ ಅಂತರವನ್ನು ಕಾಣಬಹುದಾಗಿದೆ. ಕೀ. ೨ರ ಪಲ್ಲವಿಯಾಗಿ ಬರುವ,

ಶ್ರೋತವ್ಯವು ಇದೆ ಮಂತ್ರವ್ಯವು ಇದೆ ಧಾತವ್ಯವು ನಮಗೆ
ಪೂತವು ಹರಿಗುಣಗಾಥೆಯು ಮುಕುತಿಯ ಪಾಥೇಯವು ನಮಗೆ

ಎಂಬ ಎರಡು ಸಾಲುಗಳಲ್ಲಿ ಈ ಹರಿಕಥೆಯ ಬಗ್ಗೆ ದಾಸರಿಗಿರುವ ಅಪಾರವಾದ ಗೌರವಾದರಗಳು ವ್ಯಕ್ತವಾಗಿದ್ದು ಅದು ಮುಂದಿನ ಕೀರ್ತನೆಗಳಲ್ಲೂ ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತದೆ. ವ್ಯಾಸಕುಮಾರ ಪರೀಕ್ಷಿತನಿಗೆ ಹೇಳಿದ ಈ ಮುರಾರಿಯ ಚರಿತೆ ಎಷ್ಟು ಮಹಿಮಾನ್ವಿತವಾದದ್ದು ಎನ್ನುವುದನ್ನು ಕೀ. ೨ ರ ನು. ೧ ಮತ್ತು ೨ ರಲ್ಲಿ ಬಣ್ಣಿಸಿ, ನು. ೩ ರಲ್ಲಿ ಗುರುಗಳಿಗೆರಗಿ,

ಎಣಿಸದಲೆನ್ನಯ ನುಡಿತಪ್ಪುಗಳನು ಮನುಜೋತ್ತಮ ಮಾಪ್ಪರು
ಕನಡುಕ್ತಿಗಳಿವು ಎನ್ನದೆ ಕೇಳಿರಿ ಘನರು ದಯಾಪರರು

ಎನ್ನುತ್ತಾರೆ. ನು. ೪ ರಲ್ಲಿ ಮತ್ತೆ ಹರಿಗುಣ ಕೀರ್ತನೆಯಿದೆ. ನು. ೫ ರಲ್ಲಿ ಈ ಕೃಷ್ಣಚರಿತೆಯನ್ನು ಹೇಳಿ ಕೇಳಿದವರಿಗೆ ಸಿಕ್ಕುವ ಫಲವನ್ನು ಹೇಳಲಾಗಿದೆ.

ಅ. ೧, ಶ್ಲೋಕ ೧೭–೨೦ ರಲ್ಲಿ ರಾಜರಾಗಿ ಹುಟ್ಟಿ ಮದಮತ್ತರಾಗಿ ಮೆರೆಯುತ್ತಿದ್ದ ರಾಕ್ಷಸರ ಭಾರ ಹೊರಲಾರದೆ ಭೂದೇವಿಯು ಗೋರೂಪದಿಂದ ಹೋಗಿ ಬ್ರಹ್ಮನಲ್ಲಿ ಮೊರೆಯಿಟ್ಟಾಗ, ಆತ ಅವಳನ್ನೂ ದೇವತೆಗಳನ್ನೂ ಕರೆದುಕೊಂಡು ಕ್ಷೀರ ಸಾಗರದ ತೀರಕ್ಕೆ ಹೋಗಿ ಅಲ್ಲಿ ಪುರುಷಸೂಕ್ತದಿಂದ ವಿಷ್ಣುವನ್ನು ಪ್ರಾರ್ಥಿಸುತ್ತಾನೆ. ಈ ಭಾಗ ವೃ. ಭಾ. ದಲ್ಲಿ ಕೀ. ೩, ನು. ೫ ರಲ್ಲಿ–ದೇವಾಸುರರ ಯುದ್ಧದಲ್ಲಿ ಅಪಜಯ ಹೊಂದಿದ ಅಸುರರು ಧರೆಗೆ ಬಂದು ರಾಜಕುಲದಲ್ಲಿ ಹುಟ್ಟಿ ದೇವಾಂಶರಾದ ರಾಜರನ್ನು ಪೀಡಿಸಲು ಭೂಭಾರ ಹೆಚ್ಚಾಗಲು ಭೂಮಿ ನೊಂದು ರೋದಿಸಲು ದೇವತೆಗಳು ಬಳಲಿ ಪ್ರಾರ್ಥಿಸಲು, ವಿಷ್ಣುವಿನ ಹತ್ತಿರಕ್ಕೆ ಬ್ರಹ್ಮ, ಶಿವ ಇಂದ್ರರು ಹೋಗಿ ಸ್ತುತಿಸಿದರು ಎಂದು ಬಂದಿದೆ. ಕೀ. ೩ ರ ಮೊದಲ ನಾಲ್ಕು ನುಡಿಗಳಲ್ಲಿ ಬರುವ ಭೂದೇವಿ ಮಾಡುವ ಹರಿಸ್ತುತಿ, ಹರಿಯ ಸೃಷ್ಟಿ ಕಾರ್ಯದ ವರ್ಣನೆ, ದಶಾವತಾರದ ವರ್ಣನೆ ಮೂಲದಲ್ಲಿಲ್ಲ. ಕೀ. ೪ರ, ನು. ೧, ೨ ರಲ್ಲಿ ಬರುವ ಬೊಮ್ಮಭವೇಂದ್ರರು ಮಾಡುವ ಹರಿಸ್ತುತಿಯೂ ಮೂಲದಲ್ಲಿಲ್ಲ.

ಅ. ೧, ಶ್ಲೋಕ ೨೧ ರಲ್ಲಿ, ಬ್ರಹ್ಮನು ಧ್ಯಾನಯೋಗದಿಂದ ಅಶರೀರವಾಣಿಯನ್ನು ಕೇಳಿಸಿಕೊಂಡು ದೇವತೆಗಳಿಗೆ ಹೇಳಿದನು ಎಂದಿದ್ದರೆ; ಕೀ. ೪, ನು. ೩ ರ ಮೊದಲ ೨ ಸಾಲುಗಳಲ್ಲಿ 'ಶಿಷ್ಟರೆಲ್ಲರು ಹೀಗೆ ಸಾಷ್ಟಾಂಗದಿಂ ನಮಿಸೆ, ಹೃಷ್ಟಮುಖನಾಗಿ ಶ್ರೀವಿಷ್ಣು ನುಡಿದನೆಲೆ' ಎಂದು ಬದಲಾಯಿಸಲಾಗಿದೆ. ಶ್ಲೋಕ ೨೨, ೨೩ ರಲ್ಲಿ ಬ್ರಹ್ಮನು ದೇವತೆಗಳಿಗೆ, 'ನೀವೆಲ್ಲ ನಿಮ್ಮ ದೈವಾಂಶದೊಂದಿಗೆ ಯಾದವ ಕುಲದಲ್ಲಿ ಜನಿಸಿರಿ. ಆ ಭಗವಂತನು ವಸುದೇವನ ಮನೆಯಲ್ಲಿ ಜನಿಸುತ್ತಾನೆ' ಎನ್ನುತ್ತಾನೆ. ಆದರೆ ಪ್ರ.ಭಾ.ದಲ್ಲಿ ಕೀ. ೪, ನು. ೩ ರಲ್ಲಿ ವಿಷ್ಣುವೇ ದೇವತೆಗಳಿಗೆ, 'ನಾನು ಕೃಷ್ಣಾಭಿದಾನದಲಿ ವೃಷ್ಣಿಕುಲದ ವಸುದೇವನ ಗೃಹಿಣಿಯು ಗರ್ಭದಿಂಪುದಿಸುತ್ತೇನೆ. ದುಷ್ಟದೈತ್ಯರ ಕುಲವನ್ನು ನಷ್ಟ ಮಾಡುತ್ತೇನೆ. ನಿಮ್ಮ ಇಷ್ಟ ನೆರವೇರಿ ಭೂಮಿಯೂ ಸಂತೋಷಿಸುತ್ತಾಳೆ. ಕಷ್ಟಬಿಡಿ ಸುಖಿಸಿ'. ಎನ್ನುತ್ತಾನೆ. ಈ ಭಾಗಗಳು ಮೂಲದಿಂದ ಭಿನ್ನವಾಗಿದ್ದರೂ ಕಥಾನಿರೂಪಣೆಯಲ್ಲಿ ಸಾತತ್ಯವನ್ನು ಉಳಿಸಿಕೊಂಡಿರುವುದನ್ನು ಗಮನಿಸಬಹುದಾಗಿದೆ.

ಅ. ೧. ಶ್ಲೋಕ ೨೩-೨೮ ರಲ್ಲಿ ಬರುವ ವಿವರಗಳು ಈ ಕೀರ್ತನೆಯಲ್ಲಿಲ್ಲ. ಶ್ಲೋಕ ೨೯, ೩೦ ರಲ್ಲಿ-ದೇವಕಿಯನ್ನು ಮದುವೆಯಾದ ವಸುದೇವ ಅವಳೊಡನೆ ರಥದಲ್ಲಿ ತನ್ನ ಮನೆಗೆ ಪ್ರಯಾಣ ಹೊರಟಾಗ ಉಗ್ರಸೇನನ ಮಗನಾದ ಕಂಸ, ತಂಗಿ ದೇವಕಿಯ ಬಗೆಗಿನ ಮಮತೆಯಿಂದ ತಾನೇ ರಥ ನಡೆಸತೊಡಗುತ್ತಾನೆ. ಶ್ಲೋಕ ೩೧, ೩೨ ರಲ್ಲಿ ದೇವಕನು ಮಗಳಿಗೆ ಕೊಟ್ಟ ಬಳುವಳಿಯ-ಆನೆ, ಕುದುರೆ, ರಥ, ದಾಸದಾಸಿಯರ ಸುಂದರವಾದ ವರ್ಣನೆಯಿದೆ. ಶ್ಲೋಕ ೩೩ರಲ್ಲಿ ಮಂಗಳ ವಾದ್ಯಗಳ ವರ್ಣನೆಯಿದೆ. ಈ ಯಾವ ವಿವರಗಳೂ ಪ್ರ.ಭಾ.ದಲ್ಲಿಲ್ಲ.

ಅ. ೧, ಶ್ಲೋಕ ೩೪-೫೫ರಲ್ಲಿ, ದಾರಿಯಲ್ಲಿ ರಥ ಸಾಗುತ್ತಿರುವಾಗ ಅಶರೀರವಾಣಿಯೊಂದು ಕಡಿವಾಣಗಳನ್ನು ಹಿಡಿದಿದ್ದ ಕಂಸನಿಗೆ ಯಾವಳನ್ನು ನೀನು ಈಗ ಕರೆದುಕೊಂಡು ಹೋಗುತ್ತಿರುವೆಯೋ ಇವಳ ಎಂಟನೆಯ ಗರ್ಭವು ನಿನ್ನನ್ನು ಕೊಲ್ಲುವುದು ಎಂದು ಹೇಳಲು, ಆ ಕೂಡಲೇ ಕಂಸ ದೇವಕಿಯನ್ನು ಕೊಲ್ಲ ಹೋದಾಗ ವಸುದೇವನು ಬಗೆಬಗೆಯಾಗಿ ತಿಳಿಹೇಳಿ ಆತನನ್ನು ಸಮಾಧಾನಪಡಿಸಲೆತ್ನಿಸುತ್ತಾನೆ. ಕಂಸ ಆದಕ್ಕೆ ಒಪ್ಪದಿದ್ದಾಗ ವಸುದೇವ 'ನಿನಗೆ ಈಕೆಯಿಂದ ಭಯವಿಲ್ಲವಲ್ಲ ಈಕೆಗೆ ಹುಟ್ಟಿದ ಮಕ್ಕಳೆಲ್ಲರನ್ನು ಒಪ್ಪಿಸಿ ಬಿಡುತ್ತೇನೆ' ಎಂದು ಹೇಳಿ ದೇವಕಿಯ ಕೊಲೆಯನ್ನು ತಪ್ಪಿಸುತ್ತಾನೆ. ೨೨ ಶ್ಲೋಕಗಳಲ್ಲಿ ದೀರ್ಘವಾಗಿ ಬರುವ ಈ ಭಾಗವನ್ನು ಪ್ರಸನ್ನವೆಂಕಟರು ತುಂಬ ಸಂಗ್ರಹವಾಗಿ ಕೀ. ೪, ನು. ೪ ರ ಕೊನೆಯ ನಾಲ್ಕು ಸಾಲುಗಳಲ್ಲಿ ತಂದಿದ್ದಾರೆ. ಇಲ್ಲೆಲ್ಲ ದಾಸರು ಮೂಲದ ವಿವರಗಳನ್ನು ಕೈಬಿಟ್ಟು ತೀರ ಮುಖ್ಯವೆನಿಸಿದ ಕಥಾಂಶಗಳನ್ನು ಮಾತ್ರ ಹೇಳುತ್ತ ಸಾಗುವ ಕ್ರಮವನ್ನು ಗಮನಿಸಬಹುದಾಗಿದೆ.

ಅ. ೧, ಶ್ಲೋಕ ೫೬-೬೧ ರಲ್ಲಿ ವಸುದೇವ ಕಂಸನಿಗೆ ಮಾತು ಕೊಟ್ಟಿದ್ದಂತೆ, ಹುಟ್ಟಿದ ಮೊದಲ ಮಗುವನ್ನು ತಂದು ಒಪ್ಪಿಸಿದಾಗ ಕಂಸ ತನಗೆ ಈ ಮಗುವಿನಿಂದ ಭಯವಿಲ್ಲವೆಂದು ಹಿಂದಕ್ಕೆ ಕಳುಹಿಸುತ್ತಾನೆ. ಶ್ಲೋಕ ೬೨-೬೯ರಲ್ಲಿ, ಆಮೇಲೆ ಕಂಸನ

ಲ್ಲಿಗೆ ಬಂದ ನಾರದ, ಗೋಕುಲದ ಗೊಲ್ಲರು, ಯಾದವರು ಎಲ್ಲರೂ ದೇವಾಂಶ ಸಂಭೂತರೆಂದೂ ಕಂಸನನ್ನು ಹಿಂಬಾಲಿಸುವವರೆಲ್ಲ ಅಸುರರೆಂದೂ ರಾಕ್ಷಸರ ಕೊಲೆಗಾಗಿ ದೇವತೆಗಳು ಮಾಡುತ್ತಿರುವ ಸಂಚನ್ನೂ ತಿಳಿಸಿ ಹೋಗುತ್ತಾನೆ. ನಾರದ ಹೋದನಂತರ ಕಂಸನು ದೇವಕಿ ವಸುದೇವರನ್ನು ಸೆರೆಯಲ್ಲಿಟ್ಟು ಅವರಿಗೆ ಹುಟ್ಟಿದ ಪ್ರತಿ ಮಗುವೂ ವಿಷ್ಣುವೇ ಎಂಬ ಸಂಶಯದಿಂದ ಕೊಂದು ಹಾಕುತ್ತಿದ್ದನು. ಈ ವಿಚಾರಗಳು ಕೀ. ೪, ನು. ೫ ರ ಪೂರ್ವಾರ್ಧದಲ್ಲಿ ತುಂಬ ಸಂಕ್ಷಿಪ್ತವಾಗಿ ಬಂದಿವೆ.

ಅ. ೧, ಶ್ಲೋಕ ೭೦, ೭೧ ರಲ್ಲಿ ಹಿಂದೆ ಹರಿಯಿಂದ ಹತನಾದ ಕಾಲನೇಮಿಯೇ ತಾನೆಂದು ತಿಳಿದು ಯಾದವರ ದ್ವೇಷಿಯಾಗಿದ್ದ, ಮಹಾಬಲಶಾಲಿಯಾದ ಕಂಸನು ಯದು, ಭೋಜ. ಅಂಧಕ ದೇಶಗಳಿಗೆ ಒಡೆಯನಾದ ತನ್ನ ತಂದೆ ಉಗ್ರಸೇನನ ಸೊಲ್ಲಡಗಿಸಿ ತಾನೇ ಆಳುತ್ತಿದ್ದ ವಿಚಾರವಿದೆ. ಇದರ ಕೆಲವಂಶಗಳು ಮಾತ್ರ ಕೀ. ೪, ನು. ೪ರ ಪೂರ್ವಾರ್ಧದಲ್ಲಿ ಬಂದಿವೆ.

ಅಧ್ಯಾಯ ೨, ಶ್ಲೋಕ ೧-೪ : ಕಂಸನು ಪ್ರಲಂಬ,ಬಕ, ಚಾಣೂರ, ಬಾಣ, ನರಕಾಸುರ ಇವರೆಲ್ಲರ ಜೊತೆಗೂಡಿ ಯಾದವರನ್ನು ಪೀಡಿಸುತ್ತಿದ್ದನು. ಇದರಿಂದಾಗಿ ಅವರೆಲ್ಲ ಕುರು, ಪಾಂಚಾಲ,ಕೇಕಯ ಮೊದಲಾದ ದೇಶಗಳಿಗೆ ಹೋಗಿ ವಾಸಿಸುತ್ತಿದ್ದರು. ಮಧುರೆಯಲ್ಲೆ ಉಳಿದ ಅಕ್ರೂರಾದಿಗಳು ಆತನನ್ನು ಅನುಸರಿಸಿ ಸೇವೆ ಸಲ್ಲಿಸುತ್ತಿದ್ದರು.– ಈ ವಿವರಗಳು ಪ್ರ.ಭಾ.ದಲ್ಲಿಲ್ಲ.

ಅ. ೨, ಶ್ಲೋಕ ೫-೧೬ : ದೇವಕಿಯ ಆರು ಮಕ್ಕಳೂ ಕೊಲ್ಲಲ್ಪಟ್ಟನಂತರ ಆಕೆ ಏಳನೆಯ ಬಾರಿ ಗರ್ಭಿಣಿಯಾಗುತ್ತಾಳೆ. ತನ್ನ ಭಕ್ತರಾದ ಯಾದವರು ಕಂಸನಿಂದ ಪೀಡಿತರಾದದ್ದನ್ನು ತಿಳಿದ ಭಗವಂತನು ತನ್ನ ವೈಷ್ಣವೀ ಯೋಗಮಾಯೆಗೆ 'ನೀನು ದೇವಕಿಯಲ್ಲಿ ಬೆಳೆಯುತ್ತಿರುವ ಶೇಷಾಂಶದ ಮಗುವನ್ನು ತಂದು ರೋಹಿಣಿಯ ಗರ್ಭದಲ್ಲಿಡು. ನಂತರ ನಾನು ದೇವಕಿಯ ಮಗನಾಗಿ ಹುಟ್ಟುತ್ತೇನೆ. ನೀನೂ ಯಶೋದೆಯ ಪುತ್ರಿಯಾಗಿ ಜನಿಸು. ಸರ್ವೇಷ್ಟಾರ್ಥಗಳ ವರಗಳಿಗೆ ಅಧಿನಾಯಕಿಯಾದ ನಿನ್ನನ್ನು ಮಾನವರೆಲ್ಲ ದುರ್ಗೆ, ಭದ್ರಕಾಳಿ, ಚಂಡಿಕಾ, ಮಾಯಾ ಇತ್ಯಾದಿ ಹೆಸರುಗಳಿಂದ ಪೂಜಿಸುವರು. ರೋಹಿಣಿಯಲ್ಲಿ ಜನಿಸುವ ಮಗುವಿಗೆ ಸಂಕರ್ಷಣ, ಬಲ, ರಾಮ ಎಂದು ಹೆಸರುಗಳಾಗುತ್ತವೆ, ಎಂದು ಹೇಳಿದನು. ಮಾಯೆ ಭಗವಂತನ ಆ ಎಲ್ಲ ಆಜ್ಞೆಯನ್ನೂ ಹಾಗೆಯೇ ನಡೆಸಿದಳು. ಮಾಯೆಯು ದೇವಕಿಯ ಗರ್ಭವನ್ನು ರೋಹಿಣಿಯ ಗರ್ಭದಲ್ಲಿರಿಸಲು ಜನರೆಲ್ಲ ದೇವಕಿಗೆ ಗರ್ಭಸ್ರಾವವಾಯಿತೆಂದು ಮರುಗುತ್ತಾರೆ.

ಪ್ರ.ಭಾ.ದಲ್ಲಿ ಹರಿಯಾಜ್ಞೆಯ ಈ ಎಲ್ಲ ವಿವರಗಳು ಹೀಗೆಯೇ ಬಾರದಿದ್ದರೂ ಕೀ. ೪, ನು. ೫ ರ ಉತ್ತರಾರ್ಧ ಮತ್ತು ನು. ೬ ರ ಮೊದಲ ಎರಡು ಸಾಲುಗಳಲ್ಲಿ ದುರ್ಗೆ ಹರಿಯಾಜ್ಞೆಯನ್ನು ವಹಿಸಿ ಮಾಡಿದ ಇದೇ ಕೃತ್ಯಗಳನ್ನು ತುಂಬ ಸಂಕ್ಷಿಪ್ತವಾಗಿ ಹೇಳಲಾಗಿದೆ.

ಅ. ೨, ಶ್ಲೋಕ ೧೭–೨೦ರಲ್ಲಿ ಭಗವಂತ ತನ್ನ ಎಲ್ಲ ದಿವ್ಯಾಂಶಗಳೊಂದಿಗೆ ವಸುದೇವನ ಹೃದಯವನ್ನು ಪ್ರವೇಶಿಸಿ ನೆಲೆಗೊಂಡಾಗ ವಸುದೇವ ತೇಜಸ್ವಿಯಾಗಿ ಸೂರ್ಯನಂತೆ ಬೆಳಗುತ್ತಾನೆ.ಆ ಅಂಶವನ್ನು ಗರ್ಭದಲ್ಲಿ ಧರಿಸಿದ ದೇವಕಿ ಕಾಂತಿಯುತಳಾದರೂ ಸೆರೆಯಲ್ಲಿದ್ದುದರಿಂದ ಅಡಗಿಸಿಟ್ಟ ದೀಪದ ಕುಡಿಯಂತೆ, ತಿಳಿಗೇಡಿಯಲ್ಲಿ ಬಂದು ಸೇರಿದ ಸದ್ವಿದ್ಯೆಯಂತೆ ಪೂರ್ಣರೂಪದಲ್ಲಿ ಪ್ರಕಾಶಿಸಲಿಲ್ಲವೆಂಬ ವರ್ಣನೆಯಿದೆ. ವಸುದೇವ ದೇವಕಿಯರ ಈ ಬಗೆಯ ವರ್ಣನೆ ಪ್ರ.ಭಾ.ದಲ್ಲಿ ಬರುವುದಿಲ್ಲ.

ಅ. ೨, ಶ್ಲೋಕ ೨೧-೨೪ ರಲ್ಲಿ ಶುಚಿಸ್ಮಿತೆಯಾಗಿ ಕಾಂತಿಯುತಳಾಗಿ ಓಡಾಡುತ್ತಿದ್ದ ದೇವಕಿಯನ್ನು ಕಂಡು ಕಂಸನು, 'ನನ್ನ ಪ್ರಾಣಕ್ಕೆ ಕುತ್ತು ತರುವ ಹರಿಯೇ ಈಕೆಯ ಗರ್ಭದಲ್ಲಿ ಸೇರಿರಬೇಕು. ಏನು ಮಾಡಲಿ, ಸ್ತ್ರೀ ಹತ್ಯೆ ಮಹಾಪಾಪ' ಎಂದು ಚಿಂತಿಸಿ, ಆ ಮಗು ಹುಟ್ಟುವುದನ್ನೇ ಕಾಯುತ್ತಿದ್ದನು. ಆತ ಕುಳಿತಾಗ, ಮಲಗಿದಾಗ, ನಿಂತಾಗ, ಓಡಾಡುವಾಗ, ಊಟ ಮಾಡುವಾಗ ಎಲ್ಲ ಹೊತ್ತಿನಲ್ಲೂ ಹರಿಯ ಚಿಂತೆಯೇ ಕಾಡತೊಡಗುತ್ತದೆ. ಕಂಸನ ಆಗಿನ ಮನಸ್ಥಿತಿಯನ್ನು ತುಂಬ ಶಕ್ತವಾಗಿ ವಿವರಿಸುವ, ಕಂಸನ ಪಾತ್ರಪೋಷಣೆಗೆ ತುಂಬ ಉಪಯುಕ್ತವಾದ ಈ ಭಾಗವನ್ನೂ ದಾಸರು ಕೈಬಿಟ್ಟಿದ್ದಾರೆ.

ಅ. ೨, ಶ್ಲೋಕ ೨೬ ರಲ್ಲಿ ಹರಿಯು ದೇವಕಿಯ ಗರ್ಭವನ್ನು ಸೇರಿದ್ದನ್ನು ತಿಳಿದ ಬ್ರಹ್ಮ, ಶಿವ, ಮೊದಲಾದ ದೇವತೆಗಳು, ನಾರದಾದಿ ಮುನಿಗಳೆಲ್ಲರೂ ಅಲ್ಲಿಗೆ ಬಂದು ಭಕ್ತಾಭೀಷ್ಟಪ್ರದನಾದ ಭಗವಂತನನ್ನು ಸ್ತುತಿಸುತ್ತಾರೆ. ಶ್ಲೋಕ ೨೬-೪೧ ರವರೆಗೆ ಈ ಸ್ತುತಿ ದೀರ್ಘವಾಗಿ ಬರುತ್ತದೆ. ೪೨ ನೆಯ ಶ್ಲೋಕದಲ್ಲಿ ದೇವಕಿಯನ್ನು ಕುರಿತು, 'ತಾಯಿ, ಸಾಕ್ಷಾತ್ ಭಗವಂತನೇ ನಮ್ಮೆಲ್ಲರ ಒಳಿತಿಗಾಗಿ ತನ್ನ ಅಂಶದಿಂದ ನಿನ್ನ ಗರ್ಭಕ್ಕೆ ಬಂದು ಸೇರಿರುವನು. ಆತನೇ ಯಾದವರೆಲ್ಲರನ್ನೂ ಕಾಪಾಡುತ್ತಾನೆ. ನೀವು ಕಂಸನಿಂದ ಭಯಪಡಬೇಕಾಗಿಲ್ಲ, ಎಂದು ಹೇಳಿ ದೇವಲೋಕಕ್ಕೆ ಹಿಂದಿರುಗುತ್ತಾರೆ. ಪ್ರ. ಭಾ. ದಲ್ಲಿ,

ಪುರುಷೋತ್ತಮ ದೇವಕಿಯ ಪರಮಜಠರದಿ ನಿಜೈಶ್ವರಿಯದಲಿ ಕ್ರೀಡಿಸುತಿರೆ
ಸುರರ ಸಮೂಹಕೆ ಅಮಿತ ಹರುಷವಾಯಿತು ಖಳನ
ಕರಕೆ ಉತ್ಪಾತ ಸಂದರುಶನವು ಫಲಪುಷ್ಪ
ಭರಿತ ತರುಲತೆಯವನಿ ಚಿರಭದ್ರಮಯವಾಗೆ ಕರೆದವಾವು ಕೊಡವಾಲ್ಗಳ

(ಕೀ. ೪, ನು. ೬)

ಎಂದು ಹರಿ ದೇವಕಿಯ ಗರ್ಭದಲ್ಲಿ ಸೇರಿದ್ದರಿಂದಾದ ಕೆಲವು ಪರಿಣಾಮಗಳನ್ನು ಹೇಳಿ, ಮೂಲದಲ್ಲಿರುವ ದೇವತೆಗಳು ಮಾಡುವ ಹರಿಸ್ತುತಿಯ ವಿವರಗಳೆಲ್ಲವನ್ನೂ ಕೈ ಬಿಡಲಾಗಿದೆ. ಇಲ್ಲೆಲ್ಲ ದಾಸರು ಮೂಲದ ಕಥಾಂಶಗಳನ್ನೇ ಬಹಳಮಟ್ಟಿಗೆ ಅನುಸರಿಸಿಯೂ ಕೆಲವೆಡೆ ಭಿನ್ನವಾಗುವುದನ್ನು ಗಮನಿಸಬಹುದಾಗಿದೆ.

ಅಧ್ಯಾಯ ೩, ಶ್ಲೋಕ ೧-೭ ರಲ್ಲಿ ಕೃಷ್ಣ ಜನಿಸುವ ಸಮಯ ಬಂದಾಗ ಪ್ರಕೃತಿ ಅದಕ್ಕಾಗಿ ಸಿದ್ಧವಾದ ಬಗೆ, ಸಜ್ಜನರ ಮನಸ್ಸು ಪ್ರಸನ್ನವಾದದ್ದು,ಕಿನ್ನರರು ಗಂಧರ್ವರು ಹಾಡಿದ್ದು. ಸಿದ್ಧರು ಚಾರಣರು ಸ್ತುತಿಸಿದ್ದು, ಅಪ್ಸರೆಯರು ನರ್ತಿಸಿದ್ದು, ದೇವತೆಗಳು ಹೂಮಳೆಗರೆದದ್ದು,ಮೇಘಗಳು ಕಡಲನ್ನು ಅನುಕರಿಸಿ ಗುಡುಗಿದ್ದನ್ನು ವರ್ಣಿಸಲಾಗಿದೆ. ಈ ಭಾಗದ ಕೆಲವು ವಿವರಗಳು ಕೃಷ್ಣಜನನಾನಂತರ ಕೀ. ೫ರ, ನು. ೧, ೨ ರಲ್ಲಿ ಸರಳವಾಗಿ, ಸಂಕ್ಷಿಪ್ತವಾಗಿ ಬರುತ್ತವೆ. ಕೀ. ೪, ನು. ೭, ೮ ರಲ್ಲಿ 'ಮಾವ ಕಂಸನ ಕೊಲುವ ಭಾವದಲಿ' ಕೃಷ್ಣನು ನೃಸಿಂಹನಂತೆ ದೇವಕಿಯ ಜಠರದಲ್ಲಿ ಆವಿರ್ಭಾವನಾದನು. ಶ್ರಾವಣದ ಬಹುಳಾಷ್ಟಮಿ ಚಂದ್ರೋದಯದಲ್ಲಿ ರೋಹಿಣಿ ಕೂಡಿದ ವೇಳೆಯಲ್ಲಿ ಬ್ರಹ್ಮಾದಿ ದೇವತೆಗಳು ಅಂಬರದಲ್ಲಿ ಸ್ತೋತ್ರಮಾಡಲು ಶ್ರೀವತ್ಸ ಮಣಿಕಿರೀಟ ಕೌಸ್ತುಭ ಕುಂಡಲ ವಲಯಧಾರಿಯಾಗಿ, ಗದಾವನಜ ಚಕ್ರಧರನಾಗಿ, ಚತುರ್ಭುಜನಾಗಿ, ಪೀತಾಂಬರ ಧರಿಸಿದ ನೀಲಮೇಘ ಶಾಮಲನಾಗಿ ಹುಟ್ಟಿದನೆಂದು ವರ್ಣಿಸಿದ ಭಾಗ, ಮೂಲದ ಅ. ೩, ಶ್ಲೋಕ ೮-೧೦ ರಲ್ಲಿ ಬರುತ್ತದೆ.

ಅ. ೩, ಶ್ಲೋಕ ೧೧ ರಲ್ಲಿ ವಸುದೇವನು ಕೃಷ್ಣಾವತಾರ ನಿಮಿತ್ತವಾಗಿ ನಡೆಸಬೇಕಾದ ಉತ್ಸವದ ಸಡಗರದೊಡನೆ ಹತ್ತುಸಾವಿರ ಗೋವುಗಳನ್ನು ಬ್ರಾಹ್ಮಣರಿಗೆ ದಾನ ಮಾಡುತ್ತಾನೆ. ಶ್ಲೋಕ ೧೨-೨೨ ರಲ್ಲಿ ಆ ಮಗುವನ್ನು ವಸುದೇವನು ಪರಮ ಪುರುಷನೆಂದು ತಿಳಿದು ದೀರ್ಘವಾಗಿ ಸ್ತುತಿಸುತ್ತಾನೆ. ಅನಂತರ ಶ್ಲೋಕ ೨೩-೩೧ ರವರೆಗೆ ದೇವಕಿ ಕೃಷ್ಣನನ್ನು ಸ್ತುತಿಸುವುದನ್ನು ವರ್ಣಿಸಲಾಗಿದೆ. ಈ ಇಬ್ಬರ ಸ್ತುತಿಗಳನ್ನು ದಾಸರು ಕೀ. ೪, ನು. ೯ ರ ಮೊದಲ ಎರಡು ಸಾಲುಗಳಲ್ಲಿ-

ಸಾಸಿರ ಮುಂಗುರುಳ ಮುಖ ವಾಸುದೇವನ ಕಂಡು

ಸ್ತ್ರೀಸಹಾನಕ ದುಂದುಭಿ ಸ್ತುತಿಸೆ

ಎಂದು ಸಂಕ್ಷಿಪ್ತವಾಗಿ ಹೇಳಿ ಮುಗಿಸುತ್ತಾರೆ. ಇದೇ ನುಡಿಯ ಉತ್ತರಾರ್ಧದಲ್ಲಿ 'ಗೋಸಾಸಿರದ ಶತಗಳನು ಭೂಸುರರಿಗಿತ್ತನು ಸಂತೋಷದಲಿ ವಸುದೇವ' ಎನ್ನುತ್ತಾರೆ. ಮೂಲಭಾಗವತದಲ್ಲಿ ಪ್ರತಿಯೊಂದು ಘಟನೆಯೂ ವಿವರವಾಗಿ ವರ್ಣಿತವಾಗಿದ್ದರೆ ದಾಸರು ತಮಗೆ ಅಗತ್ಯವೆನಿಸಿದಷ್ಟನ್ನು ಮಾತ್ರ ತಮ್ಮ ಕೀರ್ತನೆಗಳಲ್ಲಿ ತರುತ್ತಾರೆ. ಇಂಥಲ್ಲೆಲ್ಲ ಕಾಣುವ ಈ ಸಂಗ್ರಹಗುಣ ಮೆಚ್ಚುವಂಥದು. ಅಲ್ಲದೆ ಮೂಲದಲ್ಲಿ ಕೃಷ್ಣ ಹುಟ್ಟುವ ಮೊದಲೇ ಬರುವ ದೇವತೆಗಳ ಸ್ತುತಿ, ಗಾನ, ನರ್ತನ ಇತ್ಯಾದಿಗಳು ಪ್ರ.ಭಾ.ದಲ್ಲಿ ಕೃಷ್ಣ ಜನಿಸಿದ ನಂತರ ಬಂದಿರುವುದು ಹೆಚ್ಚು ಔಚಿತ್ಯ ಪೂರ್ಣವಾಗಿ ಕಾಣಿಸುತ್ತದೆ. ಆದರೆ ಕೀ. ೫ ರ ಪಲ್ಲವಿಯಾಗಿ ಬಂದಿರುವ,

ಶ್ರೀವಲ್ಲಭಮದಿಸಿದಾ ಕ್ಷಣದಿ ದುರ್ಗಾ

ದೇವಿ ಹುಟ್ಟಿದಳು ಗೋಕುಲದಿ

ಎಂಬ ಸಾಲುಗಳು ಅಷ್ಟು ಸಮಂಜಸವಾಗಿಲ್ಲ ಎಂಬ ಶ್ರೀ ಎ.ಟಿ.ಪಾಟೀಲರ ಅಭಿಪ್ರಾಯ[1] ಒಪ್ಪಬಹುದಾದ್ದು ಎನ್ನಿಸುತ್ತದೆ.

ಅ. ೩, ಶ್ಲೋಕ ೩೨-೪೭ ರಲ್ಲಿ ಕೃಷ್ಣನು ವಸುದೇವ ದೇವಕಿಯರಿಗೆ ಅವರ ಪೂರ್ವವೃತ್ತಾಂತವನ್ನೆಲ್ಲ ವಿಸ್ತಾರವಾಗಿ ಹೇಳುತ್ತಾನೆ. ಅನಂತರ ವಸುದೇವನಿಗೆ, 'ನೀನು ಕಂಸನಿಗೆ ಹೆದರುವುದಾದರೆ ನನ್ನನ್ನು ಗೋಕುಲಕ್ಕೆ ಕರೆದುಕೊಂಡುಹೋಗಿ ಬಿಟ್ಟು ಯಶೋದೆಯ ಮಾಯಾಶಕ್ತಿಸ್ವರೂಪಿಣಿಯಾದ ಹೆಣ್ಣು ಮಗುವನ್ನು ಬೇಗ ಇಲ್ಲಿಗೆ ತೆಗೆದುಕೊಂಡು ಬಾ. ಈ ಸಮಯದಲ್ಲಿ ಎಲ್ಲ ಬಾಗಿಲುಗಳೂ ತಾನಾಗಿಯೇ ತೆರೆದುಕೊಳ್ಳುವುದು. ದಾಟಲಸಾಧ್ಯವಾದ ಯಮುನಾನದಿಯೂ ದಾರಿಯನ್ನು ಬಿಟ್ಟು ಕೊಡುವುದು' ಎಂದು ಹೇಳಿ, ಕೂಡಲೇ ತನ್ನ ಯೋಗಮಾಯಾಶಕ್ತಿಯಿಂದ ಸಾಧಾರಣ ಶಿಶುವಂತೆ ಆಗುತ್ತಾನೆ. ಕೃಷ್ಣ ಮಾತನಾಡುವ ಈ ಭಾಗವನ್ನು ದಾಸರು ಪೂರ್ಣವಾಗಿ ಕೈಬಿಟ್ಟಿದ್ದಾರೆ. ಶ್ಲೋಕ ೪೮ ರ-ಕೃಷ್ಣ ಜನಿಸಿದ ಹೊತ್ತಿಗೇ ಯಶೋದೆಗ ದುರ್ಗೆ ಮಗುವಾಗಿ ಹುಟ್ಟಿದ–ವಿಷಯವನ್ನು ಕೀ. ೫ ರ ಪಲ್ಲವಿಯಲ್ಲೇ ಸೂಚಿಸಲಾಗಿದೆ.

ಅ. ೩. ಶ್ಲೋಕ ೪೮-೫೪ ರಲ್ಲಿ ವಸುದೇವ ಕೃಷ್ಣನನ್ನು ಎತ್ತಿಕೊಂಡು ಗೋಕುಲಕ್ಕೆ ಬಂದು ನಿದ್ರಾವಶಳಾಗಿದ್ದ ಯಶೋದೆಯ ಪಕ್ಕದಲ್ಲಿಟ್ಟು, ಯಶೋದೆಯ ಪುತ್ರಿಯಾದ ಮಾಯೆಯನ್ನು ಎತ್ತಿಕೊಂಡು ಬಂದು, ಮಲಗಿದ್ದ ದೇವಕಿಯ ಪಕ್ಕಕ್ಕೆ ಮಲಗಿಸಿ, ತಾನು ಹಿಂದಿನಂತೆಯೇ ಬಂಧಿತನಾಗಿ ಇರುವ ವಿಚಾರ ಬರುತ್ತದೆ. ಈ ಭಾಗ ಕೀ. ೫ ರ ನಂ. ೩-೬ರಲ್ಲಿ ಬರುತ್ತದೆ. ಮುಖ್ಯಾಂಶಗಳಲ್ಲಿ ಸಾಮ್ಯ ಇದೆಯಾದರೂ ವಿವರಗಳಲ್ಲಿ ವ್ಯತ್ಯಾಸಗಳಿವೆ. ಮೂಲದಲ್ಲಿ ಕಾವಲಿದ್ದವರು ಪ್ರಜ್ಞಾಹೀನರಾದರು ಎಂದಿದ್ದರೆ ಇಲ್ಲಿ 'ಕಾವಲಿದ್ದವರಿಗೆ ಕಾಪಳ ಕವಿಯಿತು' ಎಂಬ ಆಲಂಕಾರಿಕ ಅಭಿವ್ಯಕ್ತಿ ಇದೆ. ಮೂಲದಲ್ಲಿನ ಬಾಗಿಲು, ಅಗುಳಿ, ಸರಪಳಿ,ತಾಪಾಳುಗಳ ವಿವರವೆಲ್ಲವನ್ನು ಇಲ್ಲಿ ಕೈಬಿಟ್ಟು 'ತಾವಾಗಿ ಪುರದ್ವಾರವು ತೆರೆದವು' ಎಂದು ಸರಳವಾಗಿ ಹೇಳಲಾಗಿದೆ. ಇಂಥಲ್ಲಿಯ ಸಂಗ್ರಹ ಗುಣವನ್ನು ಕೀರ್ತನೆಯಲ್ಲಿ ಮೆಚ್ಚಬಹುದಾದರೂ, ಮೂಲದಲ್ಲಿಯ ಯಮುನಾ ನದಿಯ ತುಂಬು ಪ್ರವಾಹದ ಸುಂದರ ವರ್ಣನೆಯನ್ನೂ ಕೈಬಿಟ್ಟದ್ದು ಉಚಿತವೆನ್ನಿಸುವುದಿಲ್ಲ.ಮೂಲದಲ್ಲಿ, ಗೋಕುಲದಲ್ಲಿಯೂ ಎಲ್ಲರೂ ನಿದ್ರಾವಶರಾಗಿದ್ದು ವಸುದೇವನು ಮಗುವನ್ನು ಬದಲಿಸಿ ತಂದ ವಿಚಾರ ಅವರಾರಿಗೂ ತಿಳಿಯುವುದಿಲ್ಲ.ಹಾಗೆಯೇ ವಸುದೇವ ಸೆರೆಮನೆಗೆ ಹಿಂದಿರುಗಿ ಯಾರಿಗೂ ತಿಳಿಯದಂತೆ ಮೊದಲಿನಂತೆಯೇ ಇರುತ್ತಾನೆ-ಎಂಬಂಥ ಸಣ್ಣ ಸಣ್ಣ ವಿವರಗಳ ಬಗ್ಗೆಯೂ ಎಚ್ಚರವಹಿಸಿದ್ದು ಕಾಣಿಸುತ್ತದೆ. ಆದರೆ ದಾಸರು ತಮ್ಮ ಕೀರ್ತನೆಗಳಲ್ಲಿ ಆ ಎಲ್ಲ ವಿವರಗಳನ್ನು ಕೊಡಲು ಹೋಗದೆ ಮುಖ್ಯಾಂಶಗಳನ್ನು ಮಾತ್ರ ಹೇಳುತ್ತ ಹೋಗುತ್ತಾರೆ. ಮೂಲದಲ್ಲಿ ದೇವಕಿಗೂ ತನಗೆ ಹುಟ್ಟಿದ ಮಗು ಹೆಣ್ಣೊ ಗಂಡೊ ತಿಳಿದಿರಲಿಲ್ಲ ಎಂದು ಹೇಳಿದೆ. (ಶ್ಲೋಕ ೫೪) ಆದರೆ ಇಲ್ಲಿ ಮಗುವನ್ನು ತಂದು 'ಶಶಿಮುಖಿ ದೇವಕಿ

---

1 ಶ್ರೀ ಪ್ರಸನ್ನವೆಂಕಟದಾಸರು ಮತ್ತು ಅವರ ಕೃತಿಗಳು, ಪು. ೭೬

ದೇವಿಗೆ ಕೊಟ್ಟನು' ಎಂದು ಹೇಳಿ, ಆಕೆಗೆ ಈ ವಿಷಯ ತಿಳಿದಿತ್ತೆಂಬುದನ್ನು ಸೂಚಿಸಲಾಗಿದೆ.

ಅಧ್ಯಾಯ ೪, ಶ್ಲೋಕ ೧, ೨ : " ಶ್ರೀಶುಕನು ಹೇಳಿದನು-ಒಳ ಹೊರಗಣ ಪಟ್ಟಣದ ಬಾಗಿಲುಗಳೆಲ್ಲವೂ ಹಿಂದಿನಂತೆಯೇ ಮುಚ್ಚಿಕೊಂಡವು. ನಂತರ ಮಗುವಿನ ಧ್ವನಿಯನ್ನು ಕೇಳಿ ಸೆರೆಮನೆಯ ಕಾವಲುಗಾರರು ಎಚ್ಚರಗೊಂಡರು. ಅವರಾದರೋ ಬೇಗನೇ ಹತ್ತಿರ ಓಡಿಬಂದು ಕಂಸನು ಉದ್ವೇಗ ಪಡುತ್ತ ಯಾವುದನ್ನು ನಿರೀಕ್ಷಣೆ ಮಾಡುತ್ತಿರುವನೋ ಆ ದೇವಕಿಯ ಶಿಶು ಜನಿಸಿದ ವೃತ್ತಾಂತವನ್ನು ಆ ಕಂಸನಿಗೆ ಹೇಳಿದರು."– ಹೀಗೆ ಮೂಲದಲ್ಲಿ ಪ್ರತಿಯೊಂದು ವಿವರವೂ ಸಹಜವಾಗಿ, ಘಟನೆ ಕಣ್ಣಿಗೆ ಕಟ್ಟುವಂತೆ ಬಂದಿರುವುದನ್ನು ಗಮನಿಸಬಹುದು. ಆದರೆ ಈ ಮೊದಲೇ ಹೇಳಿದಂತೆ, ಮುಖ್ಯಾಂಶಗಳ ಕಡೆಗೆ ಮಾತ್ರ ದೃಷ್ಟಿಯಿಟ್ಟ ದಾಸರು, 'ಪ್ರಸುತ ಸುದ್ದಿಯ ಕೇಳಿದ ಕಂಸ' ಎಂದಷ್ಟೇ ಹೇಳಿ ಮುನ್ನಡೆಯುತ್ತಾರೆ.

ಅ. ೪, ಶ್ಲೋಕ ೩ : ' ಆತನೂ ಸಹ ಹಾಸಿಗೆಯಿಂದ ಬೇಗನೇ ಎದ್ದು 'ಇವನೇ ನನಗೆ ಮೃತ್ಯು ಎಂದು ಗಾಬರಿಗೊಂಡವನಾಗಿ ಅಲ್ಲಲ್ಲೆ ಎಡವುತ್ತ ತಲೆಗೂದಲಿನ ಗಂಟು ಬಿಚ್ಚಿದ್ದನ್ನೂ ಗಮನಿಸದೇ ಕೆದರಿದ ತಲೆಯೊಂದಿಗೆ ಬೇಗನೆ ಹೆರಿಗೆಯಮನೆಗೆ ಹೋದನು.'-ಈ ಭಾಗ ಕೀ. ೫. ನು ೭ ರ ಮೊದಲ ಎರಡು ಸಾಲುಗಳಲ್ಲಿ,

ಬಿಟ್ಟು ಮಂಚವಿಳಿದೆದ್ದು ಬಲು ಬವಳಿಕೆಯ
ಕೆಟ್ಟುಗ್ರಕೋಪದಿ ನಿಶಿಥದಲಿ

ಎಂಬಲ್ಲಿ ಶಕ್ತವಾಗಿಯೆ ಬಂದಿದೆ. ಶ್ಲೋಕ ೪-೭ರ ಭಾಗ ಕೀ. ೫, ನು. ೭ರ ಮೂರನೆಯ ಸಾಲಿನಿಂದ ನು. ೮ರಲ್ಲಿ ಬರುತ್ತದೆ. ಮೂಲದಲ್ಲಿನ, ದೇವಕಿ ಕಂಸನನ್ನು ಈ ಮಗುವನ್ನೂ ಕೊಲ್ಲಬೇಡ ಎಂದು ಬೇಡಿಕೊಳ್ಳುವ ಮಾತುಗಳ ಸಂಗ್ರಹಾರ್ಥವನ್ನು ಮಾತ್ರ ದಾಸರು ನು. ೮ರಲ್ಲಿ ಕೊಟ್ಟಿದ್ದಾರೆ.

ಅ. ೪, ಶ್ಲೋಕ ೮-೧೩ ರಲ್ಲಿ ಸ್ವಾರ್ಥಕ್ಕಾಗಿ ಕರುಣೆಯಿಲ್ಲದ ಆ ಪಾಪಿ ಕಂಸ ಆ ಮಗುವಿನ ಕಾಲುಗಳನ್ನು ಹಿಡಿದು ಕಲ್ಲು ಬಂಡೆಯ ಮೇಲೆ ಅಪ್ಪಳಿಸಿದನು. ಆಗ ಆ ಮಗು ಅವನ ಕೈಯಿಂದ ತಪ್ಪಿಸಿಕೊಂಡು ಆಕಾಶಕ್ಕೆ ಹಾರಿ ಅಷ್ಟಭುಜಗಳಲ್ಲಿ ಆಯುಧಗಳಿಂದ ಕೂಡಿ ಅಲಂಕೃತ ದುರ್ಗೆಯಾಗಿ ಕಾಣಿಸಿಕೊಂಡು ಕಂಸನಿಗೆ,'ನನ್ನನ್ನು ಕೊಂದರೇನು ಉಪಯೋಗ ? ನಿನ್ನ ಮೃತ್ಯುವಿಗೆ ಕಾರಣನಾಗುವವನು ಈಗಾಗಲೇ ಬೇರೆಡೆ ಹುಟ್ಟಿಯಾಗಿದೆ, ದೀನರನ್ನು ವೃಥಾ ಹಿಂಸಿಸಬೇಡ' ಎನ್ನುತ್ತಾಳೆ. ಹೀಗೆ ಭಗವತಿಯಾದ ಆ ಮಾಯೆ ಆತನಿಗೆ ತಿಳಿಸಿ ಭೂಲೋಕದಲ್ಲಿ ಹಲವು ಹೆಸರಿನ ದೇವಾಲಯಗಳಲ್ಲಿ ಹಲವು ದಿವ್ಯನಾಮಗಳಿಂದ ಪ್ರಸಿದ್ಧಳಾದಳು ಎಂಬ ವಿವರಗಳಿವೆ. ಈ ಭಾಗದ ಮುಖ್ಯಾಂಶಗಳು ಕೀ. ೫ ರ ನು. ೯ ಹಾಗೂ ಕೀ. ೬ರ ಪಲ್ಲವಿಯಿಂದ ನು. ೨ರ ೨ನೆಯ ಸಾಲಿನವರೆಗೆ ಬಂದಿವೆ; ಇಲ್ಲಿ ಮೂಲದ ದುರ್ಗೆಯ ರೂಪದ ವಿವರಗಳನ್ನು ಕೈಬಿಟ್ಟು, 'ಅಂತರಿಕ್ಷಾದ್ಭುತ

ನೋಡಿದ ಬಹುಕಾಂತಿ ವೈಯಳ ಕಂಡು ಬಾಡಿದ' ಎಂದಷ್ಟೇ ಹೇಳಲಾಗಿದೆ. ಹಾಗೆಯೇ ಶ್ಲೋಕ ೧೧, ೧೩ರಲ್ಲಿ ಬರುವ ಮಾಯೆಯ ಕೀರ್ತನೆ, ಪೂಜೆ, ಪ್ರಸಿದ್ಧಿಗಳ ವಿವರಗಳನ್ನು ಬಿಡಲಾಗಿದೆ. ಮುಖ್ಯ ಕಥೆಗೆ ಅಗತ್ಯವಲ್ಲದ ಇವುಗಳನ್ನು ಬಿಟ್ಟಿದ್ದರಲ್ಲಿ ಔಚಿತ್ಯವೂ ಇದೆ.

ಅ. ೪, ಶ್ಲೋಕ ೧೪–೨೩ರಲ್ಲಿ ದುರ್ಗೆಯ ಮಾತುಗಳನ್ನು ಕೇಳಿ ಆಶ್ಚರ್ಯ ಭರಿತನಾದ ಕಂಸ ಕೂಡಲೇ ವಸುದೇವ ದೇವಕಿಯರನ್ನು ಬಿಡುಗಡೆಮಾಡಿ, ಅವರ ಮಕ್ಕಳನ್ನು ಕೊಂದು ಅವರನ್ನು ನೋಯಿಸಿದ್ದಕ್ಕೆ ಪಶ್ಚಾತ್ತಾಪಪಟ್ಟು ಕ್ಷಮೆ ಕೇಳುತ್ತಾನೆ. ದಾಸರು ಈ ಭಾಗದ ಕಂಸನ ದೀರ್ಘವಾದ ತಾತ್ವಿಕವಾದ ಮಾತುಗಳನ್ನು ಕೈಬಿಟ್ಟು ಅದರ ಮುಖ್ಯಭಾವವನ್ನು ನಾಲ್ಕು ಸಾಲುಗಳಲ್ಲಿ ಸಂಗ್ರಹಿಸಿದ್ದಾರೆ :

ವ್ಯರ್ಥ ನಿಮ್ಮಿಬ್ಬರ ನೋಯಿಸಿದೆ ಶಿಶು
ಹತ್ಯಕ್ಕೆ ಕಾರಣನೆನಿಸಿದೆ
ಪ್ರಾರ್ಥನೆ ಮಾಡುವೆ ಕ್ಷಮಿಸೆಂದು ಸ
ಮರ್ಥ ಸುಶೀಲರು ನೀವೆಂದು

(ಕೀ. ೬, ನು. ೩)

ಹೀಗೆಯೇ ಶ್ಲೋಕ ೭೪ರ ವಿಚಾರ ನು. ೨ರ ಕೊನೆಯ ೨ ಸಾಲುಗಳಲ್ಲಿ ಸಂಗ್ರಹಗೊಂಡು ಬಂದಿದೆಯಾದರೂ ಮೂಲದಲ್ಲಿ ಅಭಿವ್ಯಕ್ತಗೊಂಡಿರುವ ಕಂಸನ ಕಪಟಬುದ್ಧಿಯ ಸೂಚನೆ ಇಲ್ಲಿಲ್ಲ.

ಶ್ಲೋಕ ೨೫ ರಲ್ಲಿ ಬರುವ-ಪಶ್ಚಾತ್ತಾಪ ಪಟ್ಟ ಅಣ್ಣನ ವಿಷಯದಲ್ಲಿ ಸೈರಣೆಯನ್ನು ತೋರಿಸಿ ದೇವಕಿ ತನ್ನ ರೋಷವನ್ನು ಬಿಟ್ಟ—ಸಂಗತಿಯನ್ನು ದಾಸರು ಬಿಟ್ಟಿದ್ದಾರೆ. ಶ್ಲೋಕ ೨೬, ೨೭ ರಲ್ಲಿ ಬರುವ ವಸುದೇವನ ಮಾತುಗಳನ್ನು ಸೂತ್ರಪ್ರಾಯವಾಗಿ ಕೀ. ೬, ನು. ೪ ರಲ್ಲಿ ತಂದಿದ್ದಾರೆ. ಮೂಲದಲ್ಲಿ ವಿಧಿ, ದೈವ ಎಂದಿರುವುದನ್ನು ಇಲ್ಲಿ 'ಹರಿ' ಎಂದು ಸ್ಪಷ್ಟವಾಗಿ ಹೇಳುತ್ತಾರೆ.

ಶ್ಲೋಕ ೨೮ರಲ್ಲಿ 'ಹೀಗೆ ಪ್ರಸನ್ನರಾದ ದೇವಕೀವಸುದೇವರಿಂದ ಶುಭ್ರವಾಗಿ ಮಾತನಾಡಿಸಲ್ಪಟ್ಟು ಅವರ ಅನುಮತಿಯನ್ನು ಪಡೆದ ಕಂಸನು ತನ್ನ ಮನೆಗೆ ಬಂದು ಸೇರಿದನು' ಎಂದಿರುವುದನ್ನು,

ಕೋಪವ ಜರಿದು ಮನೆಗೆ ಬಂದು ಪಶ್ಚಾ
ತ್ತಾಪದಿ ಕಳೆದ ಯಾಮವನೊಂದು

(ಕೀ. ೬, ನು. ೫)

ಎಂದು ಹೇಳಲಾಗಿದೆ. ಶ್ಲೋಕ ೨೯ ರ, ಆ ರಾತ್ರಿಯು ಕಳೆದು ಬೆಳಗಾಗಲು ಕಂಸನು ಮಂತ್ರಿಗಳನ್ನು ಕರೆದು ಆ ಹೆಣ್ಣು ಮಗುವಿನ ರೂಪದ ಯೋಗಮಾಯೆ ಹೇಳಿದ್ದೆಲ್ಲವನ್ನೂ ಅವರಿಗೆ ಹೇಳಿದನು—ಎಂಬ ಸರಳವಾದ ಹೇಳಿಕೆಗೆ ದಾಸರು, ಕಂಸನ ಕಾರ್ಯಗಳ ವಿಮರ್ಶಕರಾಗಿ,

ತಾ ಪ್ರಸರಪಿ ಪಾಪಕ್ಕೆಳಸಿದ ದುಷ್ಟ
ಪಾಪಾತ್ಮ ಮಂತ್ರಿಗಳ್ಕರೆಸಿದ

(ಕೀ. ೬, ನು. ೫)

ಕನ್ಯಳ ಮಾತು ಮಂತ್ರಿಗಳಿಗೆ ಕಂಸ
ಚೆನ್ನಾಗಿ ಹೇಳೆ ಪಾಪಿಗಳಿಗೆ

(ಕೀ. ೬, ನು. ೨)

ಎಂದೂ ಹೇಳುತ್ತಾರೆ. ಇಲ್ಲಿ ಮೂಲದ ನಿರೂಪಣಾ ವಿಧಾನಕ್ಕೆ ತೋರುವ ನಿಷ್ಠೆಗಿಂತ ಹೆಚ್ಚಾಗಿ ಭಾಗವತವನ್ನು ಚೆನ್ನಾಗಿ ಓದಿ ಬಲ್ಲ ದಾಸರು ಒಬ್ಬ ಹರಿಭಕ್ತನ ದೃಷ್ಟಿಯಿಂದ, ಹರಿಭಕ್ತ–ಹರಿದ್ವೇಷಿ, ಪುಣ್ಯ–ಪಾಪ ಈ ದೃಷ್ಟಿಯಿಂದ ಮಾತ್ರ ಆ ಕೃಷ್ಣಚರಿತೆಯನ್ನು ಕಂಡು ಕೀರ್ತನೆಗಳ ರೂಪದಲ್ಲಿ ಹೇಳುತ್ತಿರುವ ರೀತಿ ಕಾಣಿಸುತ್ತದೆ.

ಅ. ೪. ಶ್ಲೋಕ ೩೦-೪೨ ರಲ್ಲಿ ಕಂಸನ ಮಾತುಗಳನ್ನು ಕೇಳಿದ ಆ ಮಂತ್ರಿಗಳು ಕಂಸನಲ್ಲಿ, ಅವನ ರಾಜ್ಯದ ಎಳೆಯ ಮಕ್ಕಳನ್ನು, ಸಾಧು ಸಂತರನ್ನು ಕೊಲ್ಲಬೇಕೆಂದು ಹೇಳುತ್ತಾರೆ. ಇದಕ್ಕೆ ಕಂಸನೂ ಅವರಿಗೆ ಅಪ್ಪಣೆ ಕೊಡುತ್ತಾನೆ. ಪ್ರ.ಭಾ.ದಲ್ಲಿ ಕಂಸ ಹಾಗೂ ಮಂತ್ರಿಗಳ ಸಮಾಲೋಚನೆಯ ವಿವರಗಳನ್ನು ಕೈಬಿಟ್ಟು ಕೀ. ೬, ನಂ. ೨ ರ ಕೊನೆಯ ಎರಡು ಸಾಲುಗಳಲ್ಲಿ,

ಚಿಣ್ಣರ ಹಿಂಸೆಗೆ ನಡೆದರು ದೈತ್ಯ
ಮನ್ಯರು ಹಿಂಸಾಕ್ರೀಡಾಪರರು

ಎಂದು ದೈತ್ಯರು ಮಕ್ಕಳ ಹಿಂಸೆಗೆ ಹೊರಟಿದ್ದನ್ನು ಮಾತ್ರ ಹೇಳಿದೆ. ಅಧ್ಯಾಯ ೫, ಶ್ಲೋಕ ೧-ಮಗು ಹುಟ್ಟಿದ ಮೇಲೆ ನಂದಗೋಪ ಮಗುವಿನ ಜಾತಕರ್ಮವನ್ನು ಮಾಡುತ್ತಾನೆ. ಪಿತೃ ದೇವತೆಗಳ ಪೂಜೆ ಮಾಡಿ ರತ್ನ. ಸುವರ್ಣ, ವಸ್ತ್ರ ಹಾಗೂ ಎಳ್ಳಿನ ದಾನಗಳನ್ನು ಮಾಡುತ್ತಾನೆ. ಇವುಗಳಲ್ಲಿ ಎಳ್ಳಿನ ದಾನದ ವಿಷಯ ಮಾತ್ರ ಪ್ರ.ಭಾ.ದಲ್ಲಿ ಬಂದಿಲ್ಲ. ಶ್ಲೋಕ ೪-೧೮ ರಲ್ಲಿ ಬರುವ ಕೃಷ್ಣ ಹುಟ್ಟಿದ ನಂತರದ ಗೋಕುಲದ ಸಂಭ್ರಮಗಳ ವರ್ಣನೆ ಪ್ರ.ಭಾ.ದಲ್ಲಿಯೂ ಕೀ. ೬, ನಂ. ೮—೧೪ ರಲ್ಲಿ ಸಂಗ್ರಹವಾಗಿ ಬಂದಿದೆ. ಹೀಗೆ ಸಂಗ್ರಹಿಸುವಾಗ ದಾಸರು ತಾತ್ವಿಕವಾದ ವಿವರಣೆಗಳನ್ನೂ, ಅನವಶ್ಯಕವೆನ್ನಿಸಿದ ವರ್ಣನೆಗಳನ್ನೂ ಕೈ ಬಿಟ್ಟಿದ್ದಾರೆ. ಹೀಗಾಗಿ ಮೂಲ ಭಾಗವತ ಕೃಷ್ಣಕಥೆ ಮತ್ತು ಧರ್ಮ ಎರಡನ್ನೂ ಸಮಪ್ರಮಾಣದಲ್ಲಿಯೇ ಬೆರೆಸಿಕೊಂಡು ನಡೆದರೆ, ಪ್ರ. ಭಾ, ದಲ್ಲಿ ತಾತ್ವಿಕವಾದ ಜಿಜ್ಞಾಸೆಗಳನ್ನು ಕಡಿಮೆ ಮಾಡಿ ಹರಿಕಥೆಗೇ ಹೆಚ್ಚಿನ ಒತ್ತನ್ನು ಕೊಡಲಾಗಿದೆ.

ಅ. ೫, ಶ್ಲೋಕ ೧೯-೩೦ : ನಂದನು ಕಂಸನಿಗೆ ಪ್ರತಿವರ್ಷ ಕೊಡುವಂತೆ ಈ ವರ್ಷದ ಕಪ್ಪವನ್ನು ತಂದು ಕೊಡುತ್ತಾನೆ. ಹೀಗೆ ಮಧುರೆಗೆ ಬಂದ ನಂದನನ್ನು ವಸುದೇವ ಬಂದು ಕಾಣುತ್ತಾನೆ. ಅವರಿಬ್ಬರಲ್ಲಿ ಕುಶಲಪ್ರಶ್ನೆಗಳಾಗಿ, ಪುರುಷಾರ್ಥಗಳ ಬಗ್ಗೆ

ತಾತ್ವಿಕವಾದ ಚರ್ಚೆಯೂ ನಡೆಯುತ್ತದೆ. ಪ್ರ. ಭಾ. ದಲ್ಲಿ ಕೀ. ೬, ನಂ. ೧೫ ರಲ್ಲಿ ಕಂಸನಿಗೆ ಕಪ್ಪ ತಂದುಕೊಟ್ಟ ನಂದನು ವಸುದೇವನನ್ನು ಕಂಡನು ಎಂದಷ್ಟೇ ಬರುತ್ತದೆ. ಅವರೊಳಗಿನ ದೀರ್ಘ ಮಾತುಕತೆಯ ವಿವರಗಳನ್ನು ಕೈಬಿಡಲಾಗಿದೆ. ಶ್ಲೋಕ ೩೧ ರಲ್ಲಿ ವಸುದೇವ ನಂದನಿಗೆ ಗೋಕುಲದಲ್ಲಿ ಉತ್ಪಾತಗಳಾಗುವ ಸೂಚನೆಗಳು ಕಾಣುತ್ತಿರುವುದಾಗಿ ಹೇಳಿದ ವಿಷಯ ಕೀ. ೬, ನು. ೧೬ ರಲ್ಲಿದೆ. ಶ್ಲೋಕ ೩೨ ರಲ್ಲಿ ನಂದ ಮೊದಲಾದ ಗೊಲ್ಲರೆಲ್ಲ ವಸುದೇವನ ಅನುಮತಿ ಪಡೆದು ಎತ್ತಿನಗಾಡಿಗಳಲ್ಲಿ ಗೋಕುಲಕ್ಕೆ ಹೊರಟ ಸಂಗತಿಯನ್ನು ಹೇಳಿದೆ. ಇದನ್ನು ಪ್ರ. ಭಾ. ದಲ್ಲಿ ಕೀ. ೬, ನು. ೧೬ ರ ಕೊನೆಯ ಸಾಲಿನಲ್ಲಿ 'ಯಮುನ ತಂಗಿಯ ತೀರಕೆ ಬಂದ' ಎಂಬಲ್ಲಿ ಸೂಚ್ಯವಾಗಿ ಹೇಳಲಾಗಿದೆ.

ಅಧ್ಯಾಯ ೬, ಶ್ಲೋಕ ೧ ರಲ್ಲಿ ನಂದಗೋಪನು ವಸುದೇವನ ಮಾತು ಎಂದಿಗೂ ಸುಳ್ಳಾಗದು ಎಂದು ಆಲೋಚಿಸುತ್ತ ಯಾವ ಅನಿಷ್ಟಗಳು ಸಂಭವಿಸುವುವೋ ಎಂದು ಭಯಪಡುತ್ತ ಶ್ರೀಹರಿಗೆ ಶರಣಾಗುತ್ತಾನೆ. ಈ ವಿಚಾರ ಪ್ರ. ಭಾ. ದಲ್ಲಿ ಬಂದಿಲ್ಲ. ಮೂ. ಭಾ. ದ ಪಾತ್ರಗಳ ಇಂಥ ಅಂತರಂಗಿಕ ಚಿತ್ರಗಳನ್ನು ದಾಸರು ಬಿಟ್ಟಿದ್ದು ಕಥೆಯ ಸಹಜ ನಡಿಗೆಯ ದೃಷ್ಟಿಯಿಂದ ಹಾಗೂ ಪಾತ್ರ ಪೋಷಣೆಯ ದೃಷ್ಟಿಯಿಂದ ಉಚಿತ ಎನ್ನಿಸುವುದಿಲ್ಲ.

ಇಲ್ಲಿಂದ ಮುಂದಕ್ಕೆ ಕೃಷ್ಣನ ಬಾಲಲೀಲೆಗಳು ಆರಂಭವಾಗುತ್ತವೆ. ಅ. ೬,ಶ್ಲೋಕ ೨-೧೭ ರಲ್ಲಿ ಕಂಸನಿಂದ ಕಳುಹಿಸಲ್ಪಟ್ಟ ಪೂತನೆಯು ಸುಂದರ ಸ್ತ್ರೀಯಾಗಿ ಬಂದು ಕೃಷ್ಣನಿಗೆ ಸ್ತನ್ಯಪಾನ ಮಾಡಿಸಲು ಹೋದಾಗ ಕೃಷ್ಣ ಸ್ತನ್ಯಪಾನ ಮಾಡುತ್ತಲೇ ಅವಳ ಪ್ರಾಣವನ್ನೂ ಹೀರುವ ಸಂಗತಿ ವಿವರವಾಗಿ ಸಹಜ ಸುಂದರವಾಗಿ ಬಂದಿದೆ. ಇದನ್ನೂ ದಾಸರು ಕೀ.೬, ನು. ೧೭-೧೯ ರ ಮೂರೇ ಮೂರು ಸಣ್ಣ ನುಡಿಗಳಲ್ಲಿ ತುಂಬ ಸಂಕ್ಷಿಪ್ತವಾಗಿ ಹೇಳಿ ಮುಗಿಸಿದ್ದಾರೆ. ಶ್ಲೋಕ ೧೮ ರ ವಿವರ ಕೀ.೭,ನು.೨ ರಲ್ಲಿ ಬಂದಿದೆ.ಎರಡೂ ಭಾಗವತಗಳ ಈ ಭಾಗವನ್ನು ಹೋಲಿಸಿದಾಗ ಪ್ರ.ಭಾ.ದಲ್ಲಿ ಮುಖ್ಯ ಕಥಾಂಶಕ್ಕೆ ಹೆಚ್ಚಿನ ನಷ್ಟವಾಗಿಲ್ಲ ಎಂದರೂ ಕೆಲವು ವಿವರಗಳನ್ನು ಹೊರತುಪಡಿಸಿದರೆ (ಶ್ಲೋಕ ೩ ರಂಥವು) ಕಾವ್ಯಾಂಶ ಮೂಲದಲ್ಲಿಯೇ ಚೆನ್ನಾಗಿ ಬಂದಿದೆ ಎನ್ನಿಸುತ್ತದೆ.

ಅ. ೬, ಶ್ಲೋಕ ೧೯-೩೦ ರಲ್ಲಿ ಕೃಷ್ಣನಿಗೆ ಮಾಡಿದ ರಕ್ಷೆಯ ವಿವರಗಳಿವೆ. ಇದನ್ನು ತುಂಬ ಸಂಕ್ಷಿಪ್ತವಾಗಿ ಕೀ. ೭, ನಂ. ೩, ೪ ರಲ್ಲಿ ಹೇಳಲಾಗಿದೆ. ಶ್ಲೋಕ ೩೧, ೩೨ ರ ವಿವರಗಳು ಹೆಚ್ಚು ವ್ಯತ್ಯಾಸವಿಲ್ಲದೆ ಕೀ. ೬, ನು. ೧೯, ೨೦ ರಲ್ಲಿ ಬಂದಿವೆ. ಕೀ. ೭ ರ ಪಲ್ಲವಿ ಹಾಗೂ ನು. ೧ ರ ಮಾತುಗಳು ಪೂತನೆಯ ಪ್ರಕರಣವನ್ನು ಕುರಿತ ದಾಸರ ವಿಮರ್ಶೆಯಂತಿವೆ. ಶ್ಲೋಕ ೩೩–೪೦ರಲ್ಲಿ ಪೂತನೆಯ ಶವದಹನ ಮತ್ತು ಅವಳಿಗೆ ಸದ್ಗತಿ ದೊರೆಯುವ ಕಾರಣವನ್ನು ಹೇಳಿದೆ. ಇದನ್ನೂ ಪ್ರ. ಭಾ. ದಲ್ಲಿ ಸಂಕ್ಷಿಪ್ತವಾಗಿ ಕೀ. ೭, ನು. ೫ ರಲ್ಲಿ ಹೇಳಲಾಗಿದೆ. ಮೂಲ ಭಾಗವತದ ಶ್ಲೋಕ ೪೧–೪೪ ರಲ್ಲಿಯ ವಿವರಗಳು ಪ್ರ. ಭಾ. ದಲ್ಲಿ ಬಂದಿಲ್ಲ. ಉಳಿದ ಮೂರು ಶ್ಲೋಕಗಳನ್ನು ಬಿಟ್ಟರೂ ನಂದನ ಪುತ್ರವಾತ್ಸಲ್ಯದ ಸುಂದರ ಚಿತ್ರವನ್ನು ಕೊಡುವ ಶ್ಲೋಕ ೪೩ ರ ವರ್ಣನೆಯನ್ನಾದರೂ

ದಾಸರು ಉಳಿಸಿಕೊಳ್ಳಬೇಕಿತ್ತು ಎನ್ನಿಸುತ್ತದೆ. ದಾಸರು ಯಾವುದೇ ಭಾಗವನ್ನೂ ವಿಸ್ತರಿಸದೆ ಎಲ್ಲವನ್ನೂ ಆದಷ್ಟು ಸಂಗ್ರಹವಾಗಿ ಹೇಳಲೆತ್ನಿಸಿರುವುದು ಇಲ್ಲಿಯವರೆಗೂ ಕಾಣಿಸುವ ಸಂಗತಿ. ಹೀಗೆ ಸಂಗ್ರಹಿಸುವಾಗ ಅನಗತ್ಯ ವಿವರಗಳನ್ನು ಕೈಬಿಟ್ಟಿರುವುದು ಸರಿಯೆನಿಸಿದರೂ; ಸಂದರ್ಭ,ಪಾತ್ರಗಳ ಬೆಳವಣಿಗೆಯ ದೃಷ್ಟಿಯಿಂದ ಅಗತ್ಯವಾದ ವಿವರಗಳನ್ನೂ ಕೈಬಿಟ್ಟಿರುವುದು ಈ ಕೀರ್ತನೆಗಳಲ್ಲಿ ಕಾಣಿಸುವ ಒಂದು ಮುಖ್ಯ ಕೊರತೆ ಎನ್ನಿಸುತ್ತದೆ.

ದಾಸರು ಮೂಲದ ವಿವರಗಳನ್ನು ತಮ್ಮ ಕೀರ್ತನೆಗಳಲ್ಲಿ ಸಂಗ್ರಹಿಸಿರುವಂತೆಯೇ ಅಗತ್ಯಕಂಡಲ್ಲಿ ಮೂಲಕಥಾನಕದಲ್ಲಿ ವಿಸ್ತರಣೆ ಮಾಡಿರುವುದನ್ನು ಕೆಲವೆಡೆ ಗಮನಿಸಬಹುದಾಗಿದೆ. ಕೀ. ೮ ಇದಕ್ಕೊಂದು ಒಳ್ಳೆಯ ನಿದರ್ಶನ. ಈ ಕೀರ್ತನೆ ದಾಸರ ಸ್ವಂತ ಸೃಷ್ಟಿಯಾಗಿದೆ. ಮೂಲದಲ್ಲಿಲ್ಲ. ಮಗು ಹುಟ್ಟಿದ ೧೨ನೆಯ ದಿನ ಮುತ್ತೈದೆಯರೆಲ್ಲ ಸೇರಿ ಮಗುವನ್ನು ಸಿಂಗರಿಸಿ ತೊಟ್ಟಿಲಿಗೆ ಹಾಕಿ ಜೋಗುಳ ಹಾಡಿ ನಾಮಕರಣ ಮಾಡುತ್ತಾರೆ. ಈ ಜೋಗುಳದ ಹಾಡಿನಲ್ಲಿ (ಕೀ. ೮, ನು. ೫–೭)ಹರಿಯ ದಶಾವತಾರದ ವರ್ಣನೆಯಿದೆ. ಒಟ್ಟಿನಲ್ಲಿ ಈ ಕೀರ್ತನೆ ಈ ಸಂದರ್ಭಕ್ಕೆ ಉಚಿತವಾದ ಸೇರ್ಪಡೆ ಎನ್ನಬಹುದು.

ಅಧ್ಯಾಯ ೭, ಶ್ಲೋಕ ೧–೩ ಪರೀಕ್ಷಿತ ರಾಜನು ಶುಕಮುನಿಗಳಿಗೆ ಕೃಷ್ಣನ ಬಾಲಲೀಲೆಗಳನ್ನು ಹೇಳಬೇಕೆಂದು ಪ್ರಾರ್ಥಿಸುವ ಈ ಭಾಗ ಪ್ರ.ಭಾ.ದಲ್ಲಿಲ್ಲ. ಶ್ಲೋಕ ೪ರ ವಿಷಯ ಕೀ. ೯, ನು. ೧ರಲ್ಲಿ ಅಲ್ಪ ವ್ಯತ್ಯಾಸದೊಂದಿಗೆ ಬಂದಿದೆ. ಮೂಲದ 'ಮಗುವು ಬೋರಲಾಗಿ ಮಲಗಿಕೊಂಡಾಗ' ಎನ್ನುವುದು, 'ರಂಗಗೆ ನಾಲ್ಕನೆಯ ತಿಂಗಳೊಳು' ಎಂದು ಬದಲಾಗಿದೆ. ಶ್ಲೋಕ ೫–೧೭ರಲ್ಲಿ ಶಕಟಾಸುರ ವಧೆಯ ವರ್ಣನೆ ಬಂದಿದೆ. ಇದು ಪ್ರ.ಭಾ.ದಲ್ಲಿ ಕೀ. ೯, ನು. ೨–೭ರಲ್ಲಿ ಸಂಗ್ರಹವಾಗಿ ಬಂದಿದೆ.ಆಪತ್ತಿಗೊಳಗಾಗಿದ್ದ ಕೃಷ್ಣನ ಬಗ್ಗೆ ವ್ಯಾಕುಲಗೊಂಡ ನಂದ ಯಶೋದೆಗೆ ಕೋಪದಿಂದ ಮಾತನಾಡುವುದು, ಆಕೆ ಪಶ್ಚಾತ್ತಾಪಡುವುದು–ಇಂಥ ಸಂದರ್ಭದಲ್ಲಿ ಕಾಣುವ ದಂಪತಿಗಳ ಸಾಮಾನ್ಯ ಚಿತ್ರವೊಂದನ್ನು ಇಲ್ಲಿ ದಾಸರು ಸೃಷ್ಟಿಸಿಕೊಂಡಿದ್ದಾರೆ–'ಹುಂಕರಿಸಿ ಗರ್ಜಿಸಿದ ಗೋಪಗೋಪಿಗೆ....... ನಾನಿನ್ನೆಚ್ಚತ್ತೆನೆಂದ್ಯಶೋದೆ' ಎಂಬ ನಾಲ್ಕು ಸಾಲುಗಳಲ್ಲಿ. (ಕೀ. ೯, ನು. ೫,೬) ಈ ಭಾಗ ಮೂಲದಲ್ಲಿಲ್ಲ. ಹಾಗೆಯೇ ಕೀ. ೧೦ರ ಬಲರಾಮನನ್ನು ಕುರಿತ ವಿವರಗಳೂ ಮೂಲದ ಈ ಸಂದರ್ಭದಲ್ಲಿಲ್ಲ.

ಅ. ೭, ಶ್ಲೋಕ ೧೮–೩೩ರಲ್ಲಿ ಬರುವ ತೃಣಾವರ್ತನ ವಧೆಯನ್ನು ಪ್ರ.ಭಾ.ದಲ್ಲಿ ಕೀ.೧೧, ನು.೪–೧೧ರಲ್ಲಿ ಸಂಗ್ರಹಿಸಿ ಹೇಳಲಾಗಿದೆ. ಮೂಲದಲ್ಲಿಯ, ತೃಣಾವರ್ತ ಮಗುವನ್ನು ಒಯ್ದಾಗ ಮಗನನ್ನು ಕಾಣದೆ ಯಶೋದೆ 'ಕರುವು ಸತ್ತ ಗೋವಿನಂತೆ ಶೋಕಿಸಿದಳು' (ಅ. ೭, ಶ್ಲೋಕ ೨೪) ಎಂಬ ವರ್ಣನೆ, ಪ್ರ.ಭಾ.ದಲ್ಲಿ'ವನವಿಲ್ಲದ ಮೀನದಂತಾವು ವತ್ಸವನು ಕಾಣದಂತೆ' (ನು.೭) ಎಂದು ಬದಲಾಗಿದೆ. ಮೂಲದ ಉಪಮೆಗಿಂತ ಈ ಉಪಮೆಗಳು ಸಂದರ್ಭಕ್ಕೆ ಹೆಚ್ಚು ಹೊಂದುತ್ತವೆ. ಮೂ.ಭಾ.ದಲ್ಲಿ ಸತ್ತು ಬಿದ್ದ ತೃಣಾವರ್ತ, 'ಮಹೇಶ್ವರನ ಬಾಣಾಘಾತದಿಂದ ನೆಲಕ್ಕೆ ಉರುಳಿದ ತ್ರಿಪುರವೊ

ಎಂಬಂತೆ' (ಶ್ಲೋಕ.೨೯) ಗೋಪಿಯರಿಗೆ ಕಂಡರೆ, ಪ್ರ.ಭಾ.ದಲ್ಲಿ ಅಚಲದಂತೆ ಬಿದ್ದನು ಎಂದಷ್ಟೇ ಹೇಳಿದೆ. ಶ್ಲೋಕ ೩೪–೩೭ರಲ್ಲಿ ಕೃಷ್ಣ ಯಶೋದೆಗೆ ಬಾಯಲ್ಲಿ ಜಗತ್ತನ್ನು ತೋರಿಸಿದ ವಿಚಾರವಿದೆ. ಇದನ್ನು ದಾಸರು ಕೀ.೧೧, ನು. ೧–೩ರಲ್ಲಿ ಹೆಚ್ಚಿನ ಬದಲಾವಣೆ ಇಲ್ಲದೆ ತಂದಿದ್ದಾರೆ.

ಅಧ್ಯಾಯ ೮, ಶ್ಲೋಕ ೧–೨೦: ಯಾದವರ ಪುರೋಹಿತರಾದ ಗರ್ಗರು ವಸುದೇವನಿಂದ ಪ್ರೇರಿತರಾಗಿ ಗೋಕುಲಕ್ಕೆ ಬರುತ್ತಾರೆ. ನಂದ ಇಬ್ಬರು ಮಕ್ಕಳಿಗೆ ನಾಮಕರಣಾದಿ ಸಂಸ್ಕಾರಗಳನ್ನು ಮಾಡಬೇಕೆಂದು ಕೇಳಿಕೊಂಡಾಗ, ಗರ್ಗರು ತಾನು ಇವರಿಗೆ ನಾಮಕರಣ ಮಾಡಿ, ಅದು ಕಂಸನಿಗೆ ತಿಳಿದರೆ ಅನರ್ಥವಾಗುತ್ತದೆಂದು ವಿವರಿಸುತ್ತಾರೆ. ಆಗ ನಂದ ಗುಟ್ಟಾಗಿ ಆ ಕಾರ್ಯ ನಡೆಸಿಕೊಡುವಂತೆ ಕೇಳಿಕೊಂಡಾಗ ಹಾಗೆಯೇ ಮಾಡಿ, ವಾಸುದೇವನು ನಾರಾಯಣ ಸಮಾನನು ಅವನನ್ನು ಎಚ್ಚರದಿಂದ ನೋಡಿಕೊಳ್ಳಬೇಕೆಂದು ಹೇಳಿ ತಮ್ಮ ಮನೆಗೆ ಹೋಗುತ್ತಾರೆ. ವಸುದೇವ ಹಾಗೂ ಗರ್ಗರ ನಡುವಿನ ಸಂಭಾಷಣೆ (ಶ್ಲೋಕ ೨–೧೦)ಯ ಭಾಗ ಪ್ರ.ಭಾ.ದ ಕೀ. ೧೨, ನು. ೪–೭ರಲ್ಲಿ ತುಂಬ ಸಂಗ್ರಹವಾಗಿ ಬಂದಿದೆ. ಅಲ್ಲದೆ ಮೂಲದಲ್ಲಿಯ ಗರ್ಗರು ಗುಟ್ಟಾಗಿ ನಾಮಕರಣ ಮಾಡಿದರು ಎಂಬ ವಿಷಯವನ್ನು ಬಿಟ್ಟು,

ಧೀರ ಮುನೀಂದ್ರ ಗರ್ಗಸುಭಯರಿಗೆ ಕ್ಷ
ತ್ರೇರ ಸಂಸ್ಕಾರ ಮಾಡಿದನಾಗೆ ೪

ಎಂದಷ್ಟೇ ಹೇಳಲಾಗಿದೆ. ಕೀ. ೮ರಲ್ಲಿ ಈ ಹಿಂದೆಯೇ ನಾಮಕರಣವಾದುದನ್ನು ಹೇಳಿರುವುದು ಇದಕ್ಕೆ ಕಾರಣ ಇರಬಹುದು.

ಅ. ೮, ಶ್ಲೋಕ ೨೧–೨೭ರಲ್ಲಿಯ ಬಾಲಕೃಷ್ಣನ ಚಿತ್ರ ಪ್ರ.ಭಾ.ದ ಕೀ. ೧೩, ನು. ೧–೧೫ರಲ್ಲಿ ಹೆಚ್ಚು ವ್ಯತ್ಯಾಸವಿಲ್ಲದೆ ಬಂದಿದೆ. ಕೀ. ೧೪ ಮೂರುನುಡಿಗಳ ಒಂದು ಜೋಗುಳದ ಹಾಡಾಗಿದ್ದು ಹೊಸತಾಗಿ ಸೇರಿಸಿದ್ದಾಗಿದೆ. ಹೀಗೆಯೇ ಕೀ. ೧೫, ನು.೧–೯ರಲ್ಲಿ ಬಾಲಕೃಷ್ಣನ ಮೋಹಕರೂಪ ಹಾಗೂ ಅಲಂಕಾರದ ವರ್ಣನೆಯಿದ್ದು, ಇಂಥ ಮಗನನ್ನು ನೋಡಿ ಹಿಗ್ಗುವ ಯಶೋದೆಯ ಚಿತ್ರವಿದೆ. ಈ ಭಾಗವೂ ಮೂ.ಭಾ. ದಲ್ಲಿಲ್ಲ.

ಅ. ೮, ಶ್ಲೋಕ ೨೮–೩೨ರ, ಗೋಪಿಯರು ಯಶೋದೆಗ ಕೃಷ್ಣನ ಚೇಷ್ಟೆಗಳ ಬಗ್ಗೆ ದೂರುಹೇಳುವ ಭಾಗ ಕೀ.೧೬ ಮತ್ತು ೧೭ರಲ್ಲಿ ಇನ್ನಷ್ಟು ವಿಸ್ತೃತವಾಗಿದೆ. ಕೆಲವು ವಿವರಗಳು ಹೊಸತಾಗಿ ಸೇರಿವೆ, ಕೆಲವು ಮಾರ್ಪಾಟಾಗಿವೆ. ಉದಾ.ಗೆ, ಮೂಲದಲ್ಲಿ ಗೋಪಿಯರು ಕೃಷ್ಣ, 'ಮನೆಯಂಗಳದಲ್ಲೇ ಮಲ ಮೂತ್ರಗಳನ್ನು ಮಾಡಿ ಬಿಡುತ್ತಾನೆ' ಎಂದರೆ, ಇಲ್ಲಿ–'ಇಷ್ಟೆಯ ದೇವರನಿಟ್ಟಿಹ ಜಗುಲಿಲಿ ವಿಷ್ಟಿಸಿ ಓಡಿದ ಅಟ್ಟಹಾಸದಲಿ' ಎಂದು ಸ್ಥಳವನ್ನು ಬದಲಿಸುವುದರ ಜೊತೆಗೆ 'ವಿಷ್ಟಾವಮೋದ ವಿಶಿಷ್ಟ ಕಸ್ತುರಿಗಂಪುಷ್ಟಾಯಿತು ಇನ್ನೆಷ್ಟುಸುರುವೆವೆ' ಎಂದೂ ಸೇರಿಸುತ್ತಾರೆ. ಕೀ. ೧೭ರ, ನು. ೭–೨೭ ಕೃಷ್ಣನ ಬಾಲಲೀಲೆಯ ವರ್ಣನೆಯಲ್ಲಿ ದಾಸರ ಕಲ್ಪನೆ ಗರಿಗೆದರುವ ಪರಿಗೆ ಉತ್ತಮ

ನಿದರ್ಶನವಾಗಿದೆ. ಈ ಭಾಗ ಮೂಲದಲ್ಲಿಲ್ಲ. ದಾಸರಿಗೆ ಪ್ರಿಯವಾದ ಬಾಲಕೃಷ್ಣನ ವರ್ಣನೆ ಇಲ್ಲಿ ತುಂಬ ಮೋಹಕವಾಗಿ ಬಂದಿದೆ. ಕೆಲವೆಡೆ ಈತ ನಿಜಕ್ಕೂ ಸಣ್ಣ ಬಾಲಕನೆ ? ಎಂದು ಆಚ್ಚರಿ ಹುಟ್ಟಿಸುವಂಥ ಚೇಷ್ಟೆಗಳ ವರ್ಣನೆಯೂ ಬಂದಿದೆ. ಉದಾ॥ ನಂ. ೧೬, ೧೭, ೨೨, ೨೪ ಇತ್ಯಾದಿ.

ದಾಸರು ಕೊಡುವ ಬಾಲಕೃಷ್ಣನ ಕೆಲವು ಮೋಹಕ ಚಿತ್ರಗಳು ಹೀಗಿವೆ :

ಹಟ್ಟಿಯ ದೇವರ ಗಟ್ಟಿಹಂಗಡದಲಿ
ಕಟ್ಟೆಳೆದೊಯ್ದನು ಬಟ್ಟ ಬಯಲಿನಲಿ ೮

ಮೊಸಲು ಮುರಿಯದಿರೊ ಸರ್ವೋತ್ತಮ
ಮೋಸಪ್ಪ ದೈವಾಕಾಶದ ಬೊಮ್ಮನು
ಘಾಸಿಯಾಗುವಿಯೆನೆ ಆಕಾಶದವಗೆ ನನ್ನ
ಮೊಸಲು ಬುಳ್ಳಿಯು ಲೇಸೆಂದೆನುವ ೧೫

ಶಿಶುಗಳ ಶಿಖಿವನು ಪಶುಗಳ ಬಾಲಕೆ
ಹೊಸೆದು ಗಂಟನು ಮಿಸುಳಿಸಿ ಕಟ್ಟುವ ೧೯

ಅ.೮, ಶ್ಲೋಕ ೩೩–೪೭ರ ವರೆಗಿನ ಕೃಷ್ಣ ಯಶೋದೆಗೆ ಬಾಯಲ್ಲಿ ಬ್ರಹ್ಮಾಂಡವನ್ನು ತೋರಿದ ದೀರ್ಘ ವಿವರ ಹಾಗೂ ಯಶೋದೆಯ ಚಿಂತನೆಯನ್ನು ಕೀ. ೧೮, ನಂ ೧–೯ರಲ್ಲಿ ಪ್ರತ್ಯೇಕವಾಗಿ ಹೇಳಿದ್ದಾರೆ. ಆದರೆ

ತಮ್ಮಂತಸ್ಥ ಬಾಹ್ಯಾಂತಸ್ಥ ತೋರಿ
ತಮ್ಮಮ್ಮನು ಬೆದರುವಳೆಂದೆನುತ
ತಾ ಮತ್ತೆ ಬೈಚಿಟ್ಟನು. . . . . .. .... ೪

ಎಂದಷ್ಟೇ ಹೇಳಿ ಮೂಲದಲ್ಲಿ ಬರುವ ಬ್ರಹ್ಮಾಂಡದ ವಿವರಗಳನ್ನು ಕೈಬಿಟ್ಟಿದ್ದಾರೆ. ಶ್ಲೋಕ ೪೬–೫೧ರವರೆಗಿನ ನಂದ ಯಶೋದೆಯರ ಪೂರ್ವವೃತ್ತಾಂತ ಪ್ರ. ಭಾ. ದಲ್ಲಿಲ್ಲ. ಈ ಭಾಗಗಳನ್ನು ಗಮನಿಸಿದರೆ ದಾಸರು ಕೃಷ್ಣನ ಬಾಲಲೀಲೆಗಳ ವರ್ಣನೆಯಲ್ಲಿ ಅವನ ಮಹಿಮೆಗಳನ್ನು ಸ್ತುತಿಸುವುದರಲ್ಲಿ ಹೆಚ್ಚು ಆಸಕ್ತರಾಗಿದ್ದು ಉಳಿದ ವಿವರಗಳನ್ನು ಕೈ ಬಿಡುತ್ತಾರೆ ಇಲ್ಲವೆ ಸೂಚ್ಯವಾಗಿ ಹೇಳುತ್ತಾರೆ ಎನ್ನುವುದು ಸ್ಪಷ್ಟವಾಗುತ್ತದೆ.ಬಾಲಕೃಷ್ಣನ ವರ್ಣನೆ, ಬಾಲಲೀಲೆಗಳನ್ನು ಮಾತ್ರ ಎಲ್ಲಿಯೂ ಸಂಗ್ರಹಿಸದೆ ಇನ್ನಷ್ಟು ವಿಸ್ತರಿಸುವುದನ್ನು ಕೀ. ೧೪–೧೭ರಲ್ಲಿ ಈ ಮೊದಲೇ ಗಮನಿಸಲಾಗಿದೆ.

ಅಧ್ಯಾಯ ೯, ಶ್ಲೋಕ ೧–೯ರಲ್ಲಿ ಬರುವ ಯಶೋದೆ ಮೊಸರು ಕಡೆಯುವ ಚಿತ್ರ ಕೀ. ೧೯ರಲ್ಲಿ ೧–೭ ನುಡಿಗಳಲ್ಲಿ ಹೆಚ್ಚಿನ ವಿವರಗಳೊಡನೆ ಪ್ರತ್ಯೇಕವಾದ ಹಾಡಾಗಿ ಬಂದಿದೆ. ಅ. ೯, ಶ್ಲೋಕ ೪–೧೦ರಲ್ಲಿ ಬರುವ ಭಾಗ ಕೀ. ೨೦ರಲ್ಲಿ 'ರಂಗ ಗೋಕುಲದೊಳಗಾಡಿದ' ಎಂಬ ಪ್ರಾರಂಭದೊಡನೆ ೫ ಚಿಕ್ಕ ಚಿಕ್ಕ ನುಡಿಗಳಲ್ಲಿ ಸಂಗ್ರಹಗೊಂಡು

ಬಂದಿದೆ. ಶ್ಲೋಕ ೮ ರಲ್ಲಿಯ ಕೃಷ್ಣನಂ ಕೋತಿಗೆ ಬೆಣ್ಣೆ ತಿನ್ನಿಸುವ ಚಿತ್ರವನ್ನೂ ಪ್ರ. ಭಾ. ದಲ್ಲಿ ಉಳಿಸಿಕೊಂಡಿದ್ದರೆ ತುಂಟ ಕೃಷ್ಣನ ಚಿತ್ರಕ್ಕೆ ಮತ್ತಷ್ಟು ಕಳೆ ಏರುತ್ತಿತ್ತು ಎನ್ನಿಸುತ್ತದೆ. ಯಶೋದೆ ಕೃಷ್ಣನನ್ನು ಹಿಡಿದು ಒರಳಿಗೆ ಕಟ್ಟುವುದು, ನಳಕೂಬರರ ಶಾಪದ ಕಾರಣ, ಕೃಷ್ಣನಿಂದ ಅವರ ಶಾಪ ವಿಮೋಚನೆ—ಇವು ಅ. ೯ ರ ಶ್ಲೋಕ ೧೧ ರಿಂದ ಅ. ೧೧, ಶ್ಲೋಕ ೬ ರವರೆಗೆ ವಿಸ್ತಾರವಾಗಿ ಬಂದಿವೆ. ಈ ಭಾಗ ಪ್ರ. ಭಾ. ದಲ್ಲಿ ಕೀ. ೨೧ರ ೭ ನುಡಿಗಳಲ್ಲಿ ತುಂಬ ಸಂಕ್ಷಿಪ್ತವಾಗಿ ಬಂದಿದೆ. ಹೀಗಿದ್ದೂ ಕೆಲವೆಡೆ ಮೂಲವನ್ನು ಬಹುಮಟ್ಟಿಗೆ ಅನುಸರಿಸಿರುವುದು ಕಾಣಿಸುತ್ತದೆ. ಉದಾ. ಗೆ, ಅ. ೧೦, ಶ್ಲೋಕ ೩೮ ಮತ್ತು ಕೀ. ೨೧ರ ನು. ೫, ೬ರಲ್ಲಿರುವ ಸಾಮ್ಯವನ್ನು ಗಮನಿಸಬಹುದು.

ಅ. ೧೧, ಶ್ಲೋಕ ೭-೧೧ ರಲ್ಲಿ ಬರುವ ಬಾಲಕೃಷ್ಣನ ವರ್ತನೆಯ ಕೆಲವು ವಿವರಗಳು ಪ್ರ. ಭಾ. ದಲ್ಲಿ ಬಂದಿಲ್ಲ. ಶ್ಲೋಕ ೧೨–೨೦ರಲ್ಲಿ ಕೃಷ್ಣನ ಜನ್ಮ ನಕ್ಷತ್ರದಂದು ಯಶೋದೆ ಹೊರಗೆ ಆಡುತ್ತಿದ್ದ ಬಲರಾಮ ಕೃಷ್ಣರನ್ನು ಊಟಕ್ಕೆ ಕರೆಯುವ ಭಾಗ ಕೀ. ೨೨ರ ೫ ನುಡಿಗಳಲ್ಲಿ ಸಂಗ್ರಹವಾಗಿ ಬಂದಿದೆ. ಇಲ್ಲಿ ಅಂದು ಕೃಷ್ಣನ ಜನ್ಮನಕ್ಷತ್ರ ಎಂಬ ವಿಷಯವನ್ನು ಹೇಳದೆ, ಆ ಕಾರಣದಿಂದ ಮಾಡುವ ಕಾರ್ಯಗಳಷ್ಟನ್ನೇ ಹೇಳಲಾಗಿದೆ. ಈ ಕೀರ್ತನೆಯ ಅನುಪಲ್ಲವಿಯ ಮಾತುಗಳು ಮೂಲದಲ್ಲಿಲ್ಲ. ಮೂಲದ ಈ ಭಾಗಕ್ಕೂ ಈ ಕೀರ್ತನೆಗೂ ವಿವರಗಳಲ್ಲಿ ಇಂಥ ಕೆಲವು ವ್ಯತ್ಯಾಸಗಳಿದ್ದರೂ ಈ ಕೀರ್ತನೆ ಪ್ರತ್ಯೇಕವಾಗಿ ನೋಡಿದಾಗ ಸುಂದರವಾಗಿಯೇ ಬಂದಿದೆ ಎನ್ನಿಸುತ್ತದೆ.

ಅ. ೧೧, ಶ್ಲೋಕ ೨೧-೪೦ : ಗೋಕುಲದಲ್ಲಿ ಅನೇಕ ವಿಧವಾದ ಅನಿಷ್ಟಗಳು ಸಂಭವಿಸಿದ್ದರಿಂದ ಗೋಪರೆಲ್ಲ ಒಟ್ಟಾಗಿ ಸೇರಿ ಬೃಂದಾವನಕ್ಕೆ ಹೋಗಲು ನಿರ್ಧರಿಸುತ್ತಾರೆ. ಬೃಂದಾವನಕ್ಕೆ ಹೋಗುವ ಸೂಚನೆಯನ್ನು ಕೊಟ್ಟು ಮಾತನಾಡುವವನು ಉಪನಂದನೆಂಬ ವೃದ್ಧಗೋಪ. ನಿರ್ಧರಿಸಿದಂತೆಯೇ ಅವರೆಲ್ಲ ಗೋವುಗಳೊಡನೆ ಬೃಂದಾವನಕ್ಕೆ ಹೋಗಿ ನದೀತೀರದಲ್ಲಿ ನೆಲಸುತ್ತಾರೆ. ಅಲ್ಲಿ ರಾಮಕೃಷ್ಣರು ದನಗಳನ್ನು ಕಾಯುತ್ತ ಕೊಳಲೂದುತ್ತ, ವಿವಿಧ ಆಟಗಳಿಂದ ಎಲ್ಲರನ್ನೂ ರಂಜಿಸುತ್ತಾರೆ.-ಈ ಭಾಗದ ಕೆಲವು ವಿಷಯಗಳು ಕೀ. ೨೩ರಲ್ಲಿ ಸಂಗ್ರಹವಾಗಿ ಬರುತ್ತದೆಯಾದರೂ, ಗೋಪಾಲಕರೆಲ್ಲ ಒಟ್ಟಾಗಿ ಸೇರಿ ಚರ್ಚಿಸಿ ಬೃಂದಾವನಕ್ಕೆ ಹೋಗಲು ನಿಶ್ಚಯಿಸುವುದು, ಉಪನಂದನ ಮಾತುಗಳು-ಇವೆಲ್ಲ ಪ್ರ. ಭಾ. ದ ಈ ಕೀರ್ತನೆಯಲ್ಲಿ ಬಂದಿಲ್ಲ. ಹಾಗೆಯೆ ಕೀ. ೨೩, ನು. ೧ರ ಉತ್ತರಾರ್ಧದ ವಿಷಯ ಮೂಲದಲ್ಲಿಲ್ಲ.

ಅ. ೧೧, ಶ್ಲೋಕ ೪೧-೪೪ ರಲ್ಲಿ ವತ್ಸಾಸುರವಧೆಯ ವಿಷಯವಿದೆ. ಇದು ಕೀ. ೨೪ ರ ನು. ೨ರ ಮೊದಲನೆಯ ಸಾಲಿನಲ್ಲಿ ತೀರ ಸಂಗ್ರಹವಾಗಿ ಬಂದಿದೆ. ಮೂಲದಲ್ಲಿ ಕೃಷ್ಣ ವತ್ಸಾಸುರನನ್ನು ಕೊಂದ ಚಿತ್ರ ತುಂಬ ಸಹಜ ಸುಂದರವಾಗಿ ಬಂದಿದೆ. ಕೃಷ್ಣ ವತ್ಸರೂಪಧಾರಿಯಾದ ಆ ದೈತ್ಯನನ್ನು ಅರಿಯದಂತೆ ಬಳಿ ಸಾರಿ ಅದರ ಹಿಂದಿನ ಕಾಲುಗಳನ್ನು ಹಿಡಿದು ಗರಗರನೆ ವೇಗವಾಗಿ ತಿರುಗಿಸಿದಾಗ, ಅಷ್ಟರಲ್ಲೇ ಸಾವನ್ನಪ್ಪಿದ ಅವ

ನನ್ನು ಒಂದು ಬೇಲದ ಮರದ ತುದಿಗೆ ಎಸೆದಾಗ, ಬೃಹದಾಕಾರದ ಮೈಯುಳ್ಳ ಆತ ಅನೇಕ ಬೇಲದ ಹಣ್ಣುಗಳನ್ನು ಕೆಳಗೆ ಬೀಳಿಸುತ್ತ ಅವುಗಳೊಡನೆ ತಾನೂ ಬೀಳುತ್ತಾನೆ. ಪ್ರ.ಭಾ.ದಲ್ಲಿ ಇದನ್ನು "ವೃಕ್ಷದ ತುದಿಗೊಗೆದವನ ಮಡುಹೆ" (ಕೀ. ೨೪, ಸು. ೨) ಎಂದಷ್ಟೇ ಹೇಳಿ ಮುಗಿಸಲಾಗಿದೆ. ದೇವತೆಗಳು ಹೂಮಳೆಗರೆದು ಹೊಗಳುವ ವಿವರ ಗಳನ್ನು ಕೈ ಬಿಟ್ಟರೂ, ಹೆಚ್ಚು ವಿಸ್ತಾರವಿಲ್ಲದ ಮೂಲದ ಇಂಥ ಅಗತ್ಯದ ವಿವರಗಳ ನ್ನಾದರೂ ಇಲ್ಲಿ ಉಳಿಸಿಕೊಳ್ಳಬೇಕಿತ್ತು ಎನ್ನಿಸುತ್ತದೆ.

ಅ. ೧೧, ಶ್ಲೋಕ ೪೫ರಲ್ಲಿಯ ರಾಮಕೃಷ್ಣರು ತಂಗಳುಬುತ್ತಿಯೊಡನೆ ದನ ಕಾಯುತ್ತಿದ್ದ ವಿಚಾರವನ್ನು, ಕೀ. ೨೩, ಸು. ೯ರ ಮೂರನೆಯ ಸಾಲಿನಲ್ಲಿ 'ಆಕಳ ಕಾಯ್ವರ ಕೂಡಿದ ಕೀರ್ತಿ' ಎಂದಷ್ಟೇ ಸೂಚಿಸಿ ಕೈ ಬಿಟ್ಟಿದ್ದಾರೆ. ಶ್ಲೋಕ ೪೬-೫೮ ರಲ್ಲಿ ಕೃಷ್ಣನನ್ನು ಕೊಲ್ಲ ಬಂದ ಬಕಾಸುರನನ್ನು ಕೃಷ್ಣ ಕೊಲ್ಲುವುದು, ಬದುಕಿ ಬಂದ ಕೃಷ್ಣನನ್ನು ಕಂಡು ಎಲ್ಲರಿಗೂ ಆನಂದವಾಗುವುದು, ಗರ್ಗಾಚಾರ್ಯರು ಹೇಳಿದ್ದೆಲ್ಲವೂ ನಿಜವಾಗುತ್ತಿದೆ ಎಂದು ನಂದ ಚಿಂತಿಸುವುದು-ಈ ವಿವರಗಳಿವೆ. ಈ ಭಾಗವನ್ನು ಪ್ರ. ಭಾ.ದ ಕೀ. ೨೪, ಸು. ೨–೬ರಲ್ಲಿ ಹೇಳಲಾಗಿದೆಯಾದರೂ ವಿವರಗಳಲ್ಲಿ ಕೆಲವು ವ್ಯತ್ಯಾಸ ಗಳಾಗಿವೆ. ಮೂಲದಲ್ಲಿ ಕೃಷ್ಣನನ್ನು ಬಕ ಮೊದಲಿಗೆ ನುಂಗಿದರೂ ಆತ ಬೆಂಕಿಯಂತೆ ದವಡೆಗಳನ್ನು ಸುಟ್ಟಿದ್ದರಿಂದ ಆ ಕ್ಷಣವೇ ಉಗುಳಿ ಬಿಡುತ್ತಾನೆ. ಅದನ್ನು–

ಹರಿಕರಪಲ್ಲವ ಅವನ ವದನವಲಿ
ತುರುಕಲು ಉರಿದು ಕಾರಿದನು. . . (ಕೀ. ೨೪, ಸು. ೩)

ಎಂದು ಬದಲಿಸಲಾಗಿದೆ. ಮತ್ತೆ ಬಕ ಕೋಪದಿಂದ ಕೃಷ್ಣನನ್ನು ಕುಕ್ಕಲು ಹೋದಾಗ, ಕೃಷ್ಣ ಅವನ ಕೊಕ್ಕುಗಳನ್ನು ಹಿಡಿದು ವಿನೋದದಿಂದ ಜೊಂಡು ಹುಲ್ಲನ್ನು ಸೀಳುವಂತೆ ಸೀಳಿ ಹಾಕುತ್ತಾನೆ. ಇಲ್ಲಿ ಸಂದರ್ಭೋಚಿತವಾಗಿದ್ದ ಜೊಂಡು ಹುಲ್ಲನ್ನು ಸೀಳುವಿಕೆಯ ಉಪಮೆಯನ್ನು ಬಿಡಲಾಗಿದೆ. ಈ ಎರಡು ಸಂದರ್ಭಗಳಲ್ಲಿಯ ಮೂಲದ ವಿವರ ಗಳನ್ನು ಬಹುಮಟ್ಟಿಗೆ ತಂದಿದ್ದರೂ ವತ್ಸಾಸುರನ ವಧೆಯಲ್ಲಾಗಲೀ, ಬಕಾಸುರನ ವಧೆಯ ಸಂದರ್ಭದಲ್ಲಾಗಲೀ ಅಗತ್ಯ ಸನ್ನಿವೇಶದ ನಿರ್ಮಾಣ ಮೂಲದಲ್ಲಿದ್ದಂತೆ ಇಲ್ಲಿ ಆಗಿಲ್ಲ. ಇಲ್ಲೆಲ್ಲ ದಾಸರು ಇದ್ದಕ್ಕಿದ್ದಂತೆ 'ಕುತ್ಸಿತ ಮತಿ ಕಂಸನ ಭಟನೊಬ್ಬನು ವತ್ಸಾಕೃತಿ ಯಲಿ ಬಂದ' ಎಂದೋ, 'ಬಕಪಕ್ಷಿಯ ತೆರ ಖಳನೋರ್ವ....ಭಕ್ಷಿಸಲಿಕ್ಕವ ಬಂದ' ಎಂದೋ ಪ್ರಾರಂಭಿಸಿ ಬಿಡುತ್ತಾರೆ. ಆ ಹೊತ್ತು ರಾಮಕೃಷ್ಣರು, ಗೋಪರು ಎಲ್ಲಿದ್ದರು, ಏನು ಮಾಡುತ್ತಿದ್ದರು-ಈ ಯಾವ ವಿವರವನ್ನೂ ಕೊಡುವುದಿಲ್ಲ. ಇದರಿಂದ ಮುಖ್ಯ ಕಥಾಂಶಗಳ ವರದಿ ಮಾತ್ರ ಆಗುತ್ತಿರುವಂತೆ ಕಂಡು, ಅದು ಘಟನಾತ್ಮಕವಾಗಿ ಮನಸ್ಸಿಗೆ ತಟ್ಟುವುದಿಲ್ಲ. ಇಂಥ ಕೊರತೆ ಇನ್ನೂ ಅನೇಕ ಸಂದರ್ಭಗಳಲ್ಲಿ ಕಾಣಿಸುತ್ತದೆ.

ಶ್ಲೋಕ ೫೯ರಲ್ಲಿ ರಾಮಕೃಷ್ಣರು ವಿವಿಧ ಆಟಗಳಲ್ಲಿ ಬಾಲ್ಯಾವಸ್ಥೆಯನ್ನು ಕಳೆದ ದ್ದನ್ನು ಸಂಗ್ರಹವಾಗಿ ಹೇಳಿದ್ದರೆ, ಪ್ರ.ಭಾ.ದಲ್ಲಿ ಕೀ. ೨೪,ಸು. ೭ರಲ್ಲಿ–

ಗೋಪರು ಗೋಪಿಯರಾಪ್ತಗಳು ತರುಲತೆ
ದೇವಾಂಶರು ಪ್ರಜರೆಲ್ಲ
ಶ್ರೀವರ ಪ್ರಸನ್ವೆಂಕಟ ಕೃಷ್ಣರೇಯನ
ಭಾವುಕರ್ ಮಾನವರಲ್ಲ

ಎಂದು ಬಂದಿದೆ.

ಅ. ೧೨, ಶ್ಲೋಕ ೧-೧೨ರಲ್ಲಿ ವನಭೋಜನಕ್ಕಾಗಿ ಕೃಷ್ಣ ಜೊತೆಗಾರರೊಡನೆ ವನಕ್ಕೆ ಹೋದದ್ದು, ಅಲ್ಲಿ ಅವರ ವಿವಿಧ ವಿನೋದಗಳ ವರ್ಣನೆ ಬಂದಿದೆ. ಇದಕ್ಕೂ ಕೀ. ೨೫, ನು. ೧–೭ರ ವರ್ಣನೆಗಳಿಗೂ ಸಾಮ್ಯವಿದೆಯಾದರೂ, ನು. ೭ರಲ್ಲಿ ಬರುವ 'ಲೋಲಾಕ್ಷಿಯರೊಳು ನೋಟ ಬೇಟ' ಮೂಲದಲ್ಲಿ ಇನ್ನೂ ಆರಂಭವಾಗಿಲ್ಲ. ಅಲ್ಲದೆ ಪ್ರ.ಭಾ.ದಲ್ಲಿ ಮೂಲದ ವನಭೋಜನದ ಪ್ರಸ್ತಾಪ ಇಲ್ಲ. ಅ. ೧೨, ಶ್ಲೋಕ ೧೩–೩೮ರಲ್ಲಿ ಬಕಾಸುರನ ತಮ್ಮ ಅಘಾಸುರನ ವಧೆಯ ವಿಸ್ತಾರವಾದ ವರ್ಣನೆಯಿದೆ. ಅ. ೧೨, ಶ್ಲೋಕ ೩೯ರಿಂದ ಅ. ೧೪ ಶ್ಲೋಕ ೬೧ರಲ್ಲಿ, ಅಘಾಸುರ ವಧೆಯಾದದ್ದು ಕೃಷ್ಣನ ಐದನೆಯ ವಯಸ್ಸಿನಲ್ಲಿ. ಆದರೆ ಅದು ಇತರರಿಗೆ ಒಂದು ವರ್ಷದ ನಂತರ ತಿಳಿಯುತ್ತದೆ. ಈ ಮಧ್ಯೆ ಬ್ರಹ್ಮ ಕೃಷ್ಣನನ್ನು ಪರೀಕ್ಷಿಸಿ, ಸೋತು, ಕೊನೆಗೆ ಕೃಷ್ಣನನ್ನು ಸ್ತುತಿಸಿ ಸತ್ಯ ಲೋಕಕ್ಕೆ ಹೋಗುತ್ತಾನೆ. ಕೃಷ್ಣಮಹಿಮೆಯನ್ನು ತೋರುವ ಅಘಾಸುರ ವಧೆ ಮತ್ತು ಬ್ರಹ್ಮ ಕೃಷ್ಣನನ್ನು ಪರೀಕ್ಷಿಸಿ ಸೋಲುವ ಪ್ರಸಂಗ-ಇವೆರಡೂ ಪ್ರ.ಭಾ.ದಲ್ಲಿಲ್ಲ.

ಅ. ೧೫. ಶ್ಲೋಕ ೧-೮ರಲ್ಲಿ ಕೃಷ್ಣ ಬೃಂದಾವನದಲ್ಲಿ ಓಡಾಡುತ್ತ, ಅಲ್ಲಿಯ ಸೌಂದರ್ಯವನ್ನು ಆಸ್ವಾದಿಸುತ್ತ ಬಲರಾಮನ ಸ್ತುತಿ ಮಾಡುತ್ತಾನೆ. ಈ ಭಾಗ ಕೀ. ೨೫ರ ನು. ೮–೧೩ರಲ್ಲಿ ಬಂದಿದೆಯಾದರೂ ವಿವರಗಳಲ್ಲಿ ಅಲ್ಲಲ್ಲಿ ವ್ಯತ್ಯಾಸಗಳಿವೆ. 'ಫಲವತಿ ಪುಷ್ಪಿಣಿಯರು ತುಂಬಿದ ಉಡಿಯಲಿ ಹಿರಿಯರಿಗೆ ವಂದಿಪ ತೆರದಿ' (ನು. ೧೧) ಎಂಬ ಉಪಮೆ ಮೂಲದಲ್ಲಿಲ್ಲ. ಇಲ್ಲಿ ಸಂದರ್ಭೋಚಿತವಾಗಿ ಬಂದಿದೆ. ಹೀಗೆಯೇ ಕೀ. ೨೫ರ ನು. ೧೪-೧೬ ದಾಸರ ಸ್ವತಂತ್ರಸೃಷ್ಟಿಯಾಗಿದೆ. ಮೂಲದಲ್ಲಿ ಇನ್ನೂ 'ಹರಿನೋಟಸ್ಮರಶರಪೀಡಿತ' ಗೋಪಿಯರ ಚಿತ್ರ ಬಾರದಿದ್ದರೂ ದಾಸರು ತಮ್ಮ ಈ ಕೀರ್ತನೆಯಲ್ಲಿ ಸೇರಿಸಿದ್ದಾರೆ. ಅವರದೇ ಆದ ವರ್ಣನಾ ವೈಖರಿಗೆ ನು. ೧೫ನ್ನು ಗಮನಿಸಬಹುದಾಗಿದೆ–

ಕುಡಿತೆಗಣ್ ಮಡದಿಯರ ಮುಡಿ ನುಡಿ ಪಲ್ ಮೊಲೆ
ನಡು ನಡೆಗ್ಹರಿಣ ಮಯೂರ ಕೀರ
ದಾಳಿಮೇಭ ಹರಿಯಂಜಿಯಡವಿಗಿಡ
ಮಡುವಿಡಿದವು ನಾಚಿಕೆ ಹಿಡಿದು

ಅ. ೧೫, ಶ್ಲೋಕ ೯–೧೯ರಲ್ಲಿ ಕೃಷ್ಣ ಬಲರಾಮ ಹಾಗೂ ಗೋಪಬಾಲಕರ ಬೃಂದಾವನ ವಿಹಾರ, ಅವರ ಆಟಗಳು, ಅಲ್ಲಿಯ ಮರಗಳ ಕೆಳಗೆ ಬಲರಾಮ, ಕೃಷ್ಣರು

ಮಲಗುತ್ತಿದ್ದುದು. ಕೃಷ್ಣ ಅಣ್ಣನಿಗೆ ಕಾಲೊತ್ತುತ್ತಿದ್ದುದು, ಕೃಷ್ಣನಿಗೆ ಇತರ ಬಾಲಕರು ಆತನ ಪಾದ ಒತ್ತುತ್ತ ಬೀಸಣಿಗೆಯಿಂದ ಬೀಸುತ್ತಿದ್ದುದು ಇತ್ಯಾದಿಗಳ ವರ್ಣನೆಯಿದೆ. ಈ ಭಾಗ ಕೀ. ೨೬, ನು. ೧–೧೫ ರಲ್ಲಿ ಕೆಲವು ವ್ಯತ್ಯಾಸಗಳೊಂದಿಗೆ ಬಂದಿದೆ. ನು. ೨, ೧೧, ೧೪, ೧೫ ರಲ್ಲಿಯ ಕೃಷ್ಣಸ್ತುತಿಯ ಮಾತುಗಳು ಮೂಲದ ಭಾವದ ವಿಸ್ತರಣೆಗಳಾಗಿವೆ. ನು. ೯ರ 'ಪಾದ ಮಹಿಮೆ'ಯ ಸ್ತುತಿ ದಾಸರ ಸ್ವಂತ ಸೃಷ್ಟಿಯಾಗಿದೆ.

ಅ. ೧೫, ಶ್ಲೋಕ ೨೦–೪೬ : ಒಂದು ಸಲ ಬಲರಾಮ ಕೃಷ್ಣರ ಗೆಳೆಯರಾದ ಶ್ರೀದಾಮ ಮೊದಲಾದವರು ರಾಮಕೃಷ್ಣರಿಗೆ, 'ತಾಳೆವನದಲ್ಲಿರುವ ಧೇನುಕಾಸುರನಿಂದಾಗಿ ತಾಳೆಹಣ್ಣುಗಳು ಯಾರಿಗೂ ಸಿಕ್ಕುತ್ತಿಲ್ಲ. ನಮಗೆ ದೊರಕಿಸಿಕೊಡು' ಎಂದು ಕೇಳುತ್ತಾರೆ. ಅದರಂತೆ ಅವರೆಲ್ಲ ತಾಳೆವನಕ್ಕೆ ಹೋಗುತ್ತಾರೆ. ಬಲರಾಮ ಧೇನುಕಾಸುರನನ್ನು ಕೊಲ್ಲುತ್ತಾನೆ. ಉಳಿದ ಆತನ ಬಂಧುಗಳನ್ನು ಅವರಿಬ್ಬರೂ ಸೇರಿ ಸಂಹರಿಸುತ್ತಾರೆ. ತಾಳೆಹಣ್ಣುಗಳು ಎಲ್ಲರಿಗೂ ಸಿಕ್ಕುತ್ತವೆ. ದೇವತೆಗಳು ಹೂಮಳೆಗರೆಯುತ್ತಾರೆ. ಹಿಂದಿರುಗಿದ ಅವರನ್ನು ಹೆತ್ತವರು ಉಪಚರಿಸುತ್ತಾರೆ.–ಈ ಭಾಗ ಹೆಚ್ಚಿನ ವ್ಯತ್ಯಾಸಗಳಿಲ್ಲದೆ ಕೀ. ೨೭, ನು. ೧-೧೬ ರಲ್ಲಿ ಬಂದಿದೆ. ನು. ೧೭, ಕೀರ್ತನೆಯ ಕೊನೆಯ ನುಡಿಯಾಗಿದ್ದು, ಇಲ್ಲಿಯ ಕೃಷ್ಣಸ್ತುತಿ ದಾಸರ ಸ್ವಂತ ಸೃಷ್ಟಿಯಾಗಿದೆ. ಇದು ಬಹುಪಾಲು ಮುಂದಿನ ಕೀ. ಗಳ ಅಂತ್ಯದಲ್ಲಿ ಸಾಮಾನ್ಯವಾಗಿ ಕಾಣುವ ಅಂಶವಾಗಿದೆ.

ಅ. ೧೫, ಶ್ಲೋಕ ೪೭-೫೨ : ಒಂದು ಸಾರಿ ಬಲನನ್ನು ಬಿಟ್ಟು ಕೃಷ್ಣನು ಗೋಪಾಲಕರನ್ನು ಕೂಡಿಕೊಂಡು ಯಮುನಾನದಿಗೆ ಹೋದಾಗ ಅಲ್ಲಿಯ ವಿಷಮಯವಾಗಿದ್ದ ನೀರನ್ನು ಕುಡಿದ ಗೋವು, ಗೋವಳರೆಲ್ಲ ಸತ್ತು ಬೀಳುತ್ತಾರೆ. ಆಗ ಕೃಷ್ಣ ತನ್ನ ಕರುಣಾ ಕಟಾಕ್ಷದಿಂದ ಅವರೆಲ್ಲರನ್ನು ಬದುಕಿಸುತ್ತಾನೆ.–ಈ ಭಾಗ ಕೀ. ೨೮, ನು. ೩-೫ ರಲ್ಲಿ ಬಂದಿದೆ. ನು. ೧, ೨ರಲ್ಲಿ ಬಂದಿರುವ, ವಿಷಮಯವಾದ ನೀರಿನಿಂದ ಯಮುನೆಯ ತೀರದ ಮೇಲಿನ ಎಲ್ಲ ಗಿಡ ಬಳ್ಳಿಗಳು ನಾಶವಾದರೂ ಕದಂಬ ವೃಕ್ಷವು ನಾಶಹೊಂದಲಿಲ್ಲ. ಗರುಡನು ಒಮ್ಮೆ ಅಮೃತಕಲಶವನ್ನು ಒಯ್ಯುವಾಗ ಅದರ ಮೇಲೆ ಇಟ್ಟಿದ್ದರಿಂದ ಅದು ಉಳಿಯಿತು ಎಂಬ ವಿಚಾರ ಮೂಲದಲ್ಲಿಲ್ಲ. ನು. ೬, ೭ ರಲ್ಲಿಯ ಗೋವಳರ ಪ್ರಾರ್ಥನೆಯ ವಿಚಾರವೂ ಮೂಲದಲ್ಲಿಲ್ಲ. ದಾಸರು ಮೂಲದಲ್ಲಿಲ್ಲದಿದ್ದರೂ ಆಸ್ಪದವಿರುವಲ್ಲೆಲ್ಲ ಕೃಷ್ಣಸ್ತುತಿಯನ್ನು ಸೇರಿಸುವ ಪರಿಗೆ ಈ ಸಂದರ್ಭ ನಿದರ್ಶನವಾಗಿದೆ.

ಅ. ೧೬, ಶ್ಲೋಕ ೧-೬೮ರಲ್ಲಿ ಕಾಳಿಯ ಮದಹರಣದ ವರ್ಣನೆ ಬಂದಿದೆ. ಶ್ಲೋಕ ೧-೫ರ ವಿವರಗಳು ಪ್ರ. ಭಾ. ದಲ್ಲಿಲ್ಲ. ಶ್ಲೋಕ ೬-೧೬ರ ವಿವರಗಳು ಕೀ. ೨೮, ನು. ೮-೧೬ ರಲ್ಲಿ ಹೆಚ್ಚಿನ ವ್ಯತ್ಯಾಸಗಳಿಲ್ಲದೆ ಬಂದಿವೆ. ಶ್ಲೋಕ ೧೬ ರಲ್ಲಿ ಗೋಪ ಗೋಪಿಯರೆಲ್ಲ ಅಪಶಕುನಗಳಿಂದ ಕಾತರರಾಗಿ ಕೃಷ್ಣನನ್ನು ನೋಡ ಹೊರಟರೆ, ತನ್ನ ತಮ್ಮನ ಮಹಿಮೆಯ ಅರಿವಿದ್ದ ಬಲರಾಮ ಅವರನ್ನು ನೋಡಿ ನಕ್ಕು ಸುಮ್ಮನಾಗುತ್ತಾನೆ. ಈ ಸಂಗತಿ ಪ್ರ. ಭಾ. ದಲ್ಲಿ ಕೀ. ೨೮, ನು. ೧೬, ೧೭ ರಲ್ಲಿ 'ಹೃತ್ತಾಪದಿ ಬಳಲಿದರು ಬಲನುಕ್ತಿಯ ಕೇಳದಲವರು ಬಂದರು ಹರಿಯಿದ್ದೆಡೆ' ಎಂದು ಬದಲಾಗಿದೆ. ಶ್ಲೋಕ ೧೭,

೧೮ರ ವಿವರಗಳನ್ನು ದಾಸರು ಕೈಬಿಟ್ಟಿದ್ದಾರೆ. ಶ್ಲೋಕ ೧೯–೨೧ರ ವಿವರಗಳನ್ನು ಸಂಗ್ರಹವಾಗಿ 'ಕಂಡ ಕೃಷ್ಣನ ನೋಡಿದವರು ಪಸನೊಂದು ಶೋಕಾರ್ಣವದಿಪರು' (ನು. ೧೭) ಎಂದಷ್ಟೇ ಹೇಳಲಾಗಿದೆ. ಶ್ಲೋಕ ೨೨, ೨೩ ರ ವಿವರಗಳು ಪ್ರ. ಭಾ. ದಲ್ಲಿಲ್ಲ. ಶ್ಲೋಕ ೨೪-೩೪ರ ಸಂಗತಿ, ವಿವರಗಳನ್ನು ಕೈಬಿಟ್ಟು ಸಂಕ್ಷಿಪ್ತವಾಗಿ ಕೀ. ೨೮, ನು. ೧೮ರಿಂದ 28ರ ಮೊದಲ 2 ಸಾಲುಗಳಲ್ಲಿ ಬಂದಿದೆ. ಕಾಳಿಯ ಹಾಗೂ ಕೃಷ್ಣನ ಹೋರಾಟದ ವರ್ಣನೆಯನ್ನು ಬಿಟ್ಟಿದ್ದು ಉಚಿತವೆನ್ನಿಸುವುದಿಲ್ಲವಾದರೂ ಕಾಳಿಯನ ಹೆಂಡತಿಯರು ಮಾಡಿದ ಹರಿಸ್ತುತಿಯನ್ನು ಸಂಗ್ರಹಿಸಿದ್ದರಲ್ಲಿ ಔಚಿತ್ಯವಿದೆಯೆನ್ನಿಸುತ್ತದೆ. ಶ್ಲೋಕ ೫೫–೬೮ರಲ್ಲಿ ಬರುವ ಕೃಷ್ಣ ಕಾಳಿಯರ ಸಂಭಾಷಣೆಯ ವಿವರಗಳನ್ನು ಕೈಬಿಟ್ಟು ಮುಖ್ಯ ಕಥಾಂಶವನ್ನು ಮಾತ್ರ ಕೀ.೨೮, ನು. ೨೮ರ ಉತ್ತರಾರ್ಧದಿಂದ ನು. ೩೨ರಲ್ಲಿ ಹೇಳಲಾಗಿದೆ.

ಅ. ೧೭, ಶ್ಲೋಕ ೧-೧೨ರಲ್ಲಿ ಕಾಳಿಯ ಸರ್ಪದ ವೃತ್ತಾಂತ ಹಾಗೂ ಸೌಭರಿ ಮುನಿ ಗರುಡನಿಗಿತ್ತ ಶಾಪದ ವಿಚಾರವನ್ನು ಹೇಳಿದೆ. ಆದು ಪ್ರ.ಭಾ. ದಲ್ಲಿ ಬಂದಿಲ್ಲ. ಕಥೆಯ ದೃಷ್ಟಿಯಿಂದ ಸಂಗ್ರಹವಾಗಿಯಾದರೂ ಈ ವಿಚಾರಗಳನ್ನು ಹೇಳಬೇಕಿತ್ತೆನ್ನಿಸುತ್ತದೆ. ಶ್ಲೋಕ ೧೩–೧೬ರಲ್ಲಿ ಬರುವ-ಹಿಂದಿರುಗಿ ಬಂದ ಕೃಷ್ಣನನ್ನು ನೋಡಿದ ಗೋಪ ಗೋಪಿಯರು, ಗೋವು, ಗಿಡಮರಗಳ ಸಂತೋಷವನ್ನು ಕೀ.೨೮, ನು. ೩೩ರಲ್ಲಿ ಸೂಚ್ಯವಾಗಿ ಹೇಳಿದೆ. ಶ್ಲೋಕ ೧೭, ೧೮ರಲ್ಲಿಯ ನಂದಗೋಪನು ಬ್ರಾಹ್ಮಣರಿಗೆ ದಾನ ಕೊಟ್ಟ ವಿಚಾರ ಪ್ರ.ಭಾ. ದಲ್ಲಿಲ್ಲ. ಶ್ಲೋಕ ೧೯ರಲ್ಲಿ ಬಂದಿರುವ ಯಶೋದೆಯ ಪುತ್ರವಾತ್ಸಲ್ಯದ ಚಿತ್ರ ನು. ೩೪ರ ಮೊದಲ ಸಾಲಿನಲ್ಲಿ ಬಂದಿದೆ. ಇಲ್ಲೆಲ್ಲ ದಾಸರು ಮೂಲದಲ್ಲಿಯ ವಿವರಣೆಗಳನ್ನು ಬಿಟ್ಟು ಮುಖ್ಯಾಂಶಗಳನ್ನು ಮಾತ್ರ ಹೇಳುತ್ತ ಹೋಗುವುದನ್ನು ಗಮನಿಸಬಹುದು.

ಶ್ಲೋಕ ೨೦, ೨೧ರಲ್ಲಿ ಅಷ್ಟರಲ್ಲೇ ಸೂರ್ಯಾಸ್ತವಾದುದರಿಂದ ಹಾಗೂ ಅವರೆಲ್ಲ ಬಳಲಿದ್ದರಿಂದ ಆ ದಡದಲ್ಲೇ ಆ ರಾತ್ರಿ ಉಳಿಯುವ ಸಂಗತಿ ಬಂದಿದೆ. ಅವರು ಯಮುನೆಯ ದಡದಲ್ಲಿ ಉಳಿದ ಸಂಗತಿ ನು. ೩೩, ೩೪ರಲ್ಲಿ ಬಂದಿದೆಯಾದರೂ, ಸೂರ್ಯಾಸ್ತ, ಬಳಲಿಕೆಯ ವಿಚಾರಗಳನ್ನು ಕೈಬಿಟ್ಟು,

ಹರಿಯಾಶ್ಚರ್ಯ ಕರ್ಮಗಳ ಉಚ್ಚರಿಸುತ ಗೋಪರ ಮೇಳ
ಹರುಷದಲಾ ರಾತ್ರಿಯಲಿ ಸುಸ್ಥಿರರಾದರು ಯಮುನೆಯಲಿ ೩೩

ಎಂದು ಹೇಳಿದೆ. ಶ್ಲೋಕ ೨೨–೨೬ರಲ್ಲಿ, ಅರ್ಧರಾತ್ರಿಯಲ್ಲಿ ಆ ವನದಲ್ಲಿ ಹಬ್ಬಿದ ಕಾಡ್ಗಿಚ್ಚಿನಿಂದಾಗಿ ಅಪಾಯಕ್ಕೆ ಸಿಲುಕಿದ ಗೋಪಾಲಕರು, ಆದರಿಂದ ತಮ್ಮನ್ನು ರಕ್ಷಿಸುವಂತೆ ಕೃಷ್ಣನನ್ನು ಪ್ರಾರ್ಥಿಸಿದಾಗ, ಕೃಷ್ಣ ಯೋಗಶಕ್ತಿಯಿಂದ ಆ ಕಿಚ್ಚನ್ನು ನುಂಗಿ ಅವರನ್ನು ರಕ್ಷಿಸುತ್ತಾನೆ. ಈ ವಿಷಯ ನು. ೩೫ರಲ್ಲಿ 'ಆ ನಿಶಿ ದಾವಾಗ್ನಿಯನು ನುಂಗ್ಯಾ ನಿಖಿಳರ ಸಲಹಿದನು' ಎಂದು ಒಂದೇ ಸಾಲಿನಲ್ಲಿ ಬಂದಿದೆ. ಅನಂತರ ಅ. ೧೮, ನು. ೧ ರಲ್ಲಿ, ಕೃಷ್ಣ ಬಂಧು ಬಾಂಧವರೊಂದಿಗೆ ಹೊಗಳಿಸಿಕೊಳ್ಳುತ್ತ ಗೋಕುಲವನ್ನು ಪ್ರವೇಶಿ

ಸುತ್ತಾನೆ. ಇದನ್ನು ಕೀ. ೨೮, ನು. ೩೫ರ ಕೊನೆಯ ಸಾಲಿನಲ್ಲಿ 'ಸ್ಥಾನಕೆ ಸುಖದಿ ಐದಿದರು ದಯಾನಿಧಿ ಪರಿಪೂರ್ಣರು' ಎಂದು ಸಂಗ್ರಹಿಸಲಾಗಿದೆ. ನು. ೩೬, ೩೭ ಈ ಕೀ. ಯ ಕೊನೆಯ ನುಡಿಗಳಾಗಿದ್ದು ಇವುಗಳಲ್ಲಿಯೂ ಕೃಷ್ಣಸ್ತುತಿ ಬಂದಿದೆ.

ಅಧ್ಯಾಯ ೧೮, ಶ್ಲೋಕ ೨–೧೬ರಲ್ಲಿ ಬೇಸಿಗೆ ಬಂದರೂ ವಸಂತಕಾಲದಂತೆ ಸುಖಕರವಾಗಿದ್ದ ಬೃಂದಾವನದ ವರ್ಣನೆ, ಬಲರಾಮ ಕೃಷ್ಣರ ವಿವಿಧ ಆಟಗಳ ಸಹಜ ಸುಂದರ ವರ್ಣನೆಗಳಿವೆ. ಇದು ಕೀ. ೨೯, ನು. ೧ ಮತ್ತು ಕೀ. ೩೦, ನು. ೧–೧೪ರಲ್ಲಿ ಅಲ್ಪ ವ್ಯತ್ಯಾಸಗಳೊಡನೆ ಬಂದಿದೆ. ಕೀ. ೨೯, ನು. ೨–೬ರಲ್ಲಿ ವೃಕ್ಷರೂಪಿ ದೈತ್ಯನ ಸಂಹಾರ ಮತ್ತು 'ಕಿಟ್ಟಿನೇಳು ಗೂಳಿಗಳನು' ಸದೆದ ವಿಚಾರವಿದೆ. ವೃಕ್ಷರೂಪಿ ದೈತ್ಯನ ವಿಚಾರ ಮೂಲದಲ್ಲಿಲ್ಲ. ಮೂಲ ಭಾಗವತ ದಶಮಸ್ಕಂಧ ಉತ್ತರಾರ್ಧ (ಅ. ೫೮)ದಲ್ಲಿ ಕೃಷ್ಣ ಏಳು ಗೂಳಿಗಳನ್ನು ನಿಗ್ರಹಿಸಿ ನಗ್ನಜಿತ್ತೆಂಬ ರಾಜನ ಮಗಳು ಸತ್ಯೆಯನ್ನು ವಿವಾಹವಾಗುವ ಸಂದರ್ಭ ಬರುತ್ತದೆ. ಅದನ್ನು ಇಲ್ಲಿ ಸೂಚಿಸುತ್ತಿರಬಹುದು. ನು. ೬, ೭ರ ಮಾತುಗಳು ಹೆಚ್ಚಿನ ಕೀ.ಗಳಲ್ಲಿ ಬರುವಂತೆ ದಾಸರಿಂದಲೇ ನೇರವಾಗಿ ಬಂದಂಥವು.

ಅ. ೧೮, ಶ್ಲೋಕ ೧೭-೩೨ರಲ್ಲಿ ಬಲರಾಮನಿಂದ ಪ್ರಲಂಬಾಸುರ ವಧೆಯಾದ ವಿಚಾರ ಬಂದಿದೆ. ಈ ಭಾಗ ಹೆಚ್ಚಿನ ವ್ಯತ್ಯಾಸಗಳಿಲ್ಲದೆ ಕೀ. ೩೦, ನು. ೧೫-೨೭ರಲ್ಲಿ ಬಂದಿದೆ. ಶ್ಲೋಕ ೩೧ರಲ್ಲಿ ಅಸುರನನ್ನು ಕೊಂದು ಬಂದ ಬಲರಾಮನನ್ನು ಕಂಡು ಗೋಪಾಲರೆಲ್ಲ ಸಂತೋಷಗೊಂಡರೆಂದು ಹೇಳಿದೆ. ಪ್ರ.ಭಾ.ದಲ್ಲಿ ದಾಸರು ಇದನ್ನು ನು. ೨೪ರಲ್ಲಿ ಹೇಳಿ, ಇದರ ಜೊತೆಗೆ ನು. ೨೬ರಲ್ಲಿ ನಂದ ಯಶೋದೆ ರೋಹಿಣಿಯರು ಆ ಮಕ್ಕಳನ್ನು ಪ್ರೇಮದಿಂದ ಅಪ್ಪಿದರು ಎನ್ನುವುದನ್ನೂ ಸೇರಿಸಿದ್ದಾರೆ. ಸಂದರ್ಭಕ್ಕನುಗುಣವಾಗಿ ಬರುವ ಇಂಥ ಸಣ್ಣ ಪುಟ್ಟ ವ್ಯತ್ಯಾಸಗಳನ್ನು ಬಿಟ್ಟರೆ ಪ್ರಲಂಬಾಸುರ ವಧೆಯ ಭಾಗ ಪ್ರ. ಭಾ. ದಲ್ಲಿ ಸಮರ್ಪಕವಾಗಿಯೇ ಬಂದಿದೆ ಎನ್ನಬಹುದು.

ಅ. ೧೯, ಶ್ಲೋಕ ೧ ರಿಂದ ಅ. ೨೦, ಶ್ಲೋಕ ೨ರಲ್ಲಿ ಪ್ರಲಂಬಾಸುರ ವಧೆಯ ನಂತರ ಗೊಲ್ಲರೆಲ್ಲ ಆಟಗಳಲ್ಲಿ ಆಸಕ್ತರಾಗಿದ್ದಾಗ ಹಸುಗಳು ಬೇಸಿಗೆಯ ಝಳದಿಂದ ಬಾಯಾರಿ ನೀರನ್ನು ಹುಡುಕುತ್ತ ಹುಲ್ಲಿನ ಕಾಡನ್ನು ಪ್ರವೇಶಿಸುತ್ತವೆ. ಆ ಸಂದರ್ಭದಲ್ಲಿ ಕಾಡ್ಗಿಚ್ಚು ಹಬ್ಬಿ ಸುತ್ತಲೂ ದಹಿಸುತ್ತ ಬರುತ್ತದೆ. ಗೊಲ್ಲರೆಲ್ಲ ಗೋವುಗಳನ್ನು ಹುಡುಕುತ್ತ ಹೊರಟು ಅಪಾಯಕ್ಕೆ ಸಿಕ್ಕಿ ಕೃಷ್ಣನನ್ನು ರಕ್ಷಿಸೆಂದು ಪ್ರಾರ್ಥಿಸಿದಾಗ,ಕೃಷ್ಣ ಅವರಿಗೆ ಕಣ್ಣುಮುಚ್ಚಲು ಹೇಳಿ ಯೋಗ ಶಕ್ತಿಯಿಂದ ಆ ಬೆಂಕಿಯನ್ನು ನುಂಗಿ ಅವರನ್ನೆಲ್ಲ ರಕ್ಷಿಸುತ್ತಾನೆ. ಎಲ್ಲರೂ ಕೃಷ್ಣನನ್ನು ಸಾಕ್ಷಾತ್ ದೇವತೆಯೆಂದೇ ಭಾವಿಸಿ ಹೊಗಳುತ್ತಾರೆ. ಗೋಕುಲಕ್ಕೆ ಹಿಂದಿರುಗಿದ ಕೃಷ್ಣನನ್ನು ನೋಡಿ ಗೋಪಿಯರು ಸಂತೋಷಪಡುತ್ತಾರೆ.

–ಈ ಭಾಗ ಪ್ರ.ಭಾ.ದಲ್ಲಿಲ್ಲ. ಕೀ. ೨೮, ನು. ೩೫ರಲ್ಲಿ ಮಧ್ಯರಾತ್ರಿಯಲ್ಲಿ ಕಾಡ್ಗಿಚ್ಚಿನಿಂದ ಎಲ್ಲರನ್ನು ರಕ್ಷಿಸಿದ ಘಟನೆ ಬಂದಿದ್ದು, ಅದನ್ನೇ ಕೆಲಮಟ್ಟಿಗೆ ಹೋಲುವ

ಈ ಘಟನೆಯನ್ನು ದಾಸರು ಬಿಟ್ಟಿರಬೇಕು. ಅಥವಾ ಇವರ ಬದಲಿಗೆ ಮೂಲದಲ್ಲಿಲ್ಲದ ಕೀ. ೨೯ರ ವಿಷವೃಕ್ಷರೂಪಿ ದೈತ್ಯನ ಘಟನೆಯನ್ನು ಸೃಷ್ಟಿಸಿರಬೇಕು.

ಅ. ೨೦, ಶ್ಲೋಕ ೩–೨೬ರಲ್ಲಿ ಬೃಂದಾವನದಲ್ಲಿಯ ಮಳೆಗಾಲದ ಸುಂದರವಾದ ವರ್ಣನೆಯಿದೆ. ಈ ಭಾಗ ಕೀ. ೩೧, ಸು. ೧–೩ರಲ್ಲಿ ಸಂಗ್ರಹವಾಗಿ ಬಂದಿದೆ. ಕೀರ್ತನೆಗಳ ದೃಷ್ಟಿಯಿಂದ ಇದು ಉಚಿತವೂ ಹೌದು. ಶ್ಲೋಕ ೨೭–೩೧ರಲ್ಲಿ ವರ್ಷಾಋತುವಿನಲ್ಲಿ ಕೃಷ್ಣನ ಬೃಂದಾವನ ವಿಹಾರದ ವರ್ಣನೆಯಿದೆ. ಇದು ಕೀ. ೩೧, ಸು. ೪–೧೦ರಲ್ಲಿ ಬಂದಿದೆ. ಮೂ.ಭಾ.ದಲ್ಲಿ ಶ್ಲೋಕ ೨೬ರಲ್ಲಿ ಕೃಷ್ಣ ಗೋವುಗಳನ್ನು ಹೆಸರಿಂದ ಹಿಡಿದು ಕೂಗಿದನು ಎಂದು ಮಾತ್ರ ಹೇಳಿದ್ದಾರೆ, ಕೀ. ೩೧, ಸು. ೫–೬ರಲ್ಲಿ ಅವುಗಳ ಹೆಸರುಗಳ ದೊಡ್ಡ ಪಟ್ಟಿಯೇ ಬಂದಿದೆ. ಸು. ೮ರಲ್ಲಿ ಬರುವ, ಹಸುಗಳು ಬಂದು ಕೃಷ್ಣನ ಹೆಗಲಲ್ಲಿ ಹೆಗಲಿಟ್ಟು ನೆಕ್ಕುವುದು, ಕೃಷ್ಣನ ಕೈ ತಪ್ಪಾಳೆಲ್ಲವನ್ನು ಸೇವಿಸುವುದು, ಅವರ ನಡುವಿನ ಆತ್ಮೀಯತೆಯ ಈ ಸುಂದರ ಚಿತ್ರವೂ ದಾಸರ ಸ್ವತಂತ್ರ ಸೃಷ್ಟಿಯಾಗಿದೆ.

ಶ್ಲೋಕ ೩೨–೪೯ರಲ್ಲಿ ಶರತ್ಕಾಲದ ವರ್ಣನೆಯಿದೆ. ಕೀ. ೩೧, ಸು. ೧೧ರಲ್ಲಿ ಇದು ಸಂಕ್ಷಿಪ್ತವಾಗಿ ಬಂದಿದ್ದು, ಉಳಿದ ಭಾಗ (ಸು. ೧೨–೧೬) ಗೋಪಿಯರ ಕೃಷ್ಣ ಪ್ರೇಮಕ್ಕೆ ಮೀಸಲಾಗಿದೆ. ಮೂಲದಲ್ಲಿಯ ಉಳಿದ ಜನಜೀವನದ ಚಿತ್ರಣ ಹಾಗೂ ಪ್ರಕೃತಿಯ ಚಿತ್ರಣ ಇಲ್ಲಿ ಲುಪ್ತವಾಗಿದೆ. ಕೃಷ್ಣ ಕೇಂದ್ರವಾಗದ ಬದುಕಿನ ವಿವರಗಳ ಬಗೆಗಿನ ದಾಸರ ಈ ದಿವ್ಯ ನಿರ್ಲಕ್ಷ್ಯ ಮೂಲ ಭಾಗವತ ಕೊಡುವ ಅಲ್ಲಿಯ ಒಟ್ಟಿನ ಬದುಕಿನ ಚಿತ್ರಕ್ಕೆ ಧಕ್ಕೆಯುಂಟು ಮಾಡುತ್ತದೆ ಎನ್ನಿಸುತ್ತದೆ.

ಅ. ೨೧, ಶ್ಲೋಕ ೧–೨೦ರಲ್ಲಿ ಕೃಷ್ಣ ಆ ಶರತ್ಕಾಲದ ಸುಂದರ ಬೃಂದಾವನವನ್ನು ಪ್ರವೇಶಿಸಿ ಕೊಳಲನ್ನು ನುಡಿಸಲಾರಂಭಿಸಿದಾಗ ಅದನ್ನು ಆಲಿಸಿದ ಪ್ರಕೃತಿ, ಗೋವುಗಳು, ಸ್ತ್ರೀಯರು, ದೇವತೆಗಳು ಮೊದಲಾದವರ ಪರವಶತೆಯ ವರ್ಣನೆಯಿದೆ. ಈ ಭಾಗ ಸಂಗ್ರಹಗೊಂಡು ಕೀ. ೩೨, ಸು. ೧–೯ರಲ್ಲಿ ಬಂದಿದೆ.

ಅ. ೨೨, ಶ್ಲೋಕ ೧–೩೮ರಲ್ಲಿ, ಗೋಪಿಯರ ಕಾತ್ಯಾಯಿನಿ ವ್ರತ, ಕೃಷ್ಣನಿಂದ ಅವರ ವಸ್ತ್ರಾಪಹರಣ, ಕೊನೆಯಲ್ಲಿ ಅವರ ಇಚ್ಛೆಯನ್ನು ಆ ರಾತ್ರಿ ನೆರವೇರಿಸುವುದಾಗಿ ಕೃಷ್ಣ ಅವರಿಗೆ ಭರವಸೆ ನೀಡುವುದು, ಅವರು ಗೋಕುಲಕ್ಕೆ ಹಿಂದಿರುಗುವುದರ ವರ್ಣನೆಯಿದೆ. ಈ ಭಾಗ ಕೀ. ೩೩, ಸು. ೧–೨೧ರಲ್ಲಿ ಕೆಲವು ವ್ಯತ್ಯಾಸಗಳೊಡನೆ ಬಂದಿದೆ. ಮೂಲದಲ್ಲಿ ಕೃಷ್ಣ ಆ ರಾತ್ರಿ ಅವರ ಇಚ್ಛೆಯನ್ನು ನೆರವೇರಿಸುವುದಾಗಿ ಹೇಳಿದರೆ, ಪ್ರ.ಭಾ.ದಲ್ಲಿ ಆ ಕೂಡಲೇ ನೆರವೇರಿಸಿದಂತೆ ಸು. ೧೯, ೨೦ರಲ್ಲಿ ಬಂದಿದೆ. ಅಲ್ಲದೆ ಮೂ.ಭಾ.ದಲ್ಲಿ ವಸ್ತ್ರಾಪಹರಣದ ಸಂದರ್ಭದಲ್ಲಿ ಕೃಷ್ಣನೊಡನೆ ಆತನ ಗೆಳೆಯರೂ ಇರುತ್ತಾರೆ. ಇಲ್ಲಿ ಕೃಷ್ಣ ಮಾತ್ರ ಇರುತ್ತಾನೆ. ಮೂ.ಭಾ.ದ ಶ್ಲೋಕ ೩೩–೪೧ರಲ್ಲಿ ಬರುವ, ಗೋಪಾಲಕರಿಗೆ ಕೃಷ್ಣನು ಮಾಡುವ ಉಪದೇಶ ಇತ್ಯಾದಿ ವಿಚಾರಗಳು ಇಲ್ಲಿ ಕೀ. ೩೪, ಸು. ೧–೧೦ರಲ್ಲಿ ಇನ್ನಷ್ಟು ವಿಸ್ತಾರಗೊಂಡಿವೆ. ಸು. ೬–೧೦ರ

ಕೃಷ್ಣನ ಉಪದೇಶದ ಭಾಗ ಈ ಸಂದರ್ಭಕ್ಕೆ ಹೊಂದಿಕೊಂಡು ಬರುತ್ತದಾದರೂ ಪ್ರ. ಭಾ.ದಲ್ಲಿಲ್ಲ. ಕೃಷ್ಣನ ಉಪದೇಶದಲ್ಲಿ ದಾಸರು ತಮ್ಮ ಅಭಿಪ್ರಾಯವನ್ನೂ ಸೇರಿಸಿರುವಂತೆ ತೋರುತ್ತದೆ. ಶ್ಲೋಕ ೪೨ರ ವಿವರ ಸಂ. ೧೧ರಲ್ಲಿ ಬಂದಿದೆ.

ಅ. ೨೩, ಶ್ಲೋಕ ೧–೫೨ರಲ್ಲಿ, ಹಸಿದಿದ್ದ ಗೋಪಾಲಕರಿಗೆ ಕೃಷ್ಣ ಸಮೀಪದಲ್ಲೇ ಯಾಗ ಮಾಡುತ್ತಿದ್ದ ಬ್ರಾಹ್ಮಣರಲ್ಲಿ ಅನ್ನವನ್ನು ಬೇಡಲು ಹೇಳಿದಾಗ, ಅವರು ಹಾಗೆಯೇ ಹೋಗಿ ಬ್ರಾಹ್ಮಣರನ್ನು ಕೇಳುತ್ತಾರೆ. ಬ್ರಾಹ್ಮಣರು ಏನನ್ನೂ ಹೇಳದೆ ಸುಮ್ಮನಿದ್ದಾಗ, ಹಿಂತಿರುಗಿ ಬಂದು ಕೃಷ್ಣನಿಗೆ ನಡೆದದ್ದನ್ನು ಹೇಳುತ್ತಾರೆ. ಕೃಷ್ಣ ಮತ್ತೆ ಆ ಬ್ರಾಹ್ಮಣರ ಪತ್ನಿಯರಲ್ಲಿಗೆ ಹೋಗಿ ಕೇಳಿ ಎಂದಾಗ ಗೋಪಾಲಕರು ಹಾಗೆಯೇ ಹೋಗಿ ಕೇಳುತ್ತಾರೆ. ಆಗ ಆ ಬ್ರಾಹ್ಮಣಪತ್ನಿಯರು ನಾಲ್ಕು ವಿಧವಾದ ಅಡಿಗೆಯನ್ನು ತಟ್ಟೆಗಳಲ್ಲಿ ಇಟ್ಟುಕೊಂಡು, ಗಂಡ ಮಕ್ಕಳು ಬಂಧುಗಳು ಎಲ್ಲರೂ ಹೋಗಬೇಡಿರೆಂದು ತಡೆದರೂ ಕೇಳದೆ ಕೃಷ್ಣನಲ್ಲಿಗೆ ಬಂದು ಅವನ್ನೆಲ್ಲ ಕೊಟ್ಟು ಕೃಷ್ಣನ ಕೃಪೆಗೆ ಪಾತ್ರರಾಗುತ್ತಾರೆ. ಸ್ತ್ರೀಯರು ಹಿಂದಿರುಗಿದ ಮೇಲೆ ಬ್ರಾಹ್ಮಣರು ತಮ್ಮ ಅಜ್ಞಾನಕ್ಕೆ ಪಶ್ಚಾತ್ತಾಪ ಪಡುತ್ತಾರೆ.

–ಈ ಭಾಗ ಕೀ. ೩೫, ಸಂ. ೧–೧೧ರಲ್ಲಿ ತುಂಬ ಸಂಗ್ರಹವಾಗಿ ಬಂದಿದೆ. ಮೂಲದ ಸಂಭಾಷಣೆಗಳ ಭಾಗಗಳನ್ನೆಲ್ಲ ಕೈಬಿಟ್ಟು ಮುಖ್ಯ ಕಥಾಂಶವನ್ನು ಮಾತ್ರ ಇಲ್ಲಿ ತರಲಾಗಿದೆ. ಕೆಲವು ವಿವರಗಳಲ್ಲಿಯೂ ವ್ಯತ್ಯಾಸಗಳಿವೆ. ಮೂಲದಲ್ಲಿ, ಶ್ಲೋಕ ೧೨ರಲ್ಲಿ ಗೋಪಾಲಕರು ಬ್ರಾಹ್ಮಣರನ್ನು ಅನ್ನ ಬೇಡಿದಾಗ ಅವರು ಮಾತನ್ನೇ ಆಡದೆ ಸುಮ್ಮನಿದ್ದರೆ, ಪ್ರ.ಭಾ.ದಲ್ಲಿ, "ಸ್ವರ್ಗಕಾಮನಾಕರ್ಮಪರರವರು ಮತ್ತರಾಗಿ ಬಾಲಕರ ಗರ್ಜಿಸಿದರು ಏನಯುವ ನೀಗಿ, ಕಾಲವಲ್ಲವೆಂದು ನಾಸ್ತಿಕರು ನುಡಿದರು" (ಸಂ. ೩, ೪) ಎಂದಾಗಿದೆ. ಶ್ಲೋಕ ೧೯ರಲ್ಲಿ, ನಾಲ್ಕು ವಿಧವಾದ ಅನ್ನವನ್ನು ತಟ್ಟೆಗಳಲ್ಲಿ ತೆಗೆದುಕೊಂಡು ಸಮುದ್ರದೆಡೆ ಧಾವಿಸುವ ನದಿಗಳಂತೆ ಬ್ರಾಹ್ಮಣಪತ್ನಿಯರು ಕೃಷ್ಣನ ಬಳಿಗೆ ಧಾವಿಸಿದರು ಎಂದು ವರ್ಣಿಸಿದರೆ, ಪ್ರ.ಭಾ.ದಲ್ಲಿ–

ಮೃಷ್ಟೋದನ ಭಕ್ಷ್ಯ ಪಾಯಸಾಜ್ಯಕ್ಷೀರವು ಯು
ಕ್ತೇಷ್ಟ ಶಾಕ ಪಪ್ಪಡ ಪಳಿದ್ಯ ದಧಿ ವ್ಯಂಜನವು ೫
ತಂಡತಂಡದ್ದರಿವಾಣಗಳ ಚಪಕದೊಳಗೆ ತುಂಬಿ
ಕೊಂಡು ಬಂದರಿಂದುವದನೇರ್ಹರಿಯಿದ್ದೆಡೆಗೆ ೬

ಎಂದು ವ್ಯತ್ಯಾಸಹೊಂದಿದೆ. ಶ್ಲೋಕ ೨೦–೨೩ರಲ್ಲಿ ಬರುವ, ಬ್ರಾಹ್ಮಣಪತ್ನಿಯರು ಕಂಡ ಕೃಷ್ಣನ ವರ್ಣನೆ ಪ್ರ. ಭಾ.ದಲ್ಲಿ ಬಂದಿಲ್ಲ.

ಶ್ಲೋಕ ೫೨ರಲ್ಲಿ, ಆ ಬ್ರಾಹ್ಮಣರು ತಮ್ಮ ಕೃತ್ಯಕ್ಕೆ ಪಶ್ಚಾತ್ತಾಪಪಟ್ಟು ಕೃಷ್ಣ ಬಲರಾಮರನ್ನು ನೋಡುವ ಆಸೆ ಇದ್ದರೂ ಕಂಸನಿಗೆ ಹೆದರಿ ಎಲ್ಲಿಯೂ ಹೋಗದೆ ನಿಂತುಬಿಟ್ಟರು–ಎಂಬ ಮಾತುಗಳಿದ್ದರೆ, ಕೀ. ೩೫, ಸಂ. ೧೧ರಲ್ಲಿ–

ಬ್ರಾಹ್ಮಣರು ಪಶ್ಚಾತ್ತಾಪರಾಗಿ ನುಡಿದರು ಪೂರ್ಣ

ಬ್ರಹ್ಮ ಪ್ರಸನ್ವೆಂಕಟಕೃಷ್ಣನ ಒಲಿಸಿಕೊಂಡರು

ಎಂದು ಬಂದಿದೆ. ಇಂಥ ಅನೇಕ ವ್ಯತ್ಯಾಸಗಳನ್ನು ಇಲ್ಲಿ ಗುರುತಿಸಬಹುದಾಗಿದೆ. ಈ ಭಾಗವನ್ನು ವರದಿಯ ರೂಪದಲ್ಲಿ ಹೇಳುವುದಕ್ಕಿಂತ, ಮೂಲದಲ್ಲಿ ನಿರೂಪಿತವಾಗಿರುವಂತೆ ಘಟನಾತ್ಮಕವಾಗಿಯೇ ಮನವರಿಕೆಯಾಗುವಂತೆ ತಂದಿದ್ದರೆ ಹೆಚ್ಚು ಪರಿಣಾಮಕಾರಿಯಾಗಿರುತ್ತಿತ್ತು ಎನ್ನಿಸುತ್ತದೆ.

ಅ. ೨೪, ಶ್ಲೋಕ ೧–೩೮. ಈ ಭಾಗದಲ್ಲಿ ಕೃಷ್ಣನು ಇಂದ್ರಪೂಜೆಗೆ ಸಿದ್ಧರಾಗುತ್ತಿದ್ದ ಗೋಕುಲದವರನ್ನು ತಡೆದು ಗೋವರ್ಧನಗಿರಿಯನ್ನು ಪೂಜಿಸುವಂತೆ ಹೇಳಿದಾಗ ಅವರು ಅವನ ಮಾತಿನಂತೆಯೇ ನಡೆಯುತ್ತಾರೆ. ೩೮ ಶ್ಲೋಕಗಳಲ್ಲಿ ಬರುವ ಈ ಭಾಗ ಸಂಕ್ಷಿಪ್ತವಾಗಿ ಕೀ. ೩೬, ಸು. ೨ ಮತ್ತು ಸು. ೩ರ ಮೊದಲ ಎರಡು ಸಾಲುಗಳಲ್ಲಿ ಬರುತ್ತದೆ. ಸು.೧ರ ಕೃಷ್ಣಸ್ತುತಿ ಮೂಲದಲ್ಲಿಲ್ಲ.

ಅ. ೨೫, ಶ್ಲೋಕ ೧–೭. ಇಂದ್ರ ತನ್ನ ಪೂಜೆ ನಿಂತುಹೋದ ವಿಷಯವನ್ನು ತಿಳಿದು ಕುಪಿತನಾಗಿ ಪ್ರಳಯಧಾರೆಯ ಸಾಂವರ್ತಕವೆಂಬ ಮೋಡಗಳ ಗುಂಪನ್ನು ಮಳೆ ಸುರಿಸುವಂತೆ ಪ್ರೇರಿಸುತ್ತಾನೆ. ಈ ಭಾಗ ಕೀ. ೩೬, ಸು. ೩ರಲ್ಲಿ ಸಂಗ್ರಹವಾಗಿ ಬಂದಿದೆ. ಆ ಪ್ರಳಯಧಾರೆ ಹಾಗೂ ಅದಕ್ಕೆ ಒಳಗಾದ ಗೋಕುಲದ ವರ್ಣನೆ ಶ್ಲೋಕ ೮–೧೮ರಲ್ಲಿ ಬಂದಿದೆ. ಆ ಸಮಯದಲ್ಲಿ ಗೋಪ ಗೋಪಿಯರು, ಗೋವುಗಳೆಲ್ಲ ಕೃಷ್ಣನನ್ನು ರಕ್ಷಿಸಬೇಕೆಂದು ಪ್ರಾರ್ಥಿಸಿದ್ದು ಹಾಗೂ ಕೃಷ್ಣ ಅವರನ್ನು ರಕ್ಷಿಸಲು ನಿರ್ಧರಿಸಿದ ಭಾಗ ಪ್ರ.ಭಾ.ದಲ್ಲಿಲ್ಲ. ಇಲ್ಲಿ ದಾಸರು,

ಆಕ್ರಂದಿಸಿದ ಪ್ರಾಣಿಗಳನ್ನೆಲ್ಲ ನೋಡಿ ಸಿರಿನಲ್ಲ ಪರಾಕ್ರಮಶೀಲ

ನಕ್ಕು ಸತ್ವರಪಲ್ಲವದಿಂದ ಗಿರಿಯೆತ್ತಿದ

ಎಂದಷ್ಟೇ ಹೇಳಿ ಮುಂದೆ ನಡೆದಿದ್ದಾರೆ. ‘ಚಿಕ್ಕಮಕ್ಕಳುಚ್ಛಿಲೀಂದ್ರ ನಕ್ಕೆತ್ತಾಡುವಂತೆ’ ಎನ್ನುವುದು ಮೂಲವನ್ನನುಸರಿಸಿ ಬಂದ ಸುಂದರ ಉಪಮೆ. ಒಟ್ಟಿನಲ್ಲಿ ಇಲ್ಲಿಯೂ ಮೂಲದ ಸಂಭಾಷಣೆಯ ಭಾಗಗಳನ್ನು ತೆಗೆದುಹಾಕಿ ಮುಖ್ಯ ಕಥಾಂಶವನ್ನು ಮಾತ್ರ ಹೇಳುತ್ತ ಸಾಗುವ ಕ್ರಮ ಕಾಣಿಸುತ್ತದೆ. ಶ್ಲೋಕ ೧೯–೨೮ರಲ್ಲಿ, ಗಿರಿಯ ಕೆಳಗೆ ಒಂದು ವಾರ ಬಿರುಗಾಳಿ ಮಳೆಗಳಿಂದ ಅವರಿಗೆ ರಕ್ಷಣೆಯಿತ್ತ ಕೃಷ್ಣನ ಅದ್ಭುತವಾದ ಯೋಗಮಹಿಮೆಗೆ ಇಂದ್ರ ಸೋತು ಮಳೆ ನಿಲ್ಲಿಸುತ್ತಾನೆ. ಆಗ ಕೃಷ್ಣ ಅವರೆಲ್ಲರನ್ನು ಗೋಕುಲಕ್ಕೆ ಹೋಗುವಂತೆ ಹೇಳಿ ಅನಾಯಾಸವಾಗಿ ಪರ್ವತವನ್ನು ಕೆಳಗಿಳಿಸುತ್ತಾನೆ. ಈ ಭಾಗ ಸು. ೪ ಮತ್ತು ಸು. ೫ರ ಮೊದಲ ೨ ಸಾಲುಗಳಲ್ಲಿ ಬಂದಿದೆ. ಇಲ್ಲಿಯ ‘ನಿತ್ಯ ಭೂರ್ಯನ್ನಪಾನ ಚಾರುಶಯ್ಯಾಸನ’ದ ಪ್ರಸ್ತಾಪ ಮೂ. ಭಾ.ದಲ್ಲಿಲ್ಲ.

ಶ್ಲೋಕ ೨೯–೩೩ರಲ್ಲಿ ಗೋಕುಲವಾಸಿಗಳೆಲ್ಲರೂ ಶ್ರೀ ಕೃಷ್ಣನನ್ನು ಪ್ರೇಮದಿಂದ ಆಲಂಗಿಸಿ ಆಶೀರ್ವದಿಸುವುದು, ದೇವತೆಗಳ ಸ್ತುತಿ, ಪುಷ್ಪವೃಷ್ಟಿ, ದೇವದುಂದುಭಿಯ ಮೊಳಗುವಿಕೆ, ಗಂಧರ್ವರ ಗಾನ, ಗೋಪರೆಲ್ಲ ಗೋಕುಲಕ್ಕೆ ಹಿಂದಿರುಗಿದ್ದನ್ನು ಹೇಳಲಾ

ಗಿದೆ. ಈ ಭಾಗ ಪ್ರ. ಭಾ.ದಲ್ಲಿಲ್ಲ.

ಅಧ್ಯಾಯ ೨೬. ಶ್ಲೋಕ ೧–೨೫. ಕೃಷ್ಣನು ಕಂಸ ಕಳಿಸಿದ ಅನೇಕ ರಾಕ್ಷಸರನ್ನು ಕೊಂದದ್ದು, ಗೋವರ್ಧನ ಗಿರಿಯನ್ನೆತ್ತಿ ಹಿಡಿದದ್ದು-ಇವೆಲ್ಲವನ್ನು ಕಂಡು ಆಶ್ಚರ್ಯ ಚಕಿತರಾದ ಗೋಪಾಲಕರು ನಂದನನ್ನು ಕೃಷ್ಣನ ಬಗ್ಗೆ ವಿಚಾರಿಸಿದಾಗ ನಂದನು ಗರ್ಗಾ ಚಾರ್ಯರು ತನಗೆ ಆತ ನಾರಾಯಣನ ಅಂಶವೆಂದು ಹೇಳಿದ್ದನ್ನು ತಿಳಿಸುತ್ತಾನೆ. ಈ ಭಾಗವೂ ಪ್ರ.ಭಾ.ದಲ್ಲಿಲ್ಲ.

ಅಧ್ಯಾಯ ೨೭–ಶ್ಲೋಕ ೧–೧೭ : ಗರ್ವ ಇಳಿದ ಇಂದ್ರ ಕಾಮಧೇನುವಿನೊಡನೆ ಬಂದು ಏಕಾಂತದಲ್ಲಿ ಕೃಷ್ಣನನ್ನು ಕಂಡು ನಮಸ್ಕರಿಸಿ ಸ್ತುತಿಸಿ, ತನ್ನನ್ನು ಕ್ಷಮಿಸೆಂದು ಪ್ರಾರ್ಥಿಸುತ್ತಾನೆ. ಆಗ ಕೃಷ್ಣ ಆತನಿಗೆ ಆತ ಇರಬೇಕಾದ ರೀತಿಯನ್ನು ತಿಳಿಸಿ ಎಚ್ಚರಿಸು ತ್ತಾನೆ. ಈ ಭಾಗ ಪ್ರ. ಭಾ. ದಲ್ಲಿ ಕೀ. ೩೬, ನು. ೫ರ ಎರಡನೆಯ ಸಾಲಿನಿಂದ ನು. ೮ರ ವರೆಗೆ ಸಂಗ್ರಹಗೊಂಡು ಬಂದಿದೆ. ಹಾಗೆಯೇ ಕಾಮಧೇನು ಕೃಷ್ಣನನ್ನು ಸ್ತುತಿಸುವ ಶ್ಲೋಕ ೧೮–೨೧ರ ಭಾಗವನ್ನು 'ಸ್ತುತಿ ಮಾಡ್ದಳು' (ನು. ೯) ಎಂದಷ್ಟೇ ಹೇಳಿ ಮುಗಿಸಲಾಗಿದೆ.

ಶ್ಲೋಕ ೨೨, ೨೩ : ಕಾಮಧೇನು ತನ್ನ ಕ್ಷೀರಧಾರೆಯಿಂದ ಹಾಗೂ ಇಂದ್ರ ತನ್ನ ಮಾತೆ ಅದಿತಿಯ ಪ್ರೇರಣೆಯಂತೆ, ದೇವರ್ಷಿಗಳೊಂದಿಗೆ ಐರಾವತದ ಸೊಂಡಿಲಿನಿಂದ ಸುರಿಸಿದ ದೇವಗಂಗೆಯ ತೀರ್ಥದಿಂದ ಕೃಷ್ಣನಿಗೆ ಪಟ್ಟಾಭಿಷೇಕ ಮಾಡಿ, 'ಗೋವಿಂದ' ಎಂದು ನಾಮಕರಣ ಮಾಡುತ್ತಾರೆ. ಪ್ರ. ಭಾ. ದಲ್ಲಿ ಇಂದ್ರ ಅಭಿಷೇಕ ಮಾಡಿದ ವಿಚಾರವನ್ನು ಕೈಬಿಟ್ಟು, ಸುರಭಿ ಮಾತ್ರ ಹರಿಗಭಿಷೇಕ ಮಾಡಿದ ವಿಚಾರವನ್ನು ಕೀ. ೩೬, ನು. ೯ರ ಮೊದಲ ೨ ಸಾಲಿನಲ್ಲಿ ಹೇಳಲಾಗಿದೆ. ನಂತರ ಆಕೆ ಕೃಷ್ಣನನ್ನು ಸ್ತುತಿಸಿ, ನಮಿಸಿ, ಸುರಪತಿಯೊಡನೆ ಸುರಲೋಕಕ್ಕೆ ಹೋದ ವಿಚಾರವನ್ನು ಸಂಕ್ಷಿಪ್ತ ವಾಗಿ ಹೇಳಿ ಕೀರ್ತನೆ ಮುಗಿದಿದೆ. ಶ್ಲೋಕ ೨೪–೨೮ರಲ್ಲಿ ಬರುವ ದೇವ ದೇವತೆಗಳ ಸಂತೋಷ, ಗಾನ, ನರ್ತನ ಇತ್ಯಾದಿ ವಿಚಾರಗಳೂ ಪ್ರ.ಭಾ.ದಲ್ಲಿಲ್ಲ. ಒಟ್ಟಿನಲ್ಲಿ ಗೋವಿಂದಾಭಿಷೇಕದ ಈ ಭಾಗ ಮೂಲದೊಂದಿಗೆ ಹೋಲಿಸಿದಾಗ ತೀರ ಅಸ್ಪಷ್ಟವಾಗಿ ಕಾಣಿಸುತ್ತದೆ.

ಅಧ್ಯಾಯ ೨೮, ಶ್ಲೋಕ ೧–೧೭. ಈ ಭಾಗದಲ್ಲಿ ಬರುವ–ವರುಣನ ದೂತರು ನಂದಗೋಪನನ್ನು ವರುಣಲೋಕಕ್ಕೆ ಒಯ್ದದ್ದು, ಕೃಷ್ಣ ಅಲ್ಲಿಗೆ ಹೋಗಿ ಆತನನ್ನು ಕರೆ ತಂದದ್ದು, ಗೋಪಾಲಕರೆಲ್ಲರಿಗೆ ಬ್ರಹ್ಮಲೋಕ ದರ್ಶನ ಮಾಡಿಸಿದ್ದು ಇತ್ಯಾದಿಗಳು ಹೆಚ್ಚು ವ್ಯತ್ಯಾಸವಿಲ್ಲದೆ ಕೀ. ೩೭ರ ನು. ೪–೧೫ರಲ್ಲಿ ಬಂದಿವೆ. ನು. ೧–೩ರ ಗೋಪಾಲ ಕರ ಹರಿಭಕ್ತಿಯ ವಿವರಗಳು ಮೂಲದಲ್ಲಿಲ್ಲವಾದರೂ ಇಲ್ಲಿ ಸಂದರ್ಭೋಚಿತವಾಗಿಯೇ ಬಂದಿರುವುದನ್ನು ಗಮನಿಸಬಹುದಾಗಿದೆ.

ಅಧ್ಯಾಯ ೨೯, ಶ್ಲೋಕ ೧–೪೮. ಈ ಭಾಗವಲ್ಲಿ ಕೃಷ್ಣನ ವೇಣುನಾದಕ್ಕೆ ಮೋಹಿತರಾಗಿ ಬಂದ ಗೋಪಿಯರೊಡನೆ ಕೃಷ್ಣ ರಾಸಕ್ರೀಡೆಯಾಡುತ್ತಾನೆ. ಈ

ಸಂದರ್ಭ ಕೀ. ೩೮ರ ಸು. ೧–೨೧ರಲ್ಲಿ ಬಂದಿದೆ. ಶ್ಲೋಕ ೧ರಲ್ಲಿ ಬರುವ ಕೃಷ್ಣ ಪ್ರಕೃತಿದೇವಿಯೊಂದಿಗೆ ಬೆರೆತು ರಮಿಸಲು ಮಾಡಿದ ಸಂಕಲ್ಪ ಪ್ರ.ಭಾ.ದಲ್ಲಿಲ್ಲ. ಶ್ಲೋಕ ೨ರ ಉಪಮೆಯಲ್ಲಿ 'ಬಹಳ ಕಾಲದ ನಂತರ ಸಂಧಿಸುವ ಪ್ರಿಯನೊಬ್ಬನು' ಎನ್ನುವ ಮಾತಿದ್ದು : ಅದು ಕೀ. ೩೮, ಸು. ೧ರಲ್ಲಿ 'ಪ್ರಿಯನು' ಎಂದು ಬದಲಾಗಿದೆ. ಇಂಥ ವ್ಯತ್ಯಾಸಗಳೊಡನೆ ಶ್ಲೋಕ ೨ರಲ್ಲಿಯ ಚಂದ್ರೋದಯದ ವರ್ಣನೆ ಕೀ. ೩೮, ಸು. ೧, ೨ರಲ್ಲಿ ಬಂದಿದೆ. ಶ್ಲೋಕ ೩ರ ವಿಷಯ ಸು. ೩ರಲ್ಲಿದೆ. ಶ್ಲೋಕ೪–೮ರಲ್ಲಿ ವೇಣುನಾದ ವನ್ನು ಕೇಳಿ ಪರವಶರಾಗಿ ಗೋಪಿಯರೆಲ್ಲ ಮಾಡುತ್ತಿದ್ದ ಕೆಲಸಗಳನ್ನು ಬಿಟ್ಟು ಕೃಷ್ಣ ನಲ್ಲಿಗೆ ಬಂದ ಚಿತ್ರವಿದೆ. ಈ ಭಾಗ ಸಣ್ಣ ಸಣ್ಣ ವ್ಯತ್ಯಾಸಗಳೊಡನೆ ಮೂಲಕ್ಕೆ ವ್ಯತಿರಿಕ್ತ ವಾಗದೆ ಕೆಲವೆಡೆ ವಿಸ್ತರಿಸಿ, ಕೆಲವಂಶಗಳಲ್ಲಿ ಸಂಗ್ರಹಗೊಂಡು ಸು.೪–೬ರಲ್ಲಿ ಬಂದಿದೆ. ಉದಾ. ಗೆ, ಶ್ಲೋಕ ೪ರ, ಗೋಪಿಯರು ಅವರಲ್ಲೇ ಪರಸ್ಪರ ಒಬ್ಬರ ಚಲನೆ ಮತ್ತೊಬ್ಬರಿಗೆ ತಿಳಿಯದಂತೆ ಹೊರಟು ಬರುವ ಚಿತ್ರ ಪ್ರ.ಭಾ.ದಲ್ಲಿಲ್ಲ. ಹಾಗೆಯೇ 'ತೋಪರೆಂದಳತೀ ಮಾನವೆತ್ತಿಕೊಂಡು ರಾಕಾಚಂದ್ರಾಸ್ಯೆಯರು' ನಡೆಯುವ ಚಿತ್ರ (ಸು. ೪) ಮೂಲದಲ್ಲಿಲ್ಲ. ಮೂಲದಲ್ಲಿಯ 'ಸ್ಥಾನಪಲ್ಲಟದಿಂದ ತೊಟ್ಟ ಒಡವೆಗಳುಳ್ಳವ ರಾಗಿ' (ಶ್ಲೋಕ ೭) ಎಂಬ ಮಾತನ್ನು ಸು. ೬ರಲ್ಲಿ ಹೀಗೆ ವಿವರಿಸಲಾಗಿದೆ :

ಕರವಲಯವ ಕಾಲಿಗಿಟ್ಟುಕೊಂಡು ಚರಣಭೂಷಣ ಕೈಗೆ ಸಿಕ್ಕಿಸಿ
ಕರಣಕುಂಡಲ ನಾಸದಲಿಟ್ಟು ಬರಿಯ ಮುಗುತಿ ಕಿವಿಗಿಟ್ಟು
ಕೊರಳ ಮಾಲೆಯನೆ ಕಟಿಗೆ ಸುತ್ತಿ ಕೊರಳಿಗೆ ಕಾಂಚೀದಾಮವ ಹಾಕಿ

ಹೀಗೆಯೇ ಶ್ಲೋಕ ೮ರಲ್ಲಿಯ 'ಆ ಗೋಪಿಯರು ಗಂಡಂದಿರಿಂದಲೂ, ತಂದೆ ತಾಯಿ ಗಳಿಂದಲೂ ಸೋದರರಿಂದಲೂ ಬಂಧು ಬಾಂಧವರಿಂದಲೂ ಸಹ ಹೋಗಬಾರದೆಂದು ತಡೆಯಲ್ಪಟ್ಟರೂ' ಎಂಬ ಮಾತು ಇಲ್ಲಿ 'ಸೆರೆ ನಿವಾರಿಸುವರನು ನೂಕಿ' (ಸು. ೬) ಎಂದು ಹೆಚ್ಚು ಪರಿಣಾಮಕಾರಿಯಾಗಿ ಹ್ರಸ್ವಗೊಂಡಿದೆ. ಇಂಥ ವ್ಯತ್ಯಾಸಗಳನ್ನು ಉದ್ದಕ್ಕೂ ಗುರುತಿಸಬಹುದಾದರೂ ಮೂಲದ ಒಟ್ಟಿನ ಭಾವಕ್ಕೆ ಇಲ್ಲಿಯ ಬದಲಾವಣೆ ಗಳಿಂದ ಧಕ್ಕೆ ಒದಗಿದೆ ಎನ್ನಿಸುವುದಿಲ್ಲ.

ಶ್ಲೋಕ ೯–೧೬ರ ವಿವರಗಳು ಪ್ರ.ಭಾ.ದಲ್ಲಿಲ್ಲ. ಶ್ಲೋಕ ೧೮–೩೦ರ ಭಾಗ ಅಲ್ಪ ವ್ಯತ್ಯಾಸಗಳೊಡನೆ ಸು. ೮–೧೨ರಲ್ಲಿ ಬಂದಿದೆ. ಶ್ಲೋಕ ೩೧–೪೧ರಲ್ಲಿ ಗೋಪಿ ಯರು ಕೃಷ್ಣನಲ್ಲಿ ತಮ್ಮ ಕೈಬಿಡದಿರುವಂತೆ ಬೇಡಿಕೊಳ್ಳುವ ಚಿತ್ರವಿದ್ದು,ಅದು ಪ್ರ.ಭಾ. ದಲ್ಲಿ ಸು. ೧೩–೧೭ರಲ್ಲಿ ಕೆಲವು ವ್ಯತ್ಯಾಸಗಳೊಡನೆ ಬಂದಿದೆ. ಉದಾ.ಗೆ, ಶ್ಲೋಕ ೩೪ ರಲ್ಲಿ 'ಯಾವ ಮನಸ್ಸು ಸಂಸಾರದಲ್ಲಿಯೇ ಆಸಕ್ತವಾಗಿ ನೆಲೆಸಿದ್ದಿತೊ ಅದನ್ನು ನೀನು ಅನಾಯಾಸವಾಗಿ ನಿನ್ನೆಡೆಗೆ ಸೆಳೆದುಕೊಂಡು ಬಿಟ್ಟೆ. ಯಾವಾಗಲೂ ಮನೆಗೆಲಸಗಳಲ್ಲಿ ತೊಡಗಿದ್ದ ಕೈಗಳನ್ನು ನಿನ್ನ ಕಡೆಗೆ ಸೆಳೆದುಕೊಂಡೆ. ಈ ಕಾಲುಗಳೂ ನಿನ್ನ ಪಾದ ಮೂಲದಿಂದ ಒಂದು ಹೆಜ್ಜೆಯೂ ಸಹ ಕದಲಲಾರವು. ಗೋಕುಲಕ್ಕೆ ಹೇಗೆ ಹೋಗಲು ಸಾಧ್ಯ ಅಥವಾ ಮತ್ತೇನು ಮಾಡಲು ಸಾಧ್ಯ' ಎಂದಿದ್ದರೆ ; ಕೀ. ೩೮, ಸು. ೧೫ರಲ್ಲಿ

'ನಿಮ್ಮ ಶ್ರೀ ಪಾದಾಬ್ಜ ಬಿಟ್ಟೀಗಲೊಲ್ಲವು ನಮ್ಮ ಕಾಲ್ಗಳು' ಎಂದು ಮಾತ್ರ ಹೇಳಿ ಮುಂದೆ ಸಾಗಿದ್ದಾರೆ. ಶ್ಲೋಕ ೩೬ರ ಮಾತುಗಳು ಇಲ್ಲಿ ಬಂದಿಲ್ಲ. ಒಟ್ಟಿನಲ್ಲಿ ಹೇಳುವುದಾದರೆ ಮೂಲದಲ್ಲಿ ವಿವರವಾದ ವರ್ಣನೆಗಳಿರುವುದನ್ನು ಮೂಲದ ಭಾವಕ್ಕೆ ಧಕ್ಕೆ ಬಾರದಂತೆ ಸಾರಾಂಶರೂಪವಾಗಿ ಸಂಗ್ರಹಿಸಿ ಕೊಡಲಾಗಿದೆ. ಕಾಮಾರ್ತರಾದ ಗೋಪಿಯರ ಚಿತ್ರ ಇಲ್ಲಿ ಸಮರ್ಥವಾಗಿಯೇ ಬಂದಿದೆ ಎನ್ನಬಹುದು.

ಶ್ಲೋಕ ೪೨–೪೮ರಲ್ಲಿ ಗೋಪಿಯರ ಪ್ರಾರ್ಥನೆಗೆ ಒಲಿದ ಕೃಷ್ಣ ಅವರೊಡನೆ ರಾಸಕ್ರೀಡೆಯಾಡುತ್ತಾನೆ. ಈ ಭಾಗ ಪ್ರ.ಭಾ.ದಲ್ಲಿ ನು. ೧೮–೨೦ರಲ್ಲಿ ಬಂದಿದೆ. ಮೂಲದಲ್ಲಿಯ 'ಗೋಪಿಯರ ಮಧ್ಯೆ ಕೃಷ್ಣ ನಕ್ಷತ್ರಗಳ ಮಧ್ಯದ ಚಂದ್ರನಂತೆ ಕಾಣುತ್ತಿದ್ದ' (ಶ್ಲೋಕ ೪೩) ಎಂಬ ಉಪಮೆ ಪ್ರ.ಭಾ.ದಲ್ಲಿ ಬಂದಿಲ್ಲ. 'ಕೃಷ್ಣನ ಸ್ನೇಹಸಂಗ ಪಡೆದ ಆ ಗೋಪಿಯರು ಪ್ರತಿಯೊಬ್ಬರೂ ತಾವು ಭೂಲೋಕದಲ್ಲೇ ಅತ್ಯಂತ ಶ್ರೇಷ್ಠ ಸ್ತ್ರೀಯರೆಂದು ಭಾವಿಸಿದರು' (ಶ್ಲೋಕ ೪೭) ಎಂದಿರುವುದು. ಪ್ರ. ಭಾ.ದಲ್ಲಿ 'ಪೂರ್ಣ ಕಾಮ ಮನ್ನಿಸಿದನೆ ಮತ್ತರಾದರು... ...ಶ್ರೀ ಮಾಧವ ತಮ್ಮ ವಶನೆಂದರಿತು ವಾಮದೃಶೆಯರು ತಿಳಿದರಾಕ್ಷಣ' (ನು. ೨೦) ಎಂದಾಗಿದೆ. ಹೀಗೆ ತಿಳಿದ ಅವರ ಸೊಕ್ಕಡಗಿಸಲು ಕೃಷ್ಣ ಕೂಡಲೆ ಕಣ್ಮರೆಯಾಗುತ್ತಾನೆ. ಈ ಅಂಶ ಎರಡರಲ್ಲೂ ಸಮನಾಗಿ ಬಂದಿದೆ. ಕೀ. ೧೮ ಅಂತ್ಯದ ನು. ೨೧ರ ಕೃಷ್ಣಸ್ತುತಿ ದಾಸರ ಸೇರ್ಪಡೆಯಾಗಿದೆ.

ಅಧ್ಯಾಯ ೩೦, ಶ್ಲೋಕ ೧–೧೩. ಕೃಷ್ಣ ಇದ್ದಕ್ಕಿದ್ದಂತೆ ಮಾಯವಾದುದನ್ನು ಕಂಡು ಗೋಪಿಯರು ಪರಿತಪಿಸಿ, ಅವನನ್ನು ಹುಡುಕುತ್ತ ಪ್ರಲಾಪಿಸುತ್ತ, ಗಿಡಬಳ್ಳಿಗಳನ್ನು ಕೇಳುತ್ತ ಸಾಗುತ್ತಾರೆ. ಈ ಭಾಗವೂ ವಿವರಗಳಲ್ಲಿ ಅಲ್ಲಲ್ಲಿ ವ್ಯತ್ಯಾಸಗೊಂಡರೂ ಆದರೆ ಒಟ್ಟಿನ ಚಿತ್ರಕ್ಕೆ ಬಾಧೆಯಿಲ್ಲದೆ ಕೀ. ೧೯ರಲ್ಲಿ ಬಂದಿದೆ.

ಶ್ಲೋಕ ೧ರಲ್ಲಿ 'ಸಲಗನನ್ನು ಕಾಣದ ಹೆಣ್ಣಾನೆಗಳಂತೆ' ಗೋಪಿಯರು ಪರಿತಪಿಸಿದರೆ, ಪ್ರ.. ಭಾ.ದಲ್ಲಿ ಕೀ. ೧೯ರ ಪಲ್ಲವಿಯಲ್ಲಿ. ಗೋಪಿಯರಿಗೆ 'ವ್ಯಾಕುಲ ಚಿತ್ತವು ಶೋಕ ಸಮುದ್ರವು ಮುಂದೋರೆ' ಎಂದಾಗಿದೆ. ಶ್ಲೋಕ ೨, ೩ರಲ್ಲಿ ಕೃಷ್ಣಪರವಶವಾದ ಮನಸ್ಸುಳ್ಳ ಆ ಯುವತಿಯರು ತಾವೇ ಕೃಷ್ಣನಂತೆ ಭಾವಿಸಿ ಅವನಂತೆಯೇ ಲೀಲೆಗಳನ್ನು ಮಾಡತೊಡಗುತ್ತಾರೆ. ಈ ಭಾಗ ಪ್ರ. ಭಾ. ದಲ್ಲಿ ಬಂದಿಲ್ಲ. ಉಳಿದಂತೆ ಮರಗಿಡ ಬಳ್ಳಿ ಪಕ್ಷಿಗಳಿಗೆ 'ಕೃಷ್ಣನನ್ನು ಕಂಡಿರಾ' ಎಂದು ಕೇಳುತ್ತ ತಿರುಗುವ ಭಾಗ ಎರಡರಲ್ಲೂ ಬಹುಮಟ್ಟಿಗೆ ಸಮವಾಗಿಯೇ (ಶ್ಲೋಕ ೪–೯ ಮತ್ತು ನು. ೧–೬) ಬಂದಿದೆ. ಶ್ಲೋಕ ೧೦ರ ವಿವರಗಳನ್ನು ಕೈಬಿಟ್ಟು 'ಹರಿಪಾದಸ್ಪರ್ಶ ಪುಣ್ಯಧಾತ್ರೆ' (ನು. ೭) ಎಂದಷ್ಟೇ ಉಚಿತ ಬದಲಾವಣೆಯನ್ನು ಮಾಡಿಕೊಳ್ಳಲಾಗಿದೆ. ಶ್ಲೋಕ ೧೧–೨೩ರಲ್ಲಿನ ಗೋಪಿಯರ ಭ್ರಮಾಧೀನ ಮಾತು, ವರ್ತನೆಗಳ ವಿವರಗಳನ್ನು ದಾಸರು ಕೈಬಿಟ್ಟಿದ್ದಾರೆ. ಎಂಥ ಉನ್ಮತ್ತ ಸ್ಥಿತಿಯಲ್ಲೂ ಗೋಪಿಯರು ತಮ್ಮನ್ನು ಕೃಷ್ಣನೆಂದು ಭಾವಿಸಿ ವರ್ತಿಸುವುದು ದಾಸರಿಗೆ ಅನುಚಿತವಾಗಿ ಕಂಡಿರಬೇಕು.

ಶ್ಲೋಕ ೨೪–೪೩. ಕೃಷ್ಣನ ಹೆಜ್ಜೆಗುರುತುಗಳೊಡನೆ ಹೆಣ್ಣೊಬ್ಬಳ ಹೆಜ್ಜೆ

ಗುರುತುಗಳನ್ನು ಗುರುತಿಸಿ, ನಡೆದಿರಬಹುದಾದ ಸಂಗತಿಗಳನ್ನು ಊಹಿಸಿ ಮಾತನಾಡುತ್ತ ಸಾಗುವ ಗೋಪಿಯರ ಮಾತುಗಳಲ್ಲಿ ಒಳ್ಳೆಯ ಪರಿಶೀಲನಾ ಚಾತುರ್ಯವಿದೆ. ಕೃಷ್ಣನ ಜೊತೆಗಿದ್ದ ಆ ಗೋಪಿಗೂ ಗರ್ವ ಬಂದಾಗ ಕೃಷ್ಣ ಅವಳನ್ನು ಬಿಟ್ಟು ಮಾಯವಾಗುತ್ತಾನೆ. ಆಕೆ ಉಳಿದ ಗೋಪಿಯರೊಡನೆ, ತನಗೆ ಕೃಷ್ಣನಿಂದಾದ ಮಾನಾಪಮಾನಗಳನ್ನು ಹೇಳಿಕೊಂಡಾಗ ಇವರು ಆಶ್ಚರ್ಯದಿಂದ ಅದನ್ನೆಲ್ಲ ಕೇಳುತ್ತಾರೆ. ಈ ಭಾಗ ಹೆಚ್ಚು ವ್ಯತ್ಯಾಸವಿಲ್ಲದೆ ಕೀ. ೩೯, ನು. ೮–೨೦ರಲ್ಲಿ ಬಂದಿದೆ.

ಶ್ಲೋಕ ೪೪–೪೬. ಆ ಗೋಪಿಯರು ರಾತ್ರಿಯಾದ ನಂತರ ಮನೆಗೆ ಹೋಗುತ್ತಾರಾದರೂ ಕೃಷ್ಣನನ್ನೇ ನೆನೆಸುತ್ತ ಮನೆಮಠಗಳನ್ನು ಮರೆಯುತ್ತಾರೆ. ಮತ್ತೆ ಯಮುನಾತೀರಕ್ಕೆ ಬಂದು ಒಟ್ಟಾಗಿ ಕೃಷ್ಣನನ್ನೇ, ಧ್ಯಾನಿಸುತ್ತ ಬಯಸುತ್ತ ಹಾಡಲಾರಂಭಿಸುತ್ತಾರೆ. ಈ ಭಾಗ ನು. ೨೧–೨೩ರಲ್ಲಿ ಅವರು ಮನೆಗೆ ಹೋಗದೆ ರಾತ್ರಿಯಲ್ಲೂ ಹುಡುಕುತ್ತ ತಿರುಗುತ್ತ ಕಾಳಿಂದಿ ತೀರದ ಮರಳಿನಲ್ಲಿ ಕುಳಿತು ಆಲಾಪಿಸುತ್ತ 'ಪರಸನ್ನ ವೆಂಕಟನ ಪರಸನ್ನೀಕರಿಸಿದರ್ ಪರಸನ್ನಮುಖಿಯರ್ ಸತತ' ಎಂದಾಗಿದೆ.

ಅಧ್ಯಾಯ ೩೧, ಶ್ಲೋಕ ೧–೧೯ (ಗೋಪೀಗೀತ). ಕೃಷ್ಣನಿಗಾಗಿ ಹಂಬಲಿಸಿ ಗೋಪಿಯರು ಹಾಡಿದ ಈ ಭಾಗ ಪ್ರ.ಭಾ.ದಲ್ಲಿ ಕೀ. ೪೦, ನು. ೧–೧೯ರಲ್ಲಿ ಒಂದೆರಡು ಸಣ್ಣ ವ್ಯತ್ಯಾಸಗಳೊಡನೆ (ನು. ೧೨, ೧೩, ೧೬), ಬಹಳ ಮಟ್ಟಿಗೆ ಮೂಲವನ್ನೇ ಅನುಸರಿಸಿ ಬಂದಿದೆ.

ಅಧ್ಯಾಯ ೩೨ರ ಶ್ಲೋಕ ೧, ೨ ಇರುವಂತೆಯೇ ಕೀ. ೪೦, ನು. ೨೦, ೨೧ರಲ್ಲಿ ಉದ್ಧರಿಸಲ್ಪಟ್ಟಿವೆ. ಇವುಗಳನ್ನೇ ಆಧರಿಸಿರುವಂತೆ ಕೀ. ೪೨ರ ನು. ೧,೨ ಕೆಲವು ವ್ಯತ್ಯಾಸಗಳೊಡನೆ ಬಂದಿವೆ. ಕೀ. ೪೧ರಲ್ಲಿ ಮತ್ತೆ ಪ್ರತ್ಯಕ್ಷನಾದ ಕೃಷ್ಣನ ಮೋಹಕರೂಪ, ವೇಷ ಭೂಷಣಗಳ ವರ್ಣನೆ ಮೂರು ನುಡಿಗಳಲ್ಲಿವೆ. ಇದು ಪ್ರ. ಭಾ.ದಲ್ಲಿಯ ಹೆಚ್ಚಿನ ಅಂಶವಾಗಿದ್ದೂ ಸಂದರ್ಭೋಚಿತವಾಗಿಯೇ ಬಂದಿದೆ ಎನ್ನಬಹುದು. ಶ್ಲೋಕ ೩ರ ಭಾವವನ್ನು ಕೀ. ೪೩ರ ಮೂರು ನುಡಿಗಳಲ್ಲಿ ವಿಸ್ತರಿಸಲಾಗಿದೆ. 'ಆವಿರ್ಭವಿಸಿ ಬಂದ ಪ್ರಿಯತಮನಾದ ಆ ಕೃಷ್ಣನನ್ನು ನೋಡಿ ಅಲ್ಲಿದ್ದ ಗೋಪಾಂಗನೆಯರೆಲ್ಲರೂ ಪ್ರೇಮದಿಂದ ಅರಳಿದ ಕಣ್ಣುಳ್ಳವರಾಗಿ ಪ್ರಾಣಗಳು ಮರಳಿಬಂದು ಚೇತರಿಸಿಕೊಂಡ ಶರೀರಗಳಂತೆ ಒಟ್ಟಿಗೇ ಮೇಲಕ್ಕೆ ಎದ್ದರು' (ಶ್ಲೋಕ ೩) ಎಂದಿರುವುದು, ಕೀ. ೪೩ರಲ್ಲಿ ಪಲ್ಲವಿ ಹಾಗೂ ೩ ನುಡಿಗಳಾಗಿ ರೂಪ ತಳೆದಿದೆ. ನು. ೨ ಪೂರ್ಣವಾಗಿ ದಾಸರ ಔಚಿತ್ಯಪೂರ್ಣ ಹೊಸಸೃಷ್ಟಿ. ಮೂಲದ ಚಿತ್ರಕ್ಕೆ ಮತ್ತಷ್ಟು ಕಳೆಗೂಡಿಸಿದೆ.

ಶ್ಲೋಕ ೪–೮ರಲ್ಲಿ ಕೃಷ್ಣನನ್ನು ಕಂಡ ಗೋಪಿಯರು ಆನಂದ ಪರವಶರಾಗಿ ವರ್ತಿಸಿದ್ದರ ಚಿತ್ರಣವಿದೆ. ಈ ಭಾಗ ಕೀ. ೪೪, ನು. ೧–೩ರಲ್ಲಿ ಬಂದಿದೆ. ಶ್ಲೋಕ ೯, ನು. ೪ರಲ್ಲಿ ಇನ್ನೂ ಹೆಚ್ಚು ಭಾವಪೂರ್ಣವಾಗಿ ಬಂದಿದೆ. ಶ್ಲೋಕ ೧೦ರಲ್ಲಿ ಸಂತೋಷದಿಂದ ನಲಿದಾಡುತ್ತಿರುವ ಗೋಪಿಯರಿಂದ ಪರಿವೃತನಾದ ಕೃಷ್ಣನ ವರ್ಣನೆ ಇದೆ. ಇದು ಪ್ರ.ಭಾ.ದಲ್ಲಿಲ್ಲ. ಇದರ ಬದಲಿಗೆ ನು. ೫ರಲ್ಲಿ ಮತ್ತೆ ಗೋಪಿಯರ ಸಂತೋಷವನ್ನೇ

ಹೇಳಲಾಗಿದೆ. ಶ್ಲೋಕ ೧೧–೨೩ರ ಭಾಗವನ್ನು ಅನುಸರಿಸಿ ಸು. ೬–೧೫ರ ಭಾಗ ಕೆಲವು ವ್ಯತ್ಯಾಸಗಳೊಡನೆ ಬಂದಿದೆ.

ಅಧ್ಯಾಯ ೩೩, ಶ್ಲೋಕ ೧–೩. ಕೃಷ್ಣನ ಮಾತುಗಳಿಂದ ತಮ್ಮ ವಿರಹ ವ್ಯಥೆ ಕಳೆದುಕೊಂಡ ಗೋಪಿಯರು ಕೃಷ್ಣನೊಡನೆ ರಾಸಕ್ರೀಡೆಗೆ ತೊಡಗುತ್ತಾರೆ. ಈ ಭಾಗ ಕೀ. ೪೪, ಸು. ೧೬, ೧೭ರಲ್ಲಿ ವರ್ಣಿತವಾಗಿದೆ. ಶ್ಲೋಕ ೪, ೫ರ ದೇವತೆಗಳ ಪ್ರಸ್ತಾಪ ಪ್ರ. ಭಾ.ದಲ್ಲಿಲ್ಲ. ಶ್ಲೋಕ ೬, ೭ರ ರಾಸನೃತ್ಯವನ್ನು ಸು. ೧೮. ೧೯ರಲ್ಲಿ ವರ್ಣಿಸಿದ ನಂತರ, ಆ ಗೋಪಿಯರ ಭಾಗ್ಯದ ಬಗ್ಗೆ ದಾಸರು ತಮ್ಮ ಅಭಿಪ್ರಾಯವನ್ನು ಸು. ೨೦, ೨೧ರಲ್ಲಿ ಹೇಳಿದ್ದಾರೆ. ಶ್ಲೋಕ ೮ರ ವಿವರ ಕೀ. ೪೫, ಸು. ೧ರಲ್ಲಿ ಸ್ರಗ್ಧರಾವೃತ್ತದಲ್ಲಿದೆ. ಮೂಲದ 'ಲಕುಚಪಟ್ಟಿಕೈ:' ಇಲ್ಲಿಲ್ಲ. 'ಕಬರರಶನಾಗ್ರಂಥಯ:' ಇಲ್ಲಿ ಕೇವಲ 'ಸೋಮುರ್ಬಡಿ ಬಿಟ್ಟಿಲೇಯಲ್' ಎಂದಾಗಿದೆ. 'ಕುಂತಲೈರ್ಗಂಡಲೋಲೈ:' ಎನ್ನುವುದು, 'ದೇದೀಪ್ಯ ಪ್ರೋಪ್ರವಾಳಿ ಕದಪಿಲಿ ಹೊಳೆಯಲ್' ಎಂದು ಮತ್ತಷ್ಟು ಹೊಳಪಿನಿಂದ ಕೂಡಿಬಂದಿದೆ. ಮೂಲವನ್ನು ಬಹುಮಟ್ಟಿಗೆ ಅನುಸರಿಸಿರುವಲ್ಲಿಯೂ ಇಂಥ ವ್ಯತ್ಯಾಸಗಳಾಗಿರುವುದನ್ನು ಇಡೀ ಕೃತಿಯಲ್ಲೇ ಗಮನಿಸಬಹುದಾಗಿದೆ.

ಶ್ಲೋಕ ೯–೧೮ರ ವಿವರ ಕೀ. ೪೫, ಸು. ೨ರಿಂದ ಕೀ. ೪೬, ಸು. ೩ರಲ್ಲಿ ಅಲ್ಲಲ್ಲಿ ವ್ಯತ್ಯಾಸಗೊಂಡು ಬಂದಿದೆ. ಶ್ಲೋಕ ೧೯ರಲ್ಲಿ ಕೃಷ್ಣನ ದಿವ್ಯಲೀಲೆಗಳನ್ನು ನೋಡಿ ದೇವತಾಸ್ತ್ರೀಯರು ಮೋಹಗೊಂಡರು. ಚಂದ್ರನೂ ಆಶ್ಚರ್ಯಭರಿತನಾದನು ಎಂದಿರುವುದು ; ಕೀ. ೪೬, ಸು. ೧೫, ೧೬ರಲ್ಲಿ ಬದಲಾಗಿರುವ ಪರಿಯನ್ನು ಗಮನಿಸಬಹುದು. ಕೀ. ೪೬, ಸು. ೪-೧೪ ಆ ಸಂದರ್ಭಕ್ಕನುಗುಣವಾಗಿ ಬಂದಿರುವ ಹೆಚ್ಚಿನ ವರ್ಣನೆಗಳಾಗಿವೆ. ಶ್ಲೋಕ ೨೦–೨೨ರ ವಿವರಗಳು ಕೀ. ೪೬ರ ಸು. ೧೭–೨೩ರಲ್ಲಿ ಬಂದಿವೆ. ಇಲ್ಲಿ ಮೂಲದ ಭಾವವನ್ನು ದಾಸರು ಹೇಗೆ ಬದಲಿಸುತ್ತಾರೆ. ಅದಕ್ಕೆ ತಮ್ಮದೇ ಆದ ಹೊಳಪನ್ನು ಹೇಗೆ ಕೊಡುತ್ತಾರೆ ಎನ್ನುವುದಕ್ಕೆ ಒಂದು ಉದಾಹರಣೆಯನ್ನು ನೋಡಬಹುದು

ಕಬ್ಬುಬಿಲ್ಲನ ಕೊಬ್ಬು ಮುರಿದಿಹ ಹಬ್ಬನುಂಡಸಿಯರು
ಹುಬ್ಬೋರೆಗಣ್ಣಲಿ ಉಬ್ಬುಬ್ಬಿ ನೋಡಿವರಬ್ಧೀಶನಂಗನೇರು ೨೧

ಈ ನುಡಿಯ ಮೊದಲ ಸಾಲು ಮೂಲದಲ್ಲಿಲ್ಲ.ಜೊತೆಗೆ ಮೂಲದ 'ಅಮೃತವರ್ಷದಂತಿರುವ ಮಂದಹಾಸದಿಂದ ಕೂಡಿದ ನೋಟ'ಇಲ್ಲಿ ೨ನೆಯ ಸಾಲಾಗಿ ಬದಲಾಗಿದೆ.ಹೀಗೆಯೇ ಶ್ಲೋಕ ೨೩–೨೬ರ ಕೃಷ್ಣಗೋಪಿಯರ ಜಲಕ್ರೀಡೆ, ಹಾಗೂ ಯಮುನಾತೀರವಿಹಾರಗಳು ಕೆಲವು ವ್ಯತ್ಯಾಸಗಳೊಂದಿಗೆ ಸು. ೨೪–೩೦ರಲ್ಲಿ ಬಂದಿವೆ. ಶ್ಲೋಕ ೨೭–೪೦ರ ಪರೀಕ್ಷಿತ ಹಾಗೂ ಶುಕಮುನಿಗಳ ನಡುವಿನ ಕೃಷ್ಣನ ನಡತೆಯ ಬಗೆಗಿನ ಚರ್ಚೆಯ ಬದಲಿಗೆ ಕೀ. ೪೬, ಸು. ೩೧–೪೧ರಲ್ಲಿ ಕೃಷ್ಣನ ಶ್ರೇಷ್ಠತ್ವದ ಸ್ತುತಿ ಮಾತ್ರ ಬಂದಿದೆ. ಉಳಿದಂತೆ ಕೃಷ್ಣನ ಮಾಯೆಯಿಂದ ಗೋಪರು ತಮ್ಮ ಪತ್ನಿಯರು ತಮ್ಮ ಜೊತೆಗೇ ಇದ್ದಂತೆ ಭಾವಿಸುವುದು (ಶ್ಲೋಕ ೩೮), ಬೆಳಗಿನ ಜಾವದಲ್ಲಿ ಗೋಪಿಯರು ತಂತಮ್ಮ

ಮನೆಗಳಿಗೆ ಹೋಗುವುದು (ಶ್ಲೋಕ ೩೯)–ಈ ವಿಚಾರಗಳು ಸು. ೩೮ರ ೨ ಸಾಲುಗಳಲ್ಲಿ ಸಂಗ್ರಹವಾಗಿ ಬಂದಿವೆ.

ಅಧ್ಯಾಯ ೩೪ರಲ್ಲಿ, ಕೃಷ್ಣನು ನಂದನನ್ನು ಹೆಬ್ಬಾವಿನಿಂದ ರಕ್ಷಿಸಿದ್ದು. ಶಾಪ ಮುಕ್ತವಾದ ಹೆಬ್ಬಾವು ವಿದ್ಯಾಧರನಾದದ್ದು. ಶಂಖಚೂಡನ ವಧೆ–ಈ ವಿಚಾರಗಳಿವೆ.

ಅ. ೩೪, ಶ್ಲೋಕ ೧–೨ರ ವಿವರ ಕೀ. ೪೭, ಸು. ೧ರಲ್ಲಿ ಸಂಗ್ರಹವಾಗಿ ಬಂದಿದೆ. ಮೂಲದ ದಾನದ ವಿವರಗಳು ಪ್ರ. ಭಾ.ದಲ್ಲಿಲ್ಲ. ಮೂಲದಲ್ಲಿ ನಂದ ಮೊದಲಾದವರು ಅಂಬಿಕೆ, ರುದ್ರದೇವರು ಇಬ್ಬರನ್ನೂ ಪೂಜಿಸಿದರೆ ಇಲ್ಲಿ ಅಂಬಿಕೆಯನ್ನು ಮಾತ್ರ ಪೂಜಿಸುತ್ತಾರೆ. ಶ್ಲೋಕ ೪ರ ವಿವರವನ್ನು ಪ್ರ.ಭಾ.ದಲ್ಲಿ ಬಿಡಲಾಗಿದೆ. ಶ್ಲೋಕ ೫–೯ರ ವಿವರಗಳು ಸು. ೨ ಮತ್ತು ಸು. ೩ರ ಮೊದಲ ಸಾಲಿನಲ್ಲಿ ಸಂಗ್ರಹಗೊಂಡಿವೆ. ಮೂಲದಲ್ಲಿ ನಂದನೇ ಕೃಷ್ಣನನ್ನು ರಕ್ಷಿಸೆಂದು ಕೂಗಿದರೆ ಇಲ್ಲಿ ಗೋಪಾಲಕರು ಕೂಗುತ್ತಾರೆ. ಶ್ಲೋಕ ೧೦–೧೯ರಲ್ಲಿ ಕೃಷ್ಣ ವಿದ್ಯಾಧರನನ್ನು ಅವನಿಗೆ ಹಾವಿನ ಜನ್ಮ ಬಂದುದರ ಕಾರಣ ಕೇಳಿದಾಗ, ವಿದ್ಯಾಧರನು ತನ್ನ ಕಥೆಯನ್ನು ಹೇಳಿ ಕೃಷ್ಣನ ಅನುಮತಿಯನ್ನು ಪಡೆದು, ನಮಸ್ಕರಿಸಿ ತನ್ನ ಲೋಕಕ್ಕೆ ಹೋಗುತ್ತಾನೆ. ಈ ಭಾಗ ಸು. ೩ರ ಉತ್ತರಾರ್ಧದಿಂದ ಸು. ೫ರ ಪೂರ್ವಾರ್ಧದಲ್ಲಿ ಸಂಗ್ರಹಗೊಂಡಿದೆ. ಮೂಲದಲ್ಲಿ ಬರುವ ಮುನಿಯ ಶಾಪದ ವೃತ್ತಾಂತವನ್ನು ಹೇಳದೆ 'ಹಿಂದೆ ವಿದ್ಯಾಧರ ತಾನು ಮುನಿಯ ಶಾಪದಿಂದ ಹಿಯಾಗಿರಲು' ಎಂದು ಮಾತ್ರ ಹೇಳಿದೆ. ಹಾಗೆಯೇ ಕೃಷ್ಣನ ಮಾತುಗಳನ್ನೂ ಕೈಬಿಡಲಾಗಿದೆ. ವಿದ್ಯಾಧರ ಕೃಷ್ಣನಿಗೆ ಹೇಳುವ ಮಾತುಗಳು (ಶ್ಲೋಕ ೧೪–೧೮) ಇಲ್ಲಿ ಕೀ. ೪೭ರ ಸು. ೫ ಮತ್ತು ಸು. ೬ರ ಮೊದಲ ಎರಡು ಸಾಲುಗಳಲ್ಲಿ ಸುಂದರವಾದ ಪ್ರಾರ್ಥನೆಯಾಗಿ ಬಂದಿದೆ.

ಅ. ೩೪, ಶ್ಲೋಕ ೧೯–೨೪ರ ವಿವರ ಕೀ. ೪೭ ಸು. ೬ರಿಂದ ಕೀ. ೪೮, ಸು. ೩ರಲ್ಲಿ ಸಂಗ್ರಹಗೊಂಡಿದೆ. ಶ್ಲೋಕ ೨೫–೩೨ರ ಶಂಖಚೂಡನ ವೃತ್ತಾಂತ ಕೀ. ೪೮, ಸು. ೪, ೫ರಲ್ಲಿ ಸಂಗ್ರಹಿತವಾಗಿದೆ. ಮೂಲದಲ್ಲಿ ಕೃಷ್ಣನು ಶಂಖಚೂಡನನ್ನು ಬೆನ್ನಟ್ಟಿದಾಗ ಬಲರಾಮನು ಗೋಪಿಯರ ರಕ್ಷಣೆಗೆ ನಿಲ್ಲುತ್ತಾನೆ. ಆ ವಿಚಾರ ಪ್ರ.ಭಾ.ದಲ್ಲಿ ಬಂದಿಲ್ಲ. ಸು.೬–೮ರ, ಗೋಪಿಯರು ಮಾಡುವ ಕೃಷ್ಣಸ್ತುತಿ ಮೂಲದಲ್ಲಿಲ್ಲ. ಸು. ೯ರಲ್ಲಿ ಅನೇಕ ಕಡೆಗಳಲ್ಲಿ ಪುನರುಕ್ತಗೊಳ್ಳುವ ಫಲಶ್ರುತಿಯ ಮಾತುಗಳಿವೆ.

ಅಧ್ಯಾಯ ೩೫ರಲ್ಲಿ ಕೃಷ್ಣ ಗೋವುಗಳನ್ನು ಮೇಯಿಸಲು ಬೃಂದಾವನದ ಕಡೆ ಹೋದಾಗ ಅವನ ಧ್ಯಾನದಲ್ಲೇ ಇರುತ್ತಿದ್ದ ಗೋಪಿಯರು ಕೃಷ್ಣನ ವೇಣುಗೀತೆಯನ್ನು ಕುರಿತು ಹಾಡುತ್ತಿದ್ದರು. ಇದರಲ್ಲಿ ಕೃಷ್ಣನ ಕೊಳಲಗಾನ ಕೇಳಿ ಗೋಪಿಯರು, ದೇವತೆಗಳು, ಪ್ರಕೃತಿ ಎಲ್ಲರೂ ಮರುಳಾಗಿ ನಿಂತದ್ದರ ವಿವರ ಬರುತ್ತದೆ. ಇದು ಮೂಲದಲ್ಲಿ ೨೬ ಶ್ಲೋಕಗಳಲ್ಲಿದ್ದು ಪ್ರ.ಭಾ.ದಲ್ಲಿ ಕೀ. ೪೯, ಸು. ೧–೧೩ರಲ್ಲಿ ಬಂದಿದೆ. ಕೆಲವು ವಿವರಗಳು ಸಂಗ್ರಹಗೊಂಡಿವೆ, ಕೆಲವು ವಿಸ್ತಾರವಾಗಿವೆ. ಕೆಲವು ಎಲ್ಲಲ್ಲಿ ಬಿಡಲಾಗಿವೆ. ಶ್ಲೋಕ ೪, ೫ರ ವಿವರ ಸು. ೪–೭ರಲ್ಲಿ ವಿಸ್ತರಿಸಿ ಮೂಲದ ಸೊಗಸನ್ನು ಹೆಚ್ಚಿಸಿದೆ.

ಶ್ಲೋಕ ೨೮–೬೧. ರಾಮಕೃಷ್ಣರನ್ನು ಕೊಲ್ಲುವುದು ಪಾಪಕಾರ್ಯವಲ್ಲವೆ ಎಂದು ಮಾವಟಿಗ ಕೇಳಿದಾಗ, ಕಂಸ ತನ್ನ ಹುಟ್ಟಿನ ಕಥೆಯನ್ನು ಹೇಳಿ, ಆ ದೃಷ್ಟಿಯಿಂದ ಸಂಬಂಧಿಗಳಲ್ಲದ ರಾಮಕೃಷ್ಣರನ್ನು ಕೊಂದರೆ ಪಾಪವಿಲ್ಲ ಎಂದು ತಿಳಿಸುತ್ತಾನೆ. ಈ ಭಾಗ ಕೀ. ೫೧, ನು. ೯–೧೮ರಲ್ಲಿ ಬಂದಿದೆ. ಈ ಭಾಗದಲ್ಲಿ ಶ್ಲೋಕ ೩೧–೩೭ರಲ್ಲಿ ಬರುವ, ಗಂಧರ್ವನೊಬ್ಬ ಕಂಸನ ತಾಯಿಯನ್ನು ಕೂಡಿದ ಸಂದರ್ಭದ ವಿವರವಾದ ವರ್ಣನೆ ಪ್ರ.ಭಾ.ದಲ್ಲಿ ಬರುವುದಿಲ್ಲ. ಇಲ್ಲಿ ಮುಖ್ಯ ಕಥಾಂಶವನ್ನು ಮಾತ್ರ ಸಂಗ್ರಹಿಸ ಲಾಗಿದೆ. ಉಳಿದ ಭಾಗವೂ ಹೀಗೆಯೇ ಒಟ್ಟಿನಲ್ಲಿ ಮೂಲವನ್ನು ಅನುಸರಿಸಿದೆ ಎಂದು ಹೇಳಬಹುದು.

ಶ್ಲೋಕ ೬೨–೭೪. ಕಂಸನು ಅಕ್ರೂರನಿಗೆ ಬೃಂದಾವನಕ್ಕೆ ಹೋಗಿ ಕೃಷ್ಣನನ್ನು ಕರೆತರುವಂತೆ ಹೇಳುತ್ತಾನೆ. ಇದು ನು. ೧೯ರಿಂದ ನು. ೨೪ರ ಪೂರ್ವಾರ್ಧದಲ್ಲಿ ಬಂದಿದೆ. ಶ್ಲೋಕ ೭೫ರ ವಿವರದ ಬದಲಿಗೆ ನು. ೨೪ರ ಉತ್ತರಾರ್ಧ ಮತ್ತು ನು. ೨೫ರ ವಿವರ ಗಳು ಬಂದಿವೆ. ಇಲ್ಲಿಯ ಅಕ್ರೂರನ ಚಿಂತನೆ ('ಮರುಳರು ......ಗುರುಹಿರಿಯರ ತಪ') ಮೂಲದಲ್ಲಿಲ್ಲ.

ಅಧ್ಯಾಯ ೩೭, ಶ್ಲೋಕ ೧–೯ರಲ್ಲಿ ಬರುವ ಕೇಶಿರಾಕ್ಷಸನ ವಧೆ ಹೆಚ್ಚಿನ ವ್ಯತ್ಯಾಸಗಳಿಲ್ಲದೆ ಕೀ. ೫೨, ನು. ೧ರಿಂದ ನು. ೮ರ ಮೂರುಸಾಲುಗಳಲ್ಲಿ ಬಂದಿದೆ. ಒಂದೆ ರಡು ಸಣ್ಣವ್ಯತ್ಯಾಸಗಳು : ಮೂಲದಲ್ಲಿ ಕೇಶಿಯ ಬಾಯಲ್ಲಿ ಕೃಷ್ಣ ತನ್ನ ಎಡತೋಳನ್ನು ಹೊಗಿಸಿದರೆ ಇಲ್ಲಿ ಬರಿಯ 'ತೋಳೊಂದನು' ಎಂದು ಬರುತ್ತದೆ. ಹಾಗೆಯೇ ಮೂಲದ 'ಲಂಡಂ ವಿಸೃಜನ್' ಎನ್ನುವ ವಿವರ ಪ್ರ.ಭಾ.ದಲ್ಲಿ ಬಂದಿಲ್ಲ. ಶ್ಲೋಕ ೧೦–೨೫ರಲ್ಲಿ ಕೇಶಿಸಂಹಾರದ ನಂತರ ನಾರದ ಮಹರ್ಷಿ ಬಂದು ಕೃಷ್ಣನನ್ನು ಸ್ತುತಿಸಿ ಹೋಗುತ್ತಾನೆ. ಶ್ಲೋಕ ೧೦ರ ವಿಷಯ ಕೀ. ೫೨, ನು. ೮ರ ನಾಲ್ಕನೆಯ ನಾಲಿನಲ್ಲಿ ಬಂದಿದೆ. ನು. ೯ರ ವಿವರ ಮೂಲದಲ್ಲಿಲ್ಲ. ನು. ೧೦, ಹೆಚ್ಚಿನ ಕೀ. ಗಳ ಅಂತ್ಯದಲ್ಲಿ ಸಾಮಾನ್ಯವಾಗಿ ಕಾಣಿಸಿ ಕೊಳ್ಳುವ ಕೃಷ್ಣಸ್ತುತಿಯಾಗಿದೆ.

ಅ. ೩೭, ಶ್ಲೋಕ ೧೧–೨೫ರ ಸ್ತುತಿಯ ವಿವರಗಳು ಕೀ. ೫೩ರ ನು. ೧-೮ರಲ್ಲಿ ಕೆಲವು ವ್ಯತ್ಯಾಸಗಳೊಂದಿಗೆ ಬಂದಿವೆ. ಉದಾ. ಗೆ, ಶ್ಲೋಕ ೧೧–೧೩ರ ವಿವರ ಕೀ. ೫೩, ನು. ೧ರಲ್ಲಿ ಬಂದಿರುವ ರೀತಿಯನ್ನು ಗಮನಿಸಬಹುದು. ಹಾಗೆಯೇ ಶ್ಲೋಕ ೨೬ರ ವಿವರ ನು. ೯ರಲ್ಲಿ ವರ್ಣಿತವಾಗಿರುವ ಪರಿಯನ್ನೂ ನೋಡಬಹುದು.

ಶ್ಲೋಕ ೨೭–೩೪ರಲ್ಲಿ ವ್ಯೋಮಾಸುರನ ವಧೆಯ ಭಾಗ ವರ್ಣಿತವಾಗಿದೆ. ಇದು ಪ್ರ. ಭಾ.ದ ಕೀ. ೫೪, ನು. ೧–೬ರಲ್ಲಿ ವರ್ಣಿತವಾಗಿದೆ. ವ್ಯೋಮಾಸುರನ ಗಾಸಿಯನ್ನು ಗೋವಳರು ಕೃಷ್ಣನಿಂದ ದಾಟಿದರೆನ್ನುವುದನ್ನು ಪಲ್ಲವಿಯಲ್ಲಿ ಸೂಚಿಸಿ ಆ ಭಾಗದ ಮುಖ್ಯ ಘಟನೆಯ ಸೂಚನೆಯನ್ನು ಮೊದಲಿಗೇ ಕೊಟ್ಟಿದ್ದಾರೆ. ಶ್ಲೋಕ ೨೯ರಲ್ಲಿ ಬರುವ 'ಮಯಪುತ್ರೋ ಮಹಾಮಾಯೋ' ಎಂಬ ವಿವರಗಳು ಇಲ್ಲಿ (ನು. ೨) ಬಂದಿಲ್ಲ. ಹಾಗೆಯೇ ಇಲ್ಲಿಯ 'ತೋಳನ ತೆರನವ ಮಾಡಲು' ಎಂಬ ವರ್ಣನೆ ಮೂಲ

ದಲ್ಲಿಲ್ಲ. ಆದರೆ ಈ ಬದಲಾವಣೆ ಇಲ್ಲಿಯ ಸಂದರ್ಭಕ್ಕೂ ಮುಂದೆ ಬರುವ ಸಿಂಹ ತೋಳಗಳ ಉಪಮೆಗೂ ಹೊಂದುವಂತೆ ಬಂದಿದೆ.

ಶ್ಲೋಕ ೩೧ರಲ್ಲಿ 'ಆ ವ್ಯೋಮಾಸುರನ ಆ ಕೆಲಸವನ್ನು ಸಜ್ಜನರಿಗೆ ಆಶ್ರಯದಾತನಾದ ಶ್ರೀಕೃಷ್ಣನು ಕಂಡುಕೊಂಡು ಸಿಂಹವು ತೋಳವನ್ನು ಹಿಡಿಯುವಂತೆ ತನ್ನ ಪರಾಕ್ರಮದಿಂದ ಹಿಡಿದುಬಿಟ್ಟನು' ಎಂದು ಬಂದಿದೆ. ಈ ಭಾಗ ನು. ೨ರಲ್ಲಿ,

ಬಿಲದೊಳು ಸಿಕ್ಕಿದ ಗೋವಳರೆಲ್ಲರು ಬಲುಭಯಪೈದವರು
ನಳಿನನಯನ ಗೋವಿಂದಾಯೆನ್ನುತ ಸಲೆ ದುಃಖ ಹೊಂದಿದರು
ಎಳೆಯರ ಆರ್ತಸ್ವರವನು ಕೇಳಿದ ಬಿಳಿನ ಸ್ಥಿತಿಯನರಿದ
ತಿಳಿಯದಂತೆ ಸರ್ವಜ್ಞ ಶಿಖಾಮಣಿ ಬಳಿಯಲಿ ನಿಂತಿದ್ದ

ಎಂದು ವಿಸ್ತರಿಸಿ, ಮೂಲದಲ್ಲಿಲ್ಲದ ಗೋವಳರ ದುಃಖವನ್ನು ವರ್ಣಿಸಲಾಗಿದೆ. ಶ್ಲೋಕ ೩೧ರ ವಿಷಯವೇ ನು. ೪ರಲ್ಲೂ ಮುಂದುವರೆದು, ಇಲ್ಲಿ ತೋಳ–ಸಿಂಹನ ಉಪಮೆಯನ್ನು ವಿಸ್ತರಿಸಿ ಕೊಡಲಾಗಿದೆ. ನು. ೫ ಮತ್ತು ನು.೬ರ ೨ ಸಾಲುಗಳು ಮೂಲವನ್ನು ಸಂಗ್ರಹಿಸಿ ಬಂದಿವೆ. ಉಳಿದ ನು. ೬ರ ಕೊನೆಯ ಎರಡು ಸಾಲು ಹಾಗೂ ನು. ೭ರ ಕೃಷ್ಣಸ್ತುತಿ ದಾಸರ ಸ್ವಂತಿಕೆಯದಾಗಿವೆ.

ಅ. ೩೮, ಶ್ಲೋಕ ೧–೪೫ರಲ್ಲಿ ಅಕ್ರೂರನು ಮಥುರೆಗೆ ಬಂದು ಕೃಷ್ಣನನ್ನು ನೋಡಿದುದರ ವಿವರವಾದ ವರ್ಣನೆಯಿದೆ. ಇದನ್ನು ಅನುಸರಿಸಿ ಕೀ. ೫೫ ಬಂದಿದೆಯಾದರೂ ವಿವರಗಳಲ್ಲಿ ವ್ಯತ್ಯಾಸಗಳಿರುವುದು ಆರಂಭದಲ್ಲೇ ಕಾಣಿಸುತ್ತದೆ. ಈ ಕೀರ್ತನೆಯ ಪಲ್ಲವಿ ದಾಸರ ದೃಢವಾದ ನಂಬಿಕೆಯೊಂದನ್ನು ಹೇಳುತ್ತದೆ. ಶ್ಲೋಕ ೧ರ ವಿಷಯ ಕೀ. ೫೫ರ ನು. ೧, ೨ರಲ್ಲಿ ವ್ಯತ್ಯಾಸಗೊಂಡು ಬಂದಿದೆ. ಮೂ. ಭಾ.ದಲ್ಲಿ, 'ಮಹಾಮತಿಯಾದ ಅಕ್ರೂರನು ಸಹ ಆ ರಾತ್ರಿಯನ್ನೆಲ್ಲ ಮಥುರಾನಗರಿಯಲ್ಲೇ ಕಳೆದು ಬೆಳಗ್ಗೆ ರಥವೇರಿ ನಂದಗೋಕುಲಕ್ಕೆ ಹೊರಟನು' ಎಂದಿದ್ದರೆ, ಇಲ್ಲಿ—

ವ್ರಜಕೆ ತೆರಳಿದ ಕಂಸನ ಮತದಿ ಬಂದು ರಜನಿಯೊಳಿದ್ದಕ್ರೂರಗೃಹ ಹೊಂದಿ
ಸುಜನೇಶ್ವರ ಶ್ರೀಕೃಷ್ಣಪಾದ ಸಂನಿಜಧ್ಯಾನದಿ ಸ್ಮರಣೆಯಲಿದ್ದ ೧
ರವಿಗರ್ಘ್ಯದ ಕರ್ಮವ ಮಾಡಿ ಶುಭ ಹವಿರ್ಗಾಹುತಿ ವಿಧಿಯಲಿ ನೀಡಿ
ಜವದಿ ರಥಕೆ ಹಯಗಳ ಹೂಡಿ ಮಾಧವ ದರುಶನಕೆ ಶಕುನ ನೋಡಿ ೨

ಎಂದು ವಿಸ್ತರಿಸಲಾಗಿದೆ. ನು. ೨ರ ವಿವರಗಳು ದಾಸರು ಸೇರಿಸಿರುವಂಥವಾದರೂ ಸನ್ನಿವೇಶಕ್ಕೆ ಪೂರಕವಾಗಿಯೇ ಇರುವುದನ್ನು ಗಮನಿಸಬಹುದು. ಇಂಥ ಅನೇಕ ವ್ಯತ್ಯಾಸಗಳನ್ನು ಗುರುತಿಸಬಹುದಾದರೂ ಇವು ಕಥೆಗೆ, ಮೂಲಭಾವಕ್ಕೆ ತೊಡಕಾಗಿ ಬರುವುದಿಲ್ಲ ಎನ್ನುವುದು ಗಮನಾರ್ಹ. ವರ್ಣನೆ ವಿಸ್ತೃತವಾಗಿ ಬಂದರೂ ಮೂಲಭಾವಕ್ಕೆ ಪೋಷಕವಾಗಿಯೇ ಬಂದಿರುವುದನ್ನು ಮೇಲಿನ ಉದಾಹರಣೆಯಲ್ಲೇ ಗಮನಿಸಬಹುದು.

ಈ ಅಧ್ಯಾಯದ ೪೨ ಶ್ಲೋಕಗಳ ಸಾರಾಂಶ ಕೀ.೫೫ರ ನು. ೧–೫ರಲ್ಲಿ ಬಂದಿದೆ. ಈ ಭಾಗವನ್ನು ಇಡಿಯಾಗಿ ಮೂಲದೊಡನೆ ಹೋಲಿಸಿದಾಗ ಕೆಲವೆಡೆ ವರ್ಣನೆ

ವಿಸ್ತಾರಗೊಂಡಿವೆ. ಕೆಲವೆಡೆ ಸಂಗ್ರಹಗೊಂಡಿವೆ. ಈ ಅಧ್ಯಾಯದ ಶ್ಲೋ. ೪೩-೪೫ರಲ್ಲಿ ಬರುವ ನಂದಗೋಪ ಅಕ್ರೂರನಿಗೆ ಮಾಡುವ ಉಪಚಾರ, ಸಂಭಾಷಣೆ ಪ್ರ.ಭಾ.ದಲ್ಲಿಲ್ಲ. ಹಾಗೆಯೇ ಇಲ್ಲಿಯ ಅನೇಕ ಕೀರ್ತನೆಗಳ ಅಂತ್ಯದಲ್ಲಿ ಬರುವ ಕೃಷ್ಣಸ್ತುತಿ ಮೂಲದಲ್ಲಿರುವುದಿಲ್ಲ.

ಅಧ್ಯಾಯ ೩೯ ರಲ್ಲಿ ಮಥುರೆಗೆ ಬಲರಾಮ ಕೃಷ್ಣರ ಪ್ರಯಾಣ, ಗೋಪಿಯರ ವಿಲಾಪ. ಅಕ್ರೂರನಿಗೆ ಯಮುನಾನದಿಯಲ್ಲಿ ಕೃಷ್ಣದರ್ಶನ- ಈ ಮುಖ್ಯಾಂಶಗಳು ಬಂದಿವೆ. ಶ್ಲೋಕ ೧-೧೨ರಲ್ಲಿ ಬರುವ ವಿಚಾರಗಳು ಕೀ. ೫೬, ನು. ೧-೩ರಲ್ಲಿ ಸಂಗ್ರಹಗೊಂಡಿವೆ. ವಿವರಗಳಲ್ಲಿ ಇವುಗಳಲ್ಲಿಯೂ ಅಲ್ಲಲ್ಲಿ ವ್ಯತ್ಯಾಸಗಳಿವೆ. ಉದಾ.ಗೆ ಶ್ಲೋಕ ೧೦ ರಲ್ಲಿ, 'ಶೂರನಾದ ಶತ್ರುಗಳನ್ನು ಸಂಹರಿಸಲು ಸಮರ್ಥರಾದ ಶ್ರೀಕೃಷ್ಣ ಬಲರಾಮರಿಬ್ಬರೂ ಅಕ್ರೂರನ ಮಾತನ್ನೆಲ್ಲ ಕೇಳಿ, ಗಟ್ಟಿಯಾಗಿ ನಕ್ಕು ತಂದೆಯಾದ ಗೋಪನಿಗೆ ಕಂಸನು ಹೇಳಿಕಳಿಸಿದ ಸಂಗತಿಯನ್ನೆಲ್ಲ ತಿಳಿಸಿದರು' ಎಂದಿದ್ದಾರೆ. ಪ್ರ.ಭಾ.ದಲ್ಲಿ, 'ರಾಜಾಜ್ಞೆ ಪೇಳಿದನು ನಂದನಿಗೆ ಅಕ್ರೂರ' ಎಂದಷ್ಟೇ ಬಂದಿದೆ.

ಶ್ಲೋಕ ೧೧-೩೫ರಲ್ಲಿ ಬರುವ ವಿಚಾರಗಳು ಕೀ. ೫೬. ನು. ೪-೩೦ರಲ್ಲಿ ಬರುತ್ತವೆ. ಕೃಷ್ಣನನ್ನು ತಮ್ಮಿಂದ ಅಗಲಿಸಿ ಕರೆದೊಯ್ಯುತ್ತಿರುವ ಅಕ್ರೂರನನ್ನು ಕುರಿತ ಗೋಪಿಯರ ಮಾತುಗಳಲ್ಲಿ ನು. ೨೦ರ ವಿವರ ಮೂಲದಲ್ಲಿಲ್ಲ. ಆದರೆ ಇವು ಸಂದರ್ಭಕ್ಕೆ ಹೊಂದುವಂತೆಯೇ ಬಂದಿವೆ ಎನ್ನುವುದನ್ನು ಗಮನಿಸಬಹುದು. ಶ್ಲೋಕ ೩೬, ೩೭ರ ವಿವರ ನು. ೩೧-೩೪ರಲ್ಲಿ ವಿಸ್ತರಿಸಿದೆ. ಶ್ಲೋಕ ೩೭ರಲ್ಲಿ, ಪ್ರಿಯನಾದ ಪರಮಾತ್ಮನ ದಿವ್ಯ ಚರಿತ್ರೆಯನ್ನೇ ಯಾವಾಗಲೂ ಗಾನ ಮಾಡುತ್ತ ಅದರಿಂದ ಶೋಕವನ್ನು ಕಳೆದುಕೊಂಡು ಹಗಲನ್ನು ಕಳೆದರು ಎಂದಿದ್ದಾರೆ. ಕೀ. ೫೭ರಲ್ಲಿ ಆ ಭಾಗ ವಿಸ್ತರಿಸಿ ನು. ೩೨-೩೪ರಲ್ಲಿ ಬಂದಿದೆ. ಶ್ಲೋಕ ೩೮-೫೭ರ ಭಾಗ ನು. ೩೫-೪೬ರಲ್ಲಿ ಬಂದಿದೆ. ನು. ೪೭-೪೯ರ ವಿವರಗಳು ಪ್ರ.ಭಾ.ದಲ್ಲಿಯ ಹೆಚ್ಚಿನ ಭಾಗಗಳಾಗಿವೆ. ಇವೂ ಕೂಡ ಸಂದರ್ಭಕ್ಕೆ ಹೊರತಾಗಿಲ್ಲ. ಆ ಘಟನೆಗೆ ದಾಸರು ಮಾಡಿದ ವಿಮರ್ಶೆಯಂತಿವೆ.

ಅ. ೪೦. ಶ್ಲೋಕ ೧-೨೯ರಲ್ಲಿ ಅಕ್ರೂರನು ತಾನು ದರ್ಶಿಸಿದ ಕೃಷ್ಣಪರಮಾತ್ಮನನ್ನು ಸ್ತುತಿಸಿದ್ದರ ವಿವರಗಳಿವೆ. ಇಲ್ಲಿಯೂ ವಿವರಗಳಲ್ಲಿ ವ್ಯತ್ಯಾಸಗಳಿವೆ. ಮೂ. ಭಾದಲ್ಲಿ ಕೃಷ್ಣಸ್ತುತಿಯಿಂದಲೇ ಈ ಅಧ್ಯಾಯ ಪ್ರಾರಂಭವಾದರೆ ಇಲ್ಲಿ ಆ ಸ್ತುತಿಯನ್ನು ಕುರಿತ ದಾಸರ ಅಭಿಪ್ರಾಯವಿರುವ ಪಲ್ಲವಿಯಿಂದ ಕೀ. ೫೮ ಪ್ರಾರಂಭವಾಗಿದೆ. ನು. ೧ ಕೂಡ ಹಿಂದಿನ ಕೀ. ಯಲ್ಲಿ ಹೇಳಿದ ವಿಷಯದ ಪುನರುಕ್ತಿಯಾಗಿದೆ. ನು. ೨ರಿಂದ ಸ್ತುತಿ ಪ್ರಾರಂಭವಾಗಿದೆ.

ಶ್ಲೋಕ ೧ರಲ್ಲಿ. 'ಯಾವನ ನಾಭಿಯಲ್ಲಿ ಜನಿಸಿದ ಕಮಲಕೋಶದಿಂದ ಚತುರ್ಮುಖ ಬ್ರಹ್ಮನು ಜನಿಸಿದನೋ ಯಾವ ಚತುರ್ಮುಖ ಬ್ರಹ್ಮನಿಂದ ಈ ಲೋಕವೇ ಹುಟ್ಟಿತೋ, ಅಂತಹ ಅಖಿಲಜಗತ್ತಿಗೆ ಕಾರಣನಾದವನಿಗೂ ಕಾರಣನೂ, ನಾಶರಹಿತನೂ ಆದಿಪೂರುಷನೂ ಆದ ನಾರಾಯಣನಾದ ನಿನ್ನನ್ನು ನಾನು ವಂದಿಸುತ್ತಿದ್ದೇನೆ.' ಎಂದಿದ್ದಾರೆ,

ಪ್ರ. ಭಾ. ಕೀ. ೫೭ರಲ್ಲಿ-

ಹೇಯಂಯುಪಾಕ್ಷ ನಮೋ ನಮಸ್ತೇ ನಮೊ
ಈ ಎರಡೇಳುಭುವನ ಸೃಷ್ಟಿಪ ತೇ
ಶ್ರೀಯರಾದಿ ಶಕ್ತ್ಯಾನುಸಾರಾಯು ತವನಾ
ಭಯ ಪದ್ಮದಲಿ ಪೆತ್ತ್ಯಾಜನ ೨
ನೀನೀಗ ಬೊಮ್ಮನೊಳು ಪೊಗುವೆ ನಾ
ನಾನಂತ ಜಗವ ಪುಟ್ಟಿಸುವೆ
ಅನಾದಿ ಜೀವರ ಕರ್ಮವನು ನೋಡಿ
ನೀನೇ ಗುಣತ್ರಯದಿ ಬಂಧಿಸುವೆ ೩

ಎಂದು ಕೆಲವಂಶಗಳಲ್ಲಿ ವ್ಯತ್ಯಾಸಗೊಂಡಿದೆ. ಶ್ಲೋಕ ೨ರಲ್ಲಿ ಪಂಚೇಂದ್ರಿಯಗಳು, ಪಂಚ ತತ್ವಗಳು, ಈ ಜಗತ್ತಿಗೆ ಕಾರಣವಾದ ಎಲ್ಲವೂ ನಿನ್ನಿಂದಲೇ ಬಂದಿವೆ ಎಂದರೆ, ಪ್ರ.ಭಾ.ದ ಕೀ. ೫೭. ಸು.೪-೬ರಲ್ಲಿ 'ಸರ್ವೇಂದ್ರಿಯಾಧ್ಯಕ್ಷಾಧಿಕಾರವನ್ನು ಮುಖ್ಯಪ್ರಾಣನಿಗೆ ಕೊಟ್ಟೆ, ಎಲ್ಲ ಸುರರನ್ನು ನಿನ್ನ ಆಜ್ಞೆಯಲ್ಲಿ ಅಡಗಿಸಿಟ್ಟೆ. ನೀನೇ ಎಲ್ಲದರ ನಿಯಾಮಕ, ಉಳಿದವರೆಲ್ಲ ನಿನ್ನ ಆಜ್ಞಾನುಸಾರ ನಡೆಯುತ್ತಾರೆ. ಸುರರಿಗೆ ಸ್ವಾತಂತ್ರ್ಯವಿಲ್ಲ. ನೀನೇ ಎಲ್ಲರ ಹೃದಯದಲ್ಲಿರುವೆ. ನಿನ್ನ ಮಾಯೆಯಿಂದ ಮೋಹಿಸುವೆ. ನೀನೇ ಅಜ್ಞಾನವನ್ನು ಕವಿಸುವೆ' ಎಂಬ ಪ್ರತ್ಯೇಕ ವಿಚಾರಗಳನ್ನು ಹೇಳಲಾಗಿದೆ. ಶ್ಲೋಕ ೩ರಲ್ಲಿ 'ಬ್ರಹ್ಮಾದಿ ದೇವತೆಗಳೂ ಯಾರೂ ನಿನ್ನ ನಿಜ ಸ್ವರೂಪವನ್ನು ಅರಿಯಲಾರರು' ಎಂದಿರುವುದನ್ನು ಸು. ೭ರಲ್ಲಿ 'ನಿನ್ನ ಕಾಣದೆಲ್ಲರು ಜಗದ್ಗುರುವೆ' ಎಂದಷ್ಟೇ ಹೇಳಲಾಗಿದೆ.

ಶ್ಲೋಕ ೪-೯ರಲ್ಲಿ ಜನರು ಪರಮಾತ್ಮನನ್ನು ನಾನಾ ವಿಧವಾಗಿ ಭಜಿಸುತ್ತಾರೆ ಎನ್ನುವುದರ ವಿವರವಿದೆ. ಇದು ಸು. ೭-೯ರಲ್ಲಿ ಕೆಲವು ವ್ಯತ್ಯಾಸಗಳೊಂದಿಗೆ ಬಂದಿದೆ. ಶ್ಲೋಕ ೪ ಹೆಚ್ಚು ವ್ಯತ್ಯಾಸವಿಲ್ಲದೆ ಸು. ೭ರಲ್ಲಿ ಬಂದಿದ್ದರೆ, ಶ್ಲೋಕ ೫, ೬ ಸಂಗ್ರಹಗೊಂಡು ಸು. ೮ರಲ್ಲಿ ಬಂದಿವೆ. ಶ್ಲೋಕ ೭-೯ರ ವಿವರಗಳು ಸು. ೯ರಲ್ಲಿ ಸಂಗ್ರಹಗೊಂಡಿವೆ. ಶ್ಲೋಕ ೮, ೯ರಲ್ಲಿ 'ಬೇರೆ ಕೆಲವರು ಅನೇಕ ಆಚಾರ್ಯರ ಮಾರ್ಗಭೇದದಿಂದ ಭಿನ್ನ ಭಿನ್ನವಾಗಿ ಪರಮ ಶಿವಪ್ರೋಕ್ತವಾದ ಪಾಶುಪತಾದಿ ಮಾರ್ಗಗಳನ್ನೇ ಆಶ್ರಯಿಸಿ ಶಿವಸ್ವರೂಪನಾದ ನಿನ್ನನ್ನೇ ಅಚಲವಾಗಿ ಉಪಾಸನೆ ಮಾಡುವರು. ಯಾರು ಕೆಲವರು ಭೇದಬುದ್ಧಿಯಿಂದ ದೇವತಾಂತರ ಭಕ್ತರಾಗಿದ್ದರೂ ಅವರೆಲ್ಲರೂ ಸರ್ವದೇವತಾಮಯನೂ ಜಗದೀಶ್ವರನೂ ಆದ ನಿನ್ನನ್ನೇ ಆರಾಧಿಸುವರು' ಎಂದಿರುವುದನ್ನು ಶ್ಲೋಕ ೭ರ ವಿವರಗಳಿಗೂ ಸೇರಿದಂತೆ ಪ್ರ. ಭಾ. ಕೀ.೫೭ . ಸು. ೯ರಲ್ಲಿ

ನೀನೇಕರೂಪ ಬಹುರೂಪ ತಿಳಿದು ನಾನಾ ಪ್ರಕಾರದಿ ಭಜಿಪ
ಜ್ಞಾನಿಗಳು ಭೇದಾಭೇದದಲಿ ಅರ್ಚಿಪರು ನಾನಾಚಾರ ಮಾರ್ಗದಲಿ

ಎಂದು ಸಂಗ್ರಹಿಸಿದ್ದಾರೆ. ಸು. ೧೦ ಮತ್ತು ಸು. ೧೧ರ ಮೊದಲ ಸಾಲಿನ ವಿವರ ಮೂಲದಲ್ಲಿಲ್ಲ. ಶ್ಲೋಕ ೧೦ರಲ್ಲಿ ನದಿಗಳೆಲ್ಲವೂ ಕೊನೆಗೆ ಸಮುದ್ರವನ್ನೇ ಹೋಗಿ ಸೇರುವಂತೆ

ಸಕಲ ವಿಧವಾದ ಜ್ಞಾನೋಪಾಸನಾ ಮಾರ್ಗಗಳೂ ಕೊನೆಗೆ ನಿನ್ನನ್ನೇ ತಲುಪುತ್ತವೆ–ಎಂದಿದ್ದರೆ, ಇಲ್ಲಿ ನು. ೧೧, ೧೨ರಲ್ಲಿ 'ಜ್ಞಾನಿಗಳು ಸುರ ಋಷಿ ಪಿತೃಗಳ ತರ್ಪಣವನ್ನು ನಿನಗೆ ಅರ್ಪಿಸುವರು. ನಿನ್ನವಿನಾ ಅರ್ಚನೆ ಅವಿಧಿ ಎನ್ನುತ್ತಾರೆ. ದೇವತೆಗಳು ನಿನ್ನ ಸೇವಕರು, ಭಯಾನ್ವಿತರು'.ಎಂದು ಒಪಲಾಗಿದೆ. ಶ್ಲೋಕ ೧೧–೧೨ರ ವಿವರ ನು. ೧೩, ೧೪ರಲ್ಲಿದೆ. ಶ್ಲೋಕ ೧೩, ೧೪ರಲ್ಲಿರುವ ಭಗವಂತನ ವಿರಾಡ್ರೂಪದ ವರ್ಣನೆ ನು. ೧೫–೧೮ರಲ್ಲಿ ಬಂದಿದೆಯಾದರೂ ಹೇಳಿರುವ ಕ್ರಮದಲ್ಲಿ ವ್ಯತ್ಯಾಸವಿದೆ. ಮೂಲದಲ್ಲಿ 'ಅಗ್ನಿಯು ನಿನ್ನ ಮುಖ, ಭೂಮಿಯು ನಿನ್ನ ಪಾದ, ಸೂರ್ಯನು ನಿನ್ನ ಕಣ್ಣು'–ಹೀಗೆ ಬಂದಿರುವುದನ್ನು 'ನೀನಗ್ನಿ ಮುಖದಿಂದ ಪಡೆದೆ, ನೀ ಪೃಥ್ವಿಯನ್ನು ಅಂಘ್ರಿಯಿಂದ ಪಡೆದೆ, ನೀನಿನನ ನೇತ್ರದಿಂ ಪೆತ್ತೆ' ಇತ್ಯಾದಿಯಾಗಿ ಹೇಳುತ್ತ ಸಾಗಿದ್ದಾರೆ.

ಶ್ಲೋಕ ೧೫, ೧೬ರ ಭಾವ ನು. ೧೯–೨೩ರಲ್ಲಿ ವಿಸ್ತರಿಸಿ ಬಂದಿದೆ. ನು. ೨೩ರ ಮೊದಲ ಸಾಲಿನ ವಿವರ ಮೂಲದಲ್ಲಿಲ್ಲದ್ದು. ಆದರೆ ಆ ಸನ್ನಿವೇಶದಲ್ಲಿ ಹೊರತಾಗಿ ನಿಲ್ಲುವ ಅಂಶವಲ್ಲ. ಶ್ಲೋಕ ೧೭–೨೨ರಲ್ಲಿರುವ ದಶಾವತಾರಗಳ ಸ್ತುತಿ ನು. ೨೪–೨೯ರಲ್ಲಿ ಹೆಚ್ಚಿನ ವ್ಯತ್ಯಾಸಗಳಿಲ್ಲದೆ ಬಂದಿದೆ. ಶ್ಲೋಕ ೨೩–೨೯. ಭವಾಬ್ಧಿಯಿಂದ ತನ್ನನ್ನು ದಾಟಿಸು ಎಂದು ಅಕ್ರೂರನು ಪ್ರಾರ್ಥಿಸುವ ಈ ಭಾಗ ನು. ೩೦–೪೩ರಲ್ಲಿ ವಿಸ್ತರಿಸಿದೆ. ಇದೂ ಕೂಡ ಮೂಲವನ್ನೇ ಅನುಸರಿಸಿ ಬಂದಿರುವ ವಿಸ್ತರಣೆ ಎನ್ನಬಹುದು. ಉದಾ.ಗೆ ಶ್ಲೋಕ ೨೭ರ ಸಾರಾಂಶವನ್ನು ನು. ೩೫ರಲ್ಲಿ ಕೊಟ್ಟನಂತರ, ನು. ೩೬, ೩೭ ಇದೇ ಭಾವದ ವಿಸ್ತರಣೆಯಾಗಿ ಬಂದಿರುವುದನ್ನು ಗಮನಿಸಬಹುದು.

ಅಧ್ಯಾಯ ೪೧, ಶ್ಲೋಕ ೧–೧೮ರಲ್ಲಿ ಬರುವ ಕೃಷ್ಣ ಅಕ್ರೂರರ ಸಂಭಾಷಣೆ, ಅವರು ಮಥುರೆಗೆ ಬಂದನಂತರ ಅಕ್ರೂರ ಕೃಷ್ಣನನ್ನು ತನ್ನ ಮನೆಗೆ ಆಹ್ವಾನಿಸುವುದು, ಕೃಷ್ಣ ಕಂಸನನ್ನು ಕೊಂದನಂತರ ಬರುವೆನೆಂದು ಹೇಳಿ ಅವನನ್ನು ಕಳಿಸಿ ಮಥುರಾ ಪಟ್ಟಣವನ್ನು ಗೊಲ್ಲರೊಡನೆ ನೋಡಲು ಹೊರಡುವುದು–ಈ ವಿಷಯಗಳು ಕೀ. ೫೮. ನು. ೧–೨೫ರಲ್ಲಿ ಬಂದಿವೆ.

ಪಲ್ಲವಿಯಲ್ಲಿ ಭಕ್ತರ ಬಗ್ಗೆ ದಾಸರ ಅಭಿಪ್ರಾಯ ಒಂದು ಸಾಮಾನ್ಯಾಭಿಪ್ರಾಯದ ರೂಪದಲ್ಲಿ ಬಂದಿದೆ. ನು.೧ರಲ್ಲಿ ಶ್ಲೋಕ ೧ರ ವಿಚಾರವೇ ಬಂದಿದೆಯಾದರೂ ಮೂಲದ'ವೇಷಧಾರಿ ನಟ'ನ ಉಪಮೆಯನ್ನು ಕೈಬಿಡಲಾಗಿದೆ.ನು.೩ರ ವಿವರ ಮೂಲದಲ್ಲಿಲ್ಲ. ಶ್ಲೋಕ ೩–೫ರ ಭಾಗದಲ್ಲಿ ನು. ೪–೭ಬಂದಿದೆಯಾದರೂ ಇಲ್ಲಿಯ ಅಕ್ರೂರನ ಮಾತುಗಳಲ್ಲಿ ವ್ಯತ್ಯಾಸಗಳಿವೆ. ಶ್ಲೋಕ ೭ರಲ್ಲಿ ಬಲರಾಮ ಕೃಷ್ಣರು ಮಥುರೆಗೆ ಪ್ರಯಾಣ ಮಾಡುವಾಗ ದಾರಿಯುದ್ದಕ್ಕೂ ಬಂದು ನೆರೆದಿದ್ದ ನೆರೆಹೊರೆಯ ಹಳ್ಳಿಯ ಜನರು ಬಲರಾಮಕೃಷ್ಣರನ್ನು ನೋಡಿ ಸಂತೋಷಗೊಂಡು, ಅವರೆಷ್ಟು ದೂರ ಹೋದರೂ ಅವರಿಂದ ಕಣ್ಣು ಕೀಳಲಾರದಾದರು ಎಂದಿದ್ದರೆ, ಪ್ರ.ಭಾ.ದ ಕೀ. ೫೮, ನು. ೮ರ ಉತ್ತರಾರ್ಧದಿಂದ ನು. ೯ರ ಪೂರ್ವಾರ್ಧದಲ್ಲಿ,

ಆ ಗುಣನಿಧಿ ವಸುದೇವನ ತನಯನ ಆಗಮನವನು ಕಂಡೊಡನೆ ೮

ಆಗತರು ಗ್ರಾಮಗ್ರಾಮದವರು ಬಂದು ಬಾಗಿ ತಲೆಯ ಸ್ತೋತ್ರಮಾಡಿ ೯

ಎಂದು ಬರೆಲಾಗಿರುವಲ್ಲಿ ದಾಸರ ಮನೋಧರ್ಮದ ಪ್ರಕಟಣೆಯಾಗಿರುವುದನ್ನು ನೋಡಬಹುದು.

ಶ್ಲೋಕ ೮–೧೮ರ ವಿವರಗಳು ನು. ೯ರ ಉತ್ತರಾರ್ಧದಿಂದ ನು. ೨೦ರಲ್ಲಿ ಹೆಚ್ಚಿನ ವ್ಯತ್ಯಾಸಗಳಿಲ್ಲದೆ ಬಂದಿವೆ. ನು.೧೨ರ ಉತ್ತರಾರ್ಧದ ಮಾತುಗಳು ಮೂಲದಲ್ಲಿಲ್ಲ. ಹೀಗೆಯೇ ನು. ೧೭ರ ಅಕ್ರೂರನ ಮಾತುಗಳೂ ಶ್ಲೋಕ ೧೨ರ 'ನಮ್ಮನ್ನು ಸನಾಥರನ್ನಾಗಿ ಮಾಡು' ಎಂಬುದರ ವಿಸ್ತರಣೆಯಾಗಿವೆ. ಮೂಲದಲ್ಲಿಲ್ಲದ ಆದರೆ ಸಂದರ್ಭಕ್ಕೆ ಹೊಂದುವಂಥ ಮಾತುಗಳನ್ನು ಇಂಥಲ್ಲೆಲ್ಲ ಜೋಡಿಸಿರುವುದು ಕಂಡುಬರುತ್ತದೆ. ನು. ೨೨ರವಿಷಯ ಮುಂದಿನ ಕೀ.ಯಲ್ಲಿ ಪುನರುಕ್ತಗೊಳ್ಳುತ್ತದೆ. ನು. ೨೩ ಸಂದರ್ಭಕ್ಕೆ ಹೊಂದುವಂತಿರುವುದಾದರೂ ಮೂಲದಲ್ಲಿಲ್ಲ. ನು. ೨೪, ೨೫ ನೇರವಾಗಿ ದಾಸರ ನುಡಿಗಳು, ಕೀರ್ತನೆಯ ಕೊನೆಯ ಫಲಶ್ರುತಿಯಾಗಿ ಬಂದಿವೆ. ನು. ೨೪ರಲ್ಲಿ ದಾಸರು ತಮ್ಮ ಈ ಭಾಗವತ ಕೃತಿಯನ್ನು 'ಶೋಭಿತ ಪ್ರಾಕೃತ ಪದ' ಎಂದು ಕರೆದುಕೊಂಡಿದ್ದಾರೆ.

ಶ್ಲೋಕ ೧೯–೩೦ರಲ್ಲಿ ಬಲರಾಮ, ಕೃಷ್ಣ ಹಾಗೂ ಗೋಪಾಲಕರು ಮಧುರಾ ನಗರಿಯಲ್ಲಿ ಸುತ್ತಾಡಿದುದರ ವರ್ಣನೆ ಇದೆ. ಈ ಭಾಗ ಕೀ. ೫೯, ನು. ೧-೧೪ರಲ್ಲಿ ಬಂದಿದೆ. ವಿವರಗಳಲ್ಲಿ ಕೆಲವು ಆಚೀಚೆ ಬಂದಿದ್ದರೂ ಒಟ್ಟಿನಲ್ಲಿ ಮೂಲವನ್ನೇ ಅನುಸರಿಸಿರುವುದು ಕಾಣಿಸುತ್ತದೆ. ಶ್ಲೋಕ ೩೦ರ ವಿಚಾರ ನು. ೧೫ರ ಮೊದಲ ೨ ಸಾಲುಗಳಲ್ಲಿ ಬಂದಿದೆಯಾದರೂ, ಹಾಗೆ ಮಾತನಾಡಿಕೊಳ್ಳುತ್ತಿದ್ದವರು 'ಪಟ್ಟಣಿಗರು' ಎನ್ನುವುದು ಇಲ್ಲಿ ಸ್ಪಷ್ಟವಾಗುವುದಿಲ್ಲ.

ಶ್ಲೋಕ ೩೧-೩೯ ರಲ್ಲಿ ರಜಕನ ವಧೆಯನ್ನು ವಿವರಿಸಲಾಗಿದೆ. ಇದು ಕೀ. ೫೯, ನು. ೧೫ರ ಕೊನೆಯ ಸಾಲಿನಿಂದ ನು.೧೯ರವರೆಗೆ ಹೆಚ್ಚಿನ ವ್ಯತ್ಯಾಸಗಳಿಲ್ಲದೆ ಬಂದಿದೆ. ಶ್ಲೋಕ ೪೦-೪೨ರಲ್ಲಿ ರಾಮಕೃಷ್ಣರನ್ನು ಅಲಂಕರಿಸಿದ ನೇಕಾರನನ್ನು ಅನುಗ್ರಹಿಸಿದ ವಿವರಗಳಿವೆ. ಈ ಭಾಗ ಪ್ರ.ಭಾ.ದ ಕೀ. ೫೯, ನು. ೨೦, ೨೧ರಲ್ಲಿ ಸಂಗ್ರಹಗೊಂಡಿದೆ. ಶ್ಲೋಕ ೪೩-೫೨ರಲ್ಲಿ ಹೂಗಾರ ಸುದಾಮನಿಂದ ಪೂಜಿತನಾದ ಕೃಷ್ಣ ಆತನನ್ನು ಅನುಗ್ರಹಿಸಿದ ಪ್ರಸಂಗ ವರ್ಣಿತವಾಗಿದೆ. ಈ ಭಾಗ ಕೀ. ೫೯, ನು. ೨೨-೨೯ ರಲ್ಲಿ ಕೆಲವು ವ್ಯತ್ಯಾಸಗಳೊಂದಿಗೆ ಬಂದಿದೆ.

ನು. ೨೫ ರಲ್ಲಿಯ 'ಕರ್ಮಾನುಸಾರದ ಫಲವು, ತಮ ತಮ್ಮ ಯೋಗ್ಯತೆಯಂತೆ ಕರ್ಮವ ಮಾಡ್ವುಂಬರು' ಎಂಬ ದ್ವೈತ ತತ್ವಗಳು ಮೂಲದ ಸುದಾಮನ ಮಾತುಗಳಲ್ಲಿಲ್ಲ.

ಶ್ಲೋಕ ೪೮ ರಲ್ಲಿ ಸುದಾಮ 'ನಾನು ನಿಮಗೆ ಯಾವ ಸೇವೆಯನ್ನು ಮಾಡಲಿ ? ಸೇವಕನಾದ ನನಗೆ ಅಪ್ಪಣೆ ಮಾಡಬೇಕು' ಎಂದಿರುವುದನ್ನು ಕೀ. ೫೯, ನು. ೨೬ರಲ್ಲಿ

ನಿಮ್ಮ ಭೃತ್ಯ ಭೃತ್ಯ ಭೃತ್ಯರ ಪರಿಚಾರಕ ನಾ ಸನ್ಮಾರ್ಗದಿ ಸಿಕ್ಕಿಸೆನ್ನನು
ನಿಮ್ಮ ವೈಷ್ಣವ ಜನರ ಶುದ್ಧೋತ್ತಮರ ಸೇವೆಯಲೆನ್ನಿಟ್ಟು
ದುರ್ಮತಿಯ ಬಿಡಿಸಯ್ಯ ಶ್ರೀ ರಮ್ಮೆಯಳ ರಮಣನೆ

ಎಂದು ವಿಸ್ತರಿಸಲಾಗಿದೆ.

ಶ್ಲೋಕ ೫೦ರಲ್ಲಿ ರಾಮಕೃಷ್ಣರು ಅವನಿಗೆ ವರಗಳನ್ನು ನೀಡಿದರು ಎಂಬ ವಿಚಾರವಿದೆ. ಹಾಗೆಯೇ ಶ್ಲೋಕ ೫೧ರಲ್ಲಿ ಸುದಾಮ ಭಗವಂತನಲ್ಲಿ ನಿಶ್ಚಲ ಭಕ್ತಿ ಪ್ರೇಮಂಗಳನ್ನೂ, ಸರ್ವಭೂತಗಳಲ್ಲಿ ದಯೆಯನ್ನೂ ವರವಾಗಿ ಕೊಡುವಂತೆ ಕೇಳಿಕೊಳ್ಳುತ್ತಾನೆ. ಶ್ಲೋಕ ೫೨ರಲ್ಲಿ ಕೃಷ್ಣ ಅವನಿಗೆ .ವಂಶಪಾರಂಪರ್ಯವಾಗಿ ಬಲ, ಆಯುಷ್ಯ, ಕೀರ್ತಿ, ಕಾಂತಿ ಎಂಬ ವರಗಳನ್ನು ಕೊಟ್ಟು ಬಲರಾಮನೊಂದಿಗೆ ಅಲ್ಲಿಂದ ತೆರಳುತ್ತಾನೆ. ಶ್ಲೋಕ ೫೦-೫೨ರ ಈ ವಿವರಗಳಿಗೆ ಬದಲಾಗಿ ಕೀ. ೫೯ರ ನು. ೨೮ರಲ್ಲಿ 'ಶ್ರೀ ಮದ್ರಮಾರಮಣ ಮುಕ್ತಿಧಾಮದಲ್ಲಿ ಅವನ ತನ್ನ ನಾಮಕೀರ್ತನ ಮಾಡಿದ' ಎಂದಷ್ಟೇ ಬಂದಿದೆ. ನು. ೨೯ ಹರಿಭಕ್ತರ ಸ್ತುತಿಯಾಗಿದ್ದು. ದಾಸರ ಸ್ವಂತ ಸೃಷ್ಟಿಯಾಗಿದೆ. ಸುದಾಮನ ಉದಾ.ಯ ಮೇಲೆ ದಾಸರ ಅಭಿಪ್ರಾಯದ ಮಂಡನೆಯಾಗಿ ಬಂದಿದೆ.

ಅ. ೪೨, ಶ್ಲೋಕ ೧-೩೮ರಲ್ಲಿ ಕುಬ್ಜೆಗೆ ಅನುಗ್ರಹ ಹಾಗೂ ಶಿವಧನುರ್ಭಂಗಗಳು ವರ್ಣಿತವಾಗಿವೆ. ಶ್ಲೋಕ ೧-೧೪ರಲ್ಲಿ ಕಂಸನ ದಾಸಿಯಾದ ಕುಬ್ಜೆ ಬಲರಾಮ ಕೃಷ್ಣರಿಗೆ ಗಂಧವನ್ನು ಕೊಟ್ಟು ಅವರ ಅನುಗ್ರಹಕ್ಕೆ ಪಾತ್ರವಾದ ಪ್ರಸಂಗ ವರ್ಣಿತವಾಗಿದೆ. ಈ ಭಾಗ ಪ್ರ.ಭಾ.ದ ಕೀ. ೬೦, ನು. ೧-೧೫ರಲ್ಲಿ ಕೆಲವು ವ್ಯತ್ಯಾಸಗಳೊಡನೆ ಬಂದಿದೆ.

ಪಲ್ಲವಿಯಲ್ಲೇ ಕುಬ್ಜೆಯ ಭಾಗ್ಯ ಯೋಗ್ಯತೆಗಳ ಪ್ರಸ್ತಾಪ ಬಂದಿದೆ. ಶ್ಲೋಕ ೧ರಲ್ಲಿ ರಾಜಮಾರ್ಗದಲ್ಲಿ ಹೋಗುತ್ತಿದ್ದ ಕೃಷ್ಣ, ಗಂಧದ ಬಟ್ಟಲನ್ನು ಕೈಯಲ್ಲಿ ಹಿಡಿದುಕೊಂಡು ಹೋಗುತ್ತಿದ್ದ ಕುಬ್ಜೆಯನ್ನು ನೋಡಿ ಮಾತನಾಡಿಸಿದ ಎಂದಿದ್ದರೆ, ಇಲ್ಲಿ ನು. ೧ರಲ್ಲಿ 'ರಾಜಮಾರ್ಗದಿ ನಿಂತ ತ್ರಿವಕ್ರೆ'ಯನ್ನು ಮಾತನಾಡಿಸಿದ ಎಂದಿದೆ. ಅಲ್ಲದೆ ಮೂಲದಲ್ಲಿ ಬರುವ ಕುಬ್ಜೆಯ ಆಕಾರದ ವರ್ಣನೆ ಇಲ್ಲಿ ಲುಪ್ತವಾಗಿದೆ. ಶ್ಲೋಕ ೨ ರ ಸಾರಾಂಶ ನು. ೨ರಲ್ಲಿದೆಯಾದರೂ 'ನಿನ್ನ ಪತಿ ಯಾರು' ಎಂಬ ಮಾತು ಪ್ರ.ಭಾ.ದಲ್ಲಿ ಹೆಚ್ಚಾಗಿ ಬಂದಿದೆ. ಶ್ಲೋಕ ೩ರಲ್ಲಿ 'ಕಂಸನಿಗಾಗಿ ತಯಾರಿಸಿದ ಈ ಗಂಧವನ್ನು ಪೂಸಿಕೊಳ್ಳಲು ನಿಮ್ಮಿಬ್ಬರನ್ನು ಬಿಟ್ಟು ಬೇರೆ ಯಾರು ಅರ್ಹರು ' ಎಂಬರ್ಥದಲ್ಲಿ ಕುಬ್ಜೆಯ ಮಾತುಗಳಿದ್ದರೆ, ಕೀ. ೬೦, ನು. ೩ರಲ್ಲಿ 'ತವಸಮ್ಮತ ದಾಸಿನಾ....ಕಂದರ್ಪ ನಿನ್ನಿಂದಾರು ಪ್ರಿಯರೆಂದಳು' ಎಂದು ಬದಲಾಗಿದೆ.

ಶ್ಲೋಕ ೪-೬ರ ಸಾರಾಂಶ ನು ೪, ೫ರಲ್ಲಿ ಬಂದಿದೆ. ಶ್ಲೋಕ ೭ರಲ್ಲಿ 'ಗೂನಿಯಾದ ಆಕೆಯನ್ನು ಸಮಶರೀರೆಯಾಗಿ ಮಾಡಲು ಮನಸ್ಸು ಮಾಡಿದನು' ಎಂದಿರುವುದನ್ನು, ನು. ೫ರಲ್ಲಿ 'ಕುಬ್ಜೆಯ ಮೂರು ಡೊಂಕ ತಿದ್ದಿದನು ಮುರಾರ್ದ ಮುಕುಂದ' ಎಂದು ಬದಲಿಸಲಾಗಿದೆ. ನು. ೬,೭ರಲ್ಲಿ ಭಗವತ್ಕೃಪೆಯ ಬಗೆಗೆ ದಾಸರ ಅಭಿಪ್ರಾಯ

ಗಳಿವೆ. ಶ್ಲೋಕ ೭, ೮ರ ಸಾರ ಸು. ೮, ೯ರಲ್ಲಿ ಬಂದಿದೆಯಾದರೂ ಅಲ್ಲಿ ಆ ಯುವತಿ ಕೃಷ್ಣಸ್ಪರ್ಶದಿಂದ ಸುಂದರಳಾಗಿ ಕಂಡಳೆ. ಇಲ್ಲಿ 'ಶಕ್ರಾಂಗನೆಯಂತೆ ತೋರ್ದಳಾಗೆ' ಎಂಬ ಉಪಮೆ ಬಂದಿದೆ. ಶ್ಲೋಕ ೯-೧೧ರ ಭಾಗ ಸು. ೧೦-೧೨ರಲ್ಲಿ ಹೆಚ್ಚು ವ್ಯತ್ಯಾಸವಿಲ್ಲದೆ ಬಂದಿದೆ. ಶ್ಲೋಕ ೧೨-೧೪ರ ವಿವರಗಳು ಸು. ೧೩-೧೫ರಲ್ಲಿ ವ್ಯತ್ಯಾಸಗೊಂಡಿವೆ.

ಕೀ. ೬೧ರ ಪಲ್ಲವಿ ಮುಂದಿನ ಶಿವಧನುರ್ಭಂಗದ ಘಟನೆಯನ್ನು ಕುರಿತ ದಾಸರ ಅಭಿಪ್ರಾಯವನ್ನು ಸೂಚಿಸುವಂತಿದೆ. ಶ್ಲೋಕ ೧೫-೧೭ ರಲ್ಲಿ ಶಿವಧನುವಿದ್ದಲ್ಲಿಗೆ ರಾಮ ಕೃಷ್ಣರು ಹೋಗಿ ಧನುರ್ಭಂಗ ಮಾಡುವ ವಿಚಾರ ವರ್ಣಿತವಾಗಿದೆ. ಮುರಿದ ಧನುಸ್ಸಿನ ಧ್ವನಿಯನ್ನು ಕೇಳಿ ಕಂಸ ನಡುಗುತ್ತಾನೆ. ಈ ಭಾಗ ಕೀ. ೬೧ರ ಸು. ೧-೫ರಲ್ಲಿ ಕೆಲವು ವ್ಯತ್ಯಾಸಗಳೊಂದಿಗೆ ಬಂದಿದೆ. ಇಲ್ಲಿ ದಾಸರು ಸು. ೨ರ ' ನೊರಜುಗಳಿಗೆ ಅಂಜಿ ಉರಿ ಹಿಂದಕಾಗ್ವದೆ', ಸು. ೩ರ 'ವಿಶ್ವೈಕ ಶಾಸ್ತಾರ', ಸು. ೪ರ 'ಗರ್ಜಿಸಿತು ಘಟ್ ಘಟ್ ಸಿಡಿಲುಗಳವೋಲು ನಿರ್ಜೀವರಂತೆ ಜನರ ಕಾಂತಿ ಹೋಗೆ' ಇತ್ಯಾದಿ ಮೂಲದಲ್ಲಿಲ್ಲದ ಉಪಮೆ ವಿಶೇಷಣಗಳನ್ನು ಬಳಸುವ ಮೂಲಕ ಆ ಘಟನೆಗೆ ಇನ್ನಷ್ಟು ಜೀವಂತಿಕೆಯನ್ನು ತರಲು ಯತ್ನಿಸಿದ್ದಾರೆ.

ಶ್ಲೋಕ ೧೮-೨೬ರ ವಿವರಗಳು ಸು. ೬-೧೨ರಲ್ಲಿ ಬಂದಿವೆ. ಇಲ್ಲಿಯೂ ಸು. ೭ ರಲ್ಲಿ ಬರುವ 'ಒರಳಿಗಿಕ್ಕಿದ ಧಾನ್ಯದಂತೆ... ಮಾಡಿದರಾಕ್ಷಣ' ಎಂಬ ಉಪಮೆ ಮೂಲದಲ್ಲಿಲ್ಲ. ಶ್ಲೋಕ ೨೨ರ ವಿವರ ಸು. ೮-೧೦ರಲ್ಲಿ ವಿಸ್ತರಿಸಿದೆ. ಹಾಗೆಯೇ ಶ್ಲೋಕ ೨೪ರ ವಿಚಾರ ಪ್ರ.ಭಾ.ದಲ್ಲಿ ಲೋಪಗೊಂಡಿದೆ. ಸು. ೧೩ರಲ್ಲಿ ಹೆಚ್ಚಿನ ಕೀ.ಗಳ ಅಂತ್ಯದಲ್ಲಿಯಂತೆ ಕೃಷ್ಣಸ್ತುತಿ ಇದೆ.

ಶ್ಲೋಕ ೨೬-೩೮ ರಲ್ಲಿ ಕಂಸ ಉತ್ಪಾತಗಳನ್ನು ಕಂಡು ಭಯಗೊಂಡು ಆ ರಾತ್ರಿಯನ್ನು ಕಳೆದದ್ದು ಮಾರನೆಯ ದಿನ ಮಲ್ಲಯುದ್ಧದ ಸಿದ್ಧತೆಗಳು ನಡೆದು ಎಲ್ಲರೂ ಆ ಸ್ಥಳದಲ್ಲಿ ಬಂದು ಸೇರುವುದರ ವಿವರಗಳಿವೆ. ಈ ಭಾಗ ಕೀ. ೬೨, ಸು.೧-೧೦ರಲ್ಲಿ ಹೆಚ್ಚು ವ್ಯತ್ಯಾಸಗಳಿಲ್ಲದೆ ಬಂದಿದೆಯಾದರೂ,. ಶ್ಲೋಕ ೩೫ರ 'ಹೃದಯೇನ ವಿದೂಯತಾ' ಎನ್ನುವುದು, ಇಲ್ಲಿ—

ಹೋದ ತೇಜಾಗ್ನಿಯಂತಿದ್ದನು ರಾಜೇಂದ್ರ ಶ್ರೀಧರನ ದ್ರೋಹದಿ
ಕೈದು ತಗಲಿದಂದದೆದೆದಿಗಿಲಿನಲಿ ನಾದಿದ ದುಶ್ಚಿತ್ತದಿ (ಸು. ೮)

ಎಂದು ಬದಲಾಗಿ ಖಿನ್ನ ಕಂಸನ ಚಿತ್ರವನ್ನು ಇನ್ನಷ್ಟು ಸಮರ್ಥವಾಗಿ ಕೊಡುತ್ತದೆ. 'ಶ್ರೀಧರನ ದ್ರೋಹದಿ' ಎಂದು ಹೇಳುವ ದಾಸರ ದೃಷ್ಟಿಯೂ ಇಲ್ಲಿ ಸ್ಪಷ್ಟವಾಗಿದೆ. ಶ್ಲೋಕ ೩೬ ರಲ್ಲಿ ಬರುವ 'ವಾದ್ಯಮಾನೇಷು ತೂರ್ಯೇಷು ಮಲ್ಲತಾಲೋತ್ತರೇಷು', ಇಲ್ಲಿ ' ಸಂಗೀತ ತುತ್ತೂರಿ ತಾಳ ಜಾಗಟೆ ಬಿರುದಂಗಳ ಚಾಣೂರ....' ಎಂದು ಬದಲಾಗಿದೆ. ಸು. ೧೧-೧೩ ರಲ್ಲಿರುವ ಕೃಷ್ಣಸ್ತುತಿ ಮೂಲದಲ್ಲಿಲ್ಲ. ಈ ಕೃಷ್ಣಚರಿತೆಯ ಬಗ್ಗೆ ದಾಸರಿಗಿರುವ ಹೆಚ್ಚಿನ ಪ್ರೀತಿ ಈ ೧೩ನೆಯ ನುಡಿಯಲ್ಲಿಯೂ ವ್ಯಕ್ತವಾಗಿದೆ.

ನಿಮ್ಮ ಭೃತ್ಯ ಭೃತ್ಯ ಭೃತ್ಯರ ಪರಿಚಾರಕ ನಾ ಸನ್ಮಾರ್ಗದಿ ಸಿಕ್ಕಿಸೆನ್ನನು
ನಿಮ್ಮ ವೈಷ್ಣವ ಜನರ ಶುದ್ಧೋತ್ತಮರ ಸೇವೆಯಲೆನ್ನಿಟ್ಟು
ದುರ್ಮತಿಯ ಬಿಡಿಸಯ್ಯ ಶ್ರೀ ರಮ್ಮೆಯಳ ರಮಣನೆ

ಎಂದು ವಿಸ್ತರಿಸಲಾಗಿದೆ.

ಶ್ಲೋಕ ೫೦ರಲ್ಲಿ ರಾಮಕೃಷ್ಣರು ಅವನಿಗೆ ವರಗಳನ್ನು ನೀಡಿದರು ಎಂಬ ವಿಚಾರವಿದೆ. ಹಾಗೆಯೇ ಶ್ಲೋಕ ೫೧ರಲ್ಲಿ ಸುದಾಮ ಭಗವಂತನಲ್ಲಿ ನಿಶ್ಚಲ ಭಕ್ತಿ ಪ್ರೇಮಂಗಳನ್ನೂ, ಸರ್ವಭೂತಗಳಲ್ಲಿ ದಯೆಯನ್ನೂ ವರವಾಗಿ ಕೊಡುವಂತೆ ಕೇಳಿಕೊಳ್ಳುತ್ತಾನೆ. ಶ್ಲೋಕ ೫೨ರಲ್ಲಿ ಕೃಷ್ಣ ಅವನಿಗೆ ವಂಶಪಾರಂಪರ್ಯವಾಗಿ ಬಲ, ಆಯುಷ್ಯ, ಕೀರ್ತಿ, ಕಾಂತಿ ಎಂಬ ವರಗಳನ್ನು ಕೊಟ್ಟು ಬಲರಾಮನೊಂದಿಗೆ ಅಲ್ಲಿಂದ ತೆರಳುತ್ತಾನೆ. ಶ್ಲೋಕ ೫೦-೫೨ರ ಈ ವಿವರಗಳಿಗೆ ಬದಲಾಗಿ ಕೀ. ೫೯ರ ನು. ೨೮ರಲ್ಲಿ 'ಶ್ರೀ ಪಾದ್ರ ಮಾರವಣ ಮುಕ್ತಿಧಾಮದಲ್ಲಿ ಅವನ ತನ್ನ ನಾಮಕರ್ತನ ಮಾಡಿದ' ಎಂದಷ್ಟೇ ಬಂದಿದೆ. ನು. ೨೯ ಹರಿಭಕ್ತರ ಸ್ತುತಿಯಾಗಿದ್ದು. ದಾಸರ ಸ್ವಂತ ಸೃಷ್ಟಿಯಾಗಿದೆ. ಸುದಾಮನ ಉದಾ.ಯ ಮೇಲೆ ದಾಸರ ಅಭಿಪ್ರಾಯದ ಮಂಡನೆಯಾಗಿ ಬಂದಿದೆ.

ಅ. ೪೨, ಶ್ಲೋಕ ೧-೩೮ರಲ್ಲಿ ಕುಬ್ಜೆಗೆ ಅನುಗ್ರಹ ಹಾಗೂ ಶಿವಧನುರ್ಭಂಗಗಳು ವರ್ಣಿತವಾಗಿವೆ. ಶ್ಲೋಕ ೧-೧೩ರಲ್ಲಿ ಕಂಸನ ದಾಸಿಯಾದ ಕುಬ್ಜೆ ಬಲರಾಮ ಕೃಷ್ಣರಿಗೆ ಗಂಧವನ್ನು ಕೊಟ್ಟು ಅವರ ಅನುಗ್ರಹಕ್ಕೆ ಪಾತ್ರವಾದ ಪ್ರಸಂಗ ವರ್ಣಿತವಾಗಿದೆ. ಈ ಭಾಗ ಪ್ರ.ಭಾ.ದ ಕೀ. ೬೦, ನು. ೧-೧೫ರಲ್ಲಿ ಕೆಲವು ವ್ಯತ್ಯಾಸಗಳೊಡನೆ ಬಂದಿದೆ.

ಪಲ್ಲವಿಯಲ್ಲೇ ಕುಬ್ಜೆಯ ಭಾಗ್ಯ ಯೋಗ್ಯತೆಗಳ ಪ್ರಸ್ತಾವ ಬಂದಿದೆ. ಶ್ಲೋಕ ೧ರಲ್ಲಿ ರಾಜಮಾರ್ಗದಲ್ಲಿ ಹೋಗುತ್ತಿದ್ದ ಕೃಷ್ಣ, ಗಂಧದ ಬಟ್ಟಲನ್ನು ಕೈಯಲ್ಲಿ ಹಿಡಿದುಕೊಂಡು ಹೋಗುತ್ತಿದ್ದ ಕುಬ್ಜೆಯನ್ನು ನೋಡಿ ಮಾತನಾಡಿಸಿದ ಎಂದಿದ್ದರೆ, ಇಲ್ಲಿ ನು. ೧ರಲ್ಲಿ 'ರಾಜಮಾರ್ಗದಿ ನಿಂತ ತ್ರಿವಕ್ರೆ'ಯನ್ನು ಮಾತನಾಡಿಸಿದ ಎಂದಿದೆ. ಅಲ್ಲದೆ ಮೂಲದಲ್ಲಿ ಬರುವ ಕುಬ್ಜೆಯ ಆಕಾರದ ವರ್ಣನೆ ಇಲ್ಲಿ ಲುಪ್ತವಾಗಿದೆ. ಶ್ಲೋಕ ೨ ರ ಸಾರಾಂಶ ನು. ೨ರಲ್ಲಿದೆಯಾದರೂ 'ನಿನ್ನ ಪತಿ ಯಾರು' ಎಂಬ ಮಾತು ಪ್ರ.ಭಾ.ದಲ್ಲಿ ಹೆಚ್ಚಾಗಿ ಬಂದಿದೆ. ಶ್ಲೋಕ ೩ರಲ್ಲಿ 'ಕಂಸನಿಗಾಗಿ ತಯಾರಿಸಿದ ಈ ಗಂಧವನ್ನು ಪೂಸಿಕೊಳ್ಳಲು ನಿಮ್ಮಿಬ್ಬರನ್ನು ಬಿಟ್ಟು ಬೇರೆ ಯಾರು ಅರ್ಹರು ' ಎಂಬರ್ಥದಲ್ಲಿ ಕುಬ್ಜೆಯ ಮಾತುಗಳಿದ್ದರೆ, ಕೀ. ೬೦, ನು. ೩ರಲ್ಲಿ 'ತವಸಮ್ಮತ ದಾಸಿನಾ....ಕಂದರ್ಪ ನಿನ್ನಿಂದಾರು ಪ್ರಿಯರೆಂದಳು' ಎಂದು ಬದಲಾಗಿದೆ.

ಶ್ಲೋಕ ೪-೬ರ ಸಾರಾಂಶ ನು. ೪, ೫ರಲ್ಲಿ ಬಂದಿದೆ. ಶ್ಲೋಕ ೬ರಲ್ಲಿ 'ಗೂನಿಯಾದ ಆಕೆಯನ್ನು ಸಮಶರೀರೆಯಾಗಿ ಮಾಡಲು ಮನಸ್ಸು ಮಾಡಿದನು' ಎಂದಿರುವುದನ್ನು, ನು. ೫ರಲ್ಲಿ 'ಕುಬ್ಜೆಯ ಮೂರು ಡೊಂಕ ತಿದ್ದಿದನು ಮುರಾರ್ದ ಮುಕುಂದ' ಎಂದು ಬದಲಿಸಲಾಗಿದೆ. ನು. ೬,೭ರಲ್ಲಿ ಭಗವತ್ಕೃಪೆಯ ಬಗೆಗೆ ದಾಸರ ಅಭಿಪ್ರಾಯ

ಗಳಿವೆ. ಶ್ಲೋಕ ೭, ೮ರ ಸಾರ ನು. ೫, ೯ರಲ್ಲಿ ಬಂದಿದೆಯಾದರೂ ಅಲ್ಲಿ ಆ ಯುವತಿ ಕೃಷ್ಣಸ್ಪರ್ಶದಿಂದ ಸುಂದರಳಾಗಿ ಕಂಡರೆ, ಇಲ್ಲಿ 'ಶಕ್ರಾಂಗನೆಯಂತೆ ತೋರ್ದಳಾಗೆ' ಎಂಬ ಉಪಮೆ ಬಂದಿದೆ. ಶ್ಲೋಕ ೯-೧೧ರ ಭಾಗ ನು. ೧೦-೧೨ರಲ್ಲಿ ಹೆಚ್ಚು ವ್ಯತ್ಯಾಸವಿಲ್ಲದೆ ಬಂದಿದೆ. ಶ್ಲೋಕ ೧೨-೧೪ರ ವಿವರಗಳು ನು. ೧೩-೧೫ರಲ್ಲಿ ವ್ಯತ್ಯಾಸಗೊಂಡಿವೆ.

ಕೀ. ೬೧ರ ಪಲ್ಲವಿ ಮುಂದಿನ ಶಿವಧನುರ್ಭಂಗದ ಘಟನೆಯನ್ನು ಕುರಿತ ದಾಸರ ಅಭಿಪ್ರಾಯವನ್ನು ಸೂಚಿಸುವಂತಿದೆ. ಶ್ಲೋಕ ೧೫-೧೮ ರಲ್ಲಿ ಶಿವಧನುವಿದ್ದಲ್ಲಿಗೆ ರಾಮ ಕೃಷ್ಣರು ಹೋಗಿ ಧನುರ್ಭಂಗ ಮಾಡುವ ವಿಚಾರ ವರ್ಣಿತವಾಗಿದೆ. ಮುರಿದ ಧನುಸ್ಸಿನ ಧ್ವನಿಯನ್ನು ಕೇಳಿ ಕಂಸ ನಡುಗುತ್ತಾನೆ. ಈ ಭಾಗ ಕೀ. ೬೧ರ ನು. ೧-೫ರಲ್ಲಿ ಕೆಲವು ವ್ಯತ್ಯಾಸಗಳೊಂದಿಗೆ ಬಂದಿದೆ. ಇಲ್ಲಿ ದಾಸರು ನು. ೨ರ ' ಸೊರಜುಗಳಿಗೆ ಅಂಜಿ ಉರಿ ಹಿಂದಕಾಗ್ವದೆ', ನು. ೩ರ 'ವಿಶ್ವೈಕ ಶಾಸ್ತ್ರಾರ', ನು. ೪ರ 'ಗರ್ಜಿಸಿತು ಛಟ್ ಛಟ್ ಸಿಡಿಲುಗಳವೋಲು ನಿರ್ಜೀವರಂತೆ ಜನರ ಕಾಂತಿ ಹೋಗೆ' ಇತ್ಯಾದಿ ಮೂಲದಲ್ಲಿಲ್ಲದ ಉಪಮೆ ವಿಶೇಷಣಗಳನ್ನು ಬಳಸುವ ಮೂಲಕ ಆ ಘಟನೆಗೆ ಇನ್ನಷ್ಟು ಜೀವಂತಿಕೆಯನ್ನು ತರಲು ಯತ್ನಿಸಿದ್ದಾರೆ.

ಶ್ಲೋಕ ೧೯-೨೬ರ ವಿವರಗಳು ನು. ೬-೧೨ರಲ್ಲಿ ಬಂದಿವೆ. ಇಲ್ಲಿಯೂ ನು. ೭ ರಲ್ಲಿ ಬರುವ 'ಒರಳಿಗಿಕ್ಕಿದ ಧಾನ್ಯದಂತೆ... ಮಾಡಿದರಾಕ್ಷಣ' ಎಂಬ ಉಪಮೆ ಮೂಲದಲ್ಲಿಲ್ಲ. ಶ್ಲೋಕ ೨೨ರ ವಿವರ ನು. ೮-೧೦ರಲ್ಲಿ ವಿಸ್ತರಿಸಿದೆ. ಹಾಗೆಯೇ ಶ್ಲೋಕ ೨೪ರ ವಿಚಾರ ಪ್ರ.ಭಾ.ದಲ್ಲಿ ಲೋಪಗೊಂಡಿದೆ. ನು. ೧೩ರಲ್ಲಿ ಹೆಚ್ಚಿನ ಕೀ.ಗಳ ಅಂತ್ಯದಲ್ಲಿಯಂತೆ ಕೃಷ್ಣಸ್ತುತಿ ಇದೆ.

ಶ್ಲೋಕ ೨೭-೩೮ ರಲ್ಲಿ ಕಂಸ ಉತ್ಪಾತಗಳನ್ನು ಕಂಡು ಭಯಗೊಂಡು ಆ ರಾತ್ರಿಯನ್ನು ಕಳೆದದ್ದು, ಮಾರನೆಯ ದಿನ ಮಲ್ಲಯುದ್ಧದ ಸಿದ್ಧತೆಗಳು ನಡೆದು ಎಲ್ಲರೂ ಆ ಸ್ಥಳದಲ್ಲಿ ಬಂದು ಸೇರುವುದರ ವಿವರಗಳಿವೆ. ಈ ಭಾಗ ಕೀ. ೬೨, ನು.೧-೧೦ರಲ್ಲಿ ಹೆಚ್ಚು ವ್ಯತ್ಯಾಸಗಳಿಲ್ಲದೆ ಬಂದಿದೆಯಾದರೂ, ಶ್ಲೋಕ ೩೫ರ 'ಹೃದಯೇನ ವಿದೂಯತಾ ಎನ್ನುವುದು. ಇಲ್ಲಿ—

ಹೋದ ತೇಜಾಗ್ನಿಯಂತಿದ್ದನು ರಾಜೇಂದ್ರ, ಶ್ರೀಧರನ ದ್ರೋಹದಿ
ಕೈದು ತಗಲಿದಂದದೆದೆದಿಗಿಲಿನಲಿ ನಾದಿದ ದುಶ್ಚಿತ್ತದಿ (ನು. ೮)

ಎಂದು ಬದಲಾಗಿ ಖಿನ್ನ ಕಂಸನ ಚಿತ್ರವನ್ನು ಇನ್ನಷ್ಟು ಸಮರ್ಥವಾಗಿ ಕೊಡುತ್ತದೆ. 'ಶ್ರೀಧರನ ದ್ರೋಹದಿ' ಎಂದು ಹೇಳುವ ದಾಸರ ದೃಷ್ಟಿಯೂ ಇಲ್ಲಿ ಸ್ಪಷ್ಟವಾಗಿದೆ. ಶ್ಲೋಕ ೩೬ ರಲ್ಲಿ ಬರುವ 'ವಾದ್ಯಮಾನೇಷು ತೂರ್ಯೇಷು ಮಲ್ಲತಾಲೋತ್ತರೇಷು', ಇಲ್ಲಿ ' ಸಂಗೀತ ತುತ್ತೂರಿ ತಾಳ ಜಾಗಟೆ ಬಿರುದಂಗಳ ಚಾಣೂರ....' ಎಂದು ಬದಲಾಗಿದೆ. ನು. ೧೧-೧೩ ರಲ್ಲಿರುವ ಕೃಷ್ಣಸ್ತುತಿ ಮೂಲದಲ್ಲಿಲ್ಲ. ಈ ಕೃಷ್ಣಚರಿತೆಯ ಬಗ್ಗೆ ದಾಸರಿಗಿರುವ ಹೆಚ್ಚಿನ ಪ್ರೀತಿ ಈ ೧೩ನೆಯ ನುಡಿಯಲ್ಲಿಯೂ ವ್ಯಕ್ತವಾಗಿದೆ.

ಅಧ್ಯಾಯ ೪೩, ಶ್ಲೋಕ ೧-೩೦ ರಲ್ಲಿ ಕುವಲಯಾಪೀಡವೆಂಬ ಕಂಸನ ಆನೆಯನ್ನು ವಧಿಸಿ ರಂಗಮಂಟಪಕ್ಕೆ ಬಂದ ರಾಮಕೃಷ್ಣರನ್ನು ಕಂಡು ಜನರು ಅವರ ಲೀಲೆಗಳನ್ನು ಸ್ಮರಿಸುತ್ತಾರೆ. ಈ ಭಾಗ ಪ್ರ.ಭಾ.ದ ಕೀ. ೬೩ರ ನು. ೧-೧೯ರಲ್ಲಿ ವರ್ಣಿತವಾಗಿದೆ.

ಇಲ್ಲಿ ದಾಸರು ಪಲ್ಲವಿಯಲ್ಲಿಯೇ ಗಜವನ್ನು, ಅಷ್ಟದಿಗ್ಗಜಗಳನ್ನು, ಗಜವದನ ಜನಕನಾದ ಶಿವನನ್ನು ಪಾಲಿಸುವ, ಗಜರಿಪುವಾದ ಸಿಂಹದ ಮುಖವನ್ನೇ ಹೊಂದಿರುವ ಹರಿಗೆ ಈ ಕುವಲಯಾಪೀಡವೆಂಬ ಗಜ ದೊಡ್ಡದೆ ? ಎಂದು ಹೇಳಿ ಮುಂದಾಗುವುದರ ಸೂಚನೆಯನ್ನು ಕೊಟ್ಟಿದ್ದಾರೆ. ಮೂಲದಲ್ಲಿ ಇಂಥ ಮಾತುಗಳು ಮೊದಲಿಗೇ ಸಾಮಾನ್ಯವಾಗಿ ಬರುವುದಿಲ್ಲ. ಈ ಭಾಗದಲ್ಲಿ ಕುವಲಯಾಪೀಡದ ವಧೆಯು ಕೆಲವೆಡೆಗಳಲ್ಲಿ ಮೂಲವನ್ನು ಯಥಾವತ್ತಾಗಿ ಅನುಸರಿಸಿದ್ದರೆ,ಕೃಷ್ಣಲೀಲೆಗಳನ್ನು ಹೇಳುವಲ್ಲಿ ಕೆಲವೆಡೆ ಸಂಗ್ರಹಿಸಿದ್ದಾರೆ. ನು. ೯ರ ರಾಮಕೃಷ್ಣರು 'ನೀಲಾದ್ರಿ ರಜತಾದ್ರಿ'ಯಂತೆ ತೋರಿದರು ಎಂಬ ಉಪಮೆ ಮತ್ತು ನು. ೧೮ರ ಮೊದಲ ೨ ಸಾಲುಗಳ ವಿಚಾರ ಮೂ.ಭಾ.ದಲ್ಲಿಲ್ಲ. ಶ್ಲೋಕ ೨೫-೨೭ರ ಸಾರಾಂಶವಾಗಿ ನು. ೧೬ ಬಂದಿದೆ. ನು.೧೯ ಕೂಡ ಮೂಲದ ಶ್ಲೋಕ ೩೧ ರಿಂದ ಭಿನ್ನವಾಗಿ ಆದರೆ ಸಂದರ್ಭಕ್ಕೆ ಉಚಿತವಾಗಿ ಬಂದಿದೆ.

ಶ್ಲೋಕ ೩೧-೪೦ರಲ್ಲಿ ಚಾಣೂರ ಕೃಷ್ಣರ ಸಂಭಾಷಣೆ ಬರುತ್ತದೆ. ಈ ಭಾಗ ಕೀ. ೬೪, ನು. ೧-೬ ರಲ್ಲಿ ಬಂದಿದೆ. ಕೀ. ೬೪ರ ಪಲ್ಲವಿ ಚಾಣೂರನ ಬಗ್ಗೆ ದಾಸರ ಅಭಿಪ್ರಾಯ ಏನಿದೆ ಎನ್ನುವುದನ್ನು ಸ್ಪಷ್ಟಪಡಿಸುತ್ತದೆ—

ಮಧುಕೈಟಭಮರ್ದಕನೊಳು ಚಾಣೂರ ಮದಸೊಕ್ಕಿ ಕಾದುವೆನೆಂದು
ವದಿಸಿದ ರಂಗದಿ ರಂಗನೊಡನೆ ತಾ ಬದುಕಬಲ್ಲನೆ ಹೇಳೆಂದು ಪ.

ಇದೇ ದೃಷ್ಟಿಯ 'ಕಲಿ ಚಾಣೂರ ಪಾಪಭಾಜ' (ನು. ೧),'ಗೆಲುವುಂಟೆ....ಇಳೆದಿವಿಯಲಿ ಸಟೆಯೆಂದ' (ನು. ೬ರ ೨ನೆಯ ಸಾಲು) ಎಂಬ ಮಾತುಗಳು ಮೂಲದಲ್ಲಿಲ್ಲ. ಇಂಥ ಕೆಲವು ವ್ಯತ್ಯಾಸಗಳಿದ್ದರೂ ಈ ಭಾಗ ಒಟ್ಟಿನಲ್ಲಿ ಮೂಲವನ್ನು ಅನುಸರಿಸಿ ಬಂದಿದೆ ಎಂದು ಹೇಳಬಹುದು.

ಅಧ್ಯಾಯ ೪೪, ಶ್ಲೋಕ ೧-೩೦ ರಲ್ಲಿ ಕೃಷ್ಣಬಲರಾಮರಿಂದ ಚಾಣೂರ ಮುಷ್ಟಿಕರ ವಧೆಯಾಗುವುದನ್ನು ವರ್ಣಿಸಲಾಗಿದೆ. ಈ ಭಾಗ ಕೀ. ೬೪, ನಂ. ೭–೨೪ ರಲ್ಲಿ ಕೆಲವು ಸಣ್ಣ ವ್ಯತ್ಯಾಸಗಳೊಡನೆ ಬಂದಿದೆ.

ನು. ೮ರಲ್ಲಿ ಬರುವ 'ಹೆಮ್ಮದ್ದಾನೆಯ ತೆರದಲಿ' ಎಂಬ ಉಪಮೆ ಮೂಲದಲ್ಲಿಲ್ಲ. ಹಾಗೆಯೇ ಶ್ಲೋಕ ೧೯ರ ವಿವರಗಳು ಪ್ರ.ಭಾ.ದಲ್ಲಿಲ್ಲ. ಶ್ಲೋಕ ೨೪ರ 'ಇಂದ್ರಧ್ವಜ', ನು. ೨೨ ರಲ್ಲಿ 'ಸುರವರ ಚಾಪ' ಎಂದಾಗಿದೆ. ಶ್ಲೋಕ ೨೯ರ 'ಉಳಿದೆಲ್ಲ ಜಟ್ಟಿಗಳು' ಎನ್ನುವುದು, ಇಲ್ಲಿ 'ನೂರಜು ಮಲ್ಲರು' (ನು. ೨೪) ಎಂದಾಗಿದೆ.

ಶ್ಲೋಕ ೩೧ರಲ್ಲಿ ಬಲರಾಮಕೃಷ್ಣರ ಸಾಹಸಕಾರ್ಯದಿಂದ ಕಂಸನೊಬ್ಬನನ್ನು

ಬಿಟ್ಟು ಉಳಿದ ಎಲ್ಲ ಜನರೂ ಸಂತೋಷಗೊಂಡರು, ಸಜ್ಜನರಾದ ಬ್ರಾಹ್ಮಣೋತ್ತಮ ರೆಲ್ಲರೂ ಸಾಧು ಸಾಧು ಎಂದು ಶ್ಲಾಘಿಸಿದರು ಎಂದಿದ್ದರೆ, ಸು. ೨೫ರ ೨ ಸಾಲುಗಳಲ್ಲಿ–

ಶಿಷ್ಟರು ಕಂಡರಕ್ಲಿಷ್ಟರ ಕರ್ಮಕೆ ತುಷ್ಟಿಸಿ ಸಾಧು ಸಾಧು ಎನುತ

ದುಷ್ಟಕಂಸನ ಸಂಬಂಧಿಗಳೆಲ್ಲರು ಕಷ್ಟಿಸಿದರು ಬಳಲುತ

ಎಂದು ಸರಿಯಾಗಿಯೇ ಬರಲಾಗಿದೆ. ಶ್ಲೋಕ ೩೨ರ ಸಾರಾಂಶ ಸು. ೨೫ರ ಕೊನೆಯ ಎರಡು ಸಾಲುಗಳಲ್ಲಿ ಬಂದಿದೆ. ಸು. ೨೬ರಲ್ಲಿ ಕಂಸನ ಬಗ್ಗೆ ಬರುವ ಮಾತುಗಳು ಮೂಲ ದಲ್ಲಿಲ್ಲ. ಶುಕಮುನಿ ಪರೀಕ್ಷಿತನಿಗೆ ಹೇಳಿದ ಈ ದಿವ್ಯಕಥೆಯ ಬಗ್ಗೆ ದಾಸರಿಗಿರುವ ಅಭಿಮಾನ ಅನೇಕ ಕಡೆಗಳಲ್ಲಿಯಂತೆ ಸು. ೨೭ರಲ್ಲಿಯೂ ವ್ಯಕ್ತವಾಗಿದೆ.

ಶ್ಲೋಕ ೩೩–೫೨. ಕಂಸವಧೆಯ ಚಿತ್ರಣವಿರುವ ಈ ಭಾಗ ಕೀ. ೬೫, ಸು. ೧–೨೨ರಲ್ಲಿ ಬಂದಿದೆ. ಕೃಷ್ಣನಿಂದ ಕಂಸವಧೆಯಾಗುವುದನ್ನು ಸು.೧ರಲ್ಲೇ ಹೇಳಿ, ಆ ಪ್ರಸಂಗದ ವಿವರಗಳನ್ನು ಮೂಲವನ್ನನುಸರಿಸಿ ಮುಂದಿನ ನುಡಿಗಳಲ್ಲಿ ಕೊಡಲಾಗಿದೆ.

ಶ್ಲೋಕ ೩೩–೪೦ರಲ್ಲಿಯ ಕಂಸವಧೆಯ ವಿವರಗಳು ಸು. ೨–೯ರಲ್ಲಿ ಹೆಚ್ಚು ವ್ಯತ್ಯಾಸವಿಲ್ಲದೆ ಬಂದಿವೆ. ಆದರೆ ಶ್ಲೋಕ ೪೧ರಲ್ಲಿ 'ಕಂಸನು ಮೃತ್ಯುಭಯದಿಂದ ಚಕ್ರ ಧಾರಿ ಕೃಷ್ಣನನ್ನು ಯಾವಾಗಲೂ ನೋಡುತ್ತಿದ್ದುದರಿಂದ ಸಾರೂಪ್ಯವನ್ನೇ ಹೊಂದಿ ದನು' ಎಂದಿದ್ದರೆ, ದಾಸರು ಸು. ೧೧ರಲ್ಲಿ–

ಬಲು ಪಟುತರಾಭ್ಯಾಸದ ಬಲದಿಂದ ಭೃಗು ಮುನೀಂದ್ರ

ಲಲಿತಗತಿಗೈದಿದ ಮಹಾತ್ಮ

ಸಲೆ ಹರಿಯ ವೈರಭಾವ ಬಲಿದ ಪಾಪಿ ಕಾಲನೇಮಿ

ನಿಲದೆ ತಮಸಕ್ಕೈದಿದ ದುರಾತ್ಮ

ಎಂದು ಕಂಸನನ್ನು ನರಕಕ್ಕೇ ಕಳಿಸಿಬಿಟ್ಟಿದ್ದಾರೆ. ಇದು ಈ ಭಾಗದಲ್ಲಿ ಕಾಣುವ ಪ್ರಮುಖ ವ್ಯತ್ಯಾಸವಾಗಿದೆ. ಹಾಗೆಯೇ ಇಲ್ಲಿ ಬರುವ ಭೃಗುಮುನಿಯ ಪ್ರಸ್ತಾಪವೂ ಮೂಲ ದಲ್ಲಿಲ್ಲ.

ಶ್ಲೋಕ ೪೨–೫೨ರಲ್ಲಿ ಬರುವ . ಕಂಸವಧೆಯ ಅನಂತರದ ವಿವರಗಳು ಸು. ೧೨–೨೫ರಲ್ಲಿ ಮೂಲವನ್ನನುಸರಿಸಿ ಬಂದಿದ್ದರೂ ಅಲ್ಲಲ್ಲಿ ಸಣ್ಣ ಸಣ್ಣ ವ್ಯತ್ಯಾಸಗಳನ್ನು ಗುರುತಿಸಬಹುದಾಗಿದೆ. ಉದಾ. ಗೆ, ಶ್ಲೋಕ ೪೯ರಲ್ಲಿ 'ಭೂತದ್ರೋಹ ಮಾಡಿದ ಯಾವನು ತಾನೆ ಈ ಲೋಕದಲ್ಲಿ ಸುಖವಾಗಿ ಬಾಳಿಯಾನು' ಎಂದಿರುವುದು, ಕೀ. ೬೫, ಸು. ೧೯, ೨೦ರಲ್ಲಿ 'ಭೂಪನಾಗಿ ಪ್ರಾಣಿಗಳ ಮೇಲೆ ದಯವಿರಲು ಬೇಕು ನೀ ನಿರ್ದಯನಾಗಿ ಮಡಿದೆಯಲಾ' ಎಂದು ಬದಲಾಗಿದೆ.

ಶ್ಲೋಕ ೫೦ ರಲ್ಲಿ 'ಈ ಭಗವಂತನಾದ ಶ್ರೀ ಕೃಷ್ಣನೇ ಅಲ್ಲವೆ ಇಲ್ಲಿ ಎಲ್ಲ ಭೂತ ಕೋಟಿಗಳ ಸೃಷ್ಟಿ. ಸ್ಥಿತಿ ಸಂಹಾರಗಳನ್ನು ಮಾಡುವ ಮಹಾಪುರುಷನು. ಅವನನ್ನೇ ಅವ ಮಾನಗೊಳಿಸುವ ಮಾನವನು ಯಾವಾಗಲಾದರೂ ಎಲ್ಲಾದರೂ ಸುಖವಾಗಿರಲು

ಸೌಧ್ಯವೇ ಇಲ್ಲ'-ಎಂದಿದ್ದರೆ,

..................................ನಿ

ಶ್ಚಯವ್ಯೆ ಜನನ ಮರಣ ದೇಹಿಗಳ್ಗೆ

ಅಯ್ಯೊ ವ್ಯರ್ಥ ಸತ್ತೆಯಲಾ ತ್ವದೀಯ ಜನ್ಮ ಭೂತದ್ರೋಹ

ಮೈಯುಂಡು ಹೋದೆಯೆಲೊ ನರಕಕೀಗ ೨೦

ಜನಕಗೆ ದುಃಖವಿತ್ತ ನೃಪಗೆ ಕನಸಿನಲಿ ತೋರದು ಸುಖ ೨೧

ಎಂದು ಬದಲಾಗಿದೆ. ಈ ಮಾತುಗಳು ಮೂಲದಲ್ಲಿರುವ ಮಾತುಗಳಿಂದ ಭಿನ್ನವಾಗಿದ್ದರೂ ಸಂದರ್ಭಕ್ಕೆ ಹೊರತಾದ ಮಾತುಗಳಲ್ಲ.. ಅಲ್ಲದೆ ಶ್ಲೋಕ ೫೦ರ ಮಾತುಗಳಿಗಿಂತ ನು. ೨೦, ೨೧ರ ಮಾತುಗಳು ಕಂಸನ ರಾಣಿಯರು ಆ ಹೊತ್ತಿನಲ್ಲಿ ಆಡುವಂಥವಾಗಿವೆ. ಹೆಚ್ಚು ಆಪ್ತವಾದ ಧ್ವನಿಯನ್ನೊಳಗೊಂಡಿವೆ.

ಶ್ಲೋಕ ೫೧ರಲ್ಲಿ ಕೃಷ್ಣನು ಶೋಕಿಸುತ್ತಿದ್ದ ರಾಜಸ್ತ್ರೀಯರನ್ನು ಸಮಾಧಾನಪಡಿಸಿ ಹತರಾದವರಿಗೆ ಮಾಡಬೇಕಾದ ಅಪರಕ್ರಿಯೆಗಳನ್ನು ಮಾಡಿಸಿದನು ಎಂದು ಬಂದಿದೆ. ಆದರೆ ನು. ೨೧ರಲ್ಲಿ 'ಘನಕೃಪೆಯ ನುಡಿಗಳಿಂದ ವನಿತೆಯರ್ ಶೋಕ ನಿಲಿಸಿದನು' ಎಂದು ಮಾತ್ರ ಹೇಳಿ, ಮೃತರಿಗೆ ಅಪರಕರ್ಮ ಮಾಡಿದ ವಿಷಯವನ್ನು ಕೈಬಿಡಲಾಗಿದೆ.

ಹೀಗೆಯೇ ವಸುದೇವ ದೇವಕಿಯರ ಬಂಧ ವಿಮೋಚನೆ ಮಾಡಿದ ನಂತರ ಶ್ಲೋಕ ೫೩ ರಲ್ಲಿ 'ದೇವಕಿ ವಸುದೇವರಿಬ್ಬರೂ ನಮಸ್ಕರಿಸಿದ ಮಕ್ಕಳನ್ನು ಜಗದೀಶ್ವರರೆಂದೇ ಭಾವಿಸಿ, ಭಯಪಟ್ಟು ಆಲಂಗಿಸಿಕೊಳ್ಳಲೇ ಇಲ್ಲ'-ಎಂದಿರುವುದನ್ನು,

'ತನಯರನ್ನು ಅಪ್ಪಿದರು ಮನದಿ ಭಯವ ಹಿಡಿದು ಜಗ

ಜ್ಜನಕರೆಂದು ತಿಳಿದು.................................. ೨೩

ಎಂದು ಬದಲಿಸಲಾಗಿದೆ. ಇಂಥ ಕೆಲವು ವ್ಯತ್ಯಾಸಗಳನ್ನು ಕಂಸವಧೆಯ ಈ ಭಾಗದಲ್ಲಿ ಗುರುತಿಸಬಹುದಾದರೂ ಪ್ರ.ಭಾ.ವು ಮೂಲಭಾಗವತದಿಂದ ತುಂಬ ದೂರದಲ್ಲಿ ನಿಂತಿದೆ ಎಂದೇನೂ ಅನ್ನಿಸುವುದಿಲ್ಲ.

ಅ. ೪೫, ಶ್ಲೋಕ ೧–೧೧ರಲ್ಲಿ ಕೃಷ್ಣ ವಸುದೇವ ದೇವಕಿಯರನ್ನು ಮಾತನಾಡಿಸಿ ಅವರಲ್ಲಿ ಪುತ್ರಮೋಹವನ್ನು ದೀಪ್ತಗೊಳಿಸುತ್ತಾನೆ. ಈ ಭಾಗ ಕೀ. ೬೫, ನು. ೨೩ರ ಉತ್ತರಾರ್ಧದಿಂದ ನು. ೪೦ರಲ್ಲಿ ಬಂದಿದೆ. ಇಲ್ಲಿಯೂ ವಿವರಗಳಲ್ಲಿ ಸಾಕಷ್ಟು ವ್ಯತ್ಯಾಸಗಳಿರುವುದನ್ನು ಗಮನಿಸಬಹುದಾಗಿದೆ.

ಶ್ಲೋಕ ೩ರಲ್ಲಿ 'ತಂದೆಯೆ, ನೀವಿಬ್ಬರೂ ನಮಗಾಗಿಯೇ ಯಾವಾಗಲೂ ತುಡಿಯುತ್ತಿದ್ದರೂ ಸಹ ಪುತ್ರರಾದ ನಮ್ಮ ಬಾಲ್ಯ, ಪೌಗಂಡ, ಕೈಶೋರಾವಸ್ಥೆಗಳ ಲೀಲೆಗಳನ್ನು ನೋಡಿ ಸಂತೋಷಿಸಲು ಕೊಂಚವೂ ಆಗದೆ ಹೋಯಿತು' ಎಂಬ ಕೃಷ್ಣನ ಮಾತು ನು. ೨೯, ೩೦ ರಲ್ಲಿ ಇನ್ನಷ್ಟು ವಿವರಗಳೊಂದಿಗೆ ಮೈತುಂಬಿಕೊಂಡಿದೆ. ಸಂದರ್ಭಕ್ಕನುಗುಣವಾಗಿ ವಿವರಗಳನ್ನು ಹಿಗ್ಗಿಸುವ ದಾಸರ ಚಾತುರ್ಯಕ್ಕೆ ಈ.ಉದಾ.ಯನ್ನು

ನೋಡಬಹುದು —

ಸ್ವರ್ಗಸುಖವು ಜನನಿಜನಕರ್ಗೆ ಮಕ್ಕಳಾಟ ನೋಡಿ
ಒಗ್ಗುವುದು ಪೂರ್ವ ಪುಣ್ಯಫಲವು
ಅಗ್ರಜನ್ನ ಕೂಡಿ ಮಾದಿ ಅನರ್ಘ್ಯ ಆಟವಾಡಿದೆವು
ವ್ಯಗ್ಗಳಿಂದ ಕಾಣಲಿಲ್ಲ ನೀವು ೨೯
ಪಾಲು ಬೆಣ್ಣೆ ಇಕ್ಕಿ ಆಭರಣಗಳನ್ನಿಟ್ಟು ಬರುವಂತೆಂಬೆ
ಗಾಲಿಕ್ಕಿಸಿ ಮಲ್ಲುವಾಕ್ಯ ಕೇಳಿ
ಬಾಲಾಂಕಿತ ವದನ ರದನಸಾಲು ನೋಡಿ ಮುದ್ದುಕೊಡುವ
ಬಾಲೆ ಧನ್ಯಳು ಪುಣ್ಯಸುಶೀಲೆ ೩೦

ಉಳಿದ ಭಾಗಗಳು ಬಹುಮಟ್ಟಿಗೆ ಮೂಲವನ್ನು ಅನುಸರಿಸಿ ಬಂದಿದ್ದರೂ, ನು. ೩೯ರ ವಿವರ ಇಲ್ಲಿಯು ಹೆಚ್ಚಿನ ಅಂಶವಾಗಿದೆ. ನು. ೪೦ ಅನೇಕ ಕೀರ್ತನೆಗಳಲ್ಲಿರುವಂತೆ ಫಲ ಶ್ರುತಿಯಾಗಿ ಬಂದಿದೆ.

ಶ್ಲೋಕ ೧೭-೨೧ರಲ್ಲಿ ಕೃಷ್ಣ ತನ್ನ ಅಜ್ಜ ಉಗ್ರಸೇನನಿಗೆ ಪಟ್ಟ ಕಟ್ಟಿ, ಉಳಿದ ಅರಸರು ಆತನಿಗೆ ಕಪ್ಪಕಾಣಿಕೆಗಳನ್ನು ಕೊಡುವಂತೆ ನೇಮಿಸುತ್ತಾನೆ. ಕಂಸನ ಭಯದಿಂದ ದೇಶ ಬಿಟ್ಟುಹೋಗಿದ್ದ ವೃಷ್ಣಿ, ಅಂಧಕ ಮೊದಲಾದವರನ್ನೆಲ್ಲ ಹಿಂದಕ್ಕೆ ಕರೆಸಿ ಅವರ ವರ ಸ್ಥಳಗಳಲ್ಲಿರುವಂತೆ ಮಾಡುತ್ತಾನೆ. ಅವರೆಲ್ಲ ಕೃಷ್ಣನ ಸಹವಾಸದಲ್ಲಿ ಸುಖಿಗಳಾಗುತ್ತಾರೆ. ಈ ಭಾಗ ಪ್ರ.ಭಾ.ದ ಕೀ. ೬೬, ನು. ೧–೮ರಲ್ಲಿ ಬಂದಿದೆ.

ಈ ಕೀರ್ತನೆಯು ಪಲ್ಲವಿ ಕೃಷ್ಣನ ಮಹಿಮಾನ್ವಿತ ವ್ಯಕ್ತಿತ್ವದ ಕೀರ್ತನೆಯಾಗಿ ಇಲ್ಲಿಗೆ ಉಚಿತವಾಗಿಯೇ ಕಾಣಿಸುತ್ತದೆ. ಇಲ್ಲಿಯೂ ನಿರೂಪಣೆಯಲ್ಲಿ ಸಣ್ಣ ಸಣ್ಣ ವ್ಯತ್ಯಾಸಗಳನ್ನು ಗುರುತಿಸಬಹುದು. ಉದಾ.ಗೆ, ಶ್ಲೋಕ ೨೧ ಹಾಗೂ ಕೀ. ೬೬, ನು. ೭, ೮ನ್ನು ಹೋಲಿಸಿ ನೋಡಬಹುದು. ನು. ೯–೧೧ ನೇರವಾಗಿ ದಾಸರ ಮಾತುಗಳಾಗಿದ್ದು ಇವುಗಳಲ್ಲಿ ಫಲಶ್ರುತಿ. ಕೃಷ್ಣಸ್ತುತಿಗಳು ಬಂದಿವೆ.

ಅ.೪೫, ಶ್ಲೋಕ ೨೨–೫೦ರಲ್ಲಿ ಕೃಷ್ಣ ನಂದಗೋಪನನ್ನು ಗೋಕುಲಕ್ಕೆ ಕಳಿಸುವುದು, ವಸುದೇವನಿಂದ ಕೃಷ್ಣ ಬಲರಾಮರ ಉಪನಯನ, ಸಾಂದೀಪನಿಯ ಬಳಿಯಲ್ಲಿ ವಿದ್ಯಾಭ್ಯಾಸ, ಗುರುಪುತ್ರನನ್ನು ಹಿಂದಕ್ಕೆ ತಂದದ್ದು—ಇವುಗಳ ವರ್ಣನೆ ಇದೆ. ಅ. ೪೬ರಲ್ಲಿ ಕೃಷ್ಣ ಉದ್ಧವನನ್ನು ಗೋಕುಲಕ್ಕೆ ಕಳಿಸುವುದು, ನಂದ ಉದ್ಧವರ ಸಂಭಾಷಣೆ ಬರುತ್ತವೆ. ಅ. ೪೭ರಲ್ಲಿ ಉದ್ಧವ ಗೋಪಿಯರ ಸಂವಾದ, ಭ್ರಮರಗೀತೆ—ಇವುಗಳ ವರ್ಣನೆಯಿದೆ. ಅ. ೪೮ರಲ್ಲಿ ಕೃಷ್ಣನು ಕುಬ್ಜೆ ಅಕ್ರೂರರನ್ನು ಭೇಟಿ ಮಾಡುವುದು, ಅಕ್ರೂರನನ್ನು ಪಾಂಡವರ ಸ್ಥಿತಿಯನ್ನು ತಿಳಿಯಲು ಹಸ್ತಿನಾವತಿಗೆ ಕಳಿಸುವುದು—ಈ ಘಟನೆಗಳು ಬರುತ್ತವೆ. ಅ. ೪೯ರಲ್ಲಿ ಹಸ್ತಿನಾಪುರಕ್ಕೆ ಅಕ್ರೂರನ ಪ್ರಯಾಣ, ಧೃತರಾಷ್ಟ್ರನಿಗೆ ಅಕ್ರೂರನ ಹಿತೋಕ್ತಿ, ಅಕ್ರೂರನ ಪುನರಾಗಮನ—ಈ ಸಂಗತಿಗಳಿವೆ.

ಅ. ೪೫, ಶ್ಲೋಕ ೨೨ರಿಂದ ಅ. ೪೯ರಲ್ಲಿ ಬರುವ ಮೇಲೆ ತಿಳಿಸಿದ ಸಂಗತಿಗಳೆಲ್ಲವನ್ನೂ

ಪ್ರ.ಭಾ.ದಲ್ಲಿ ಕೈಬಿಡಲಾಗಿದೆ. (ಇವುಗಳಲ್ಲಿ ಉದ್ಧವನನ್ನು ಗೋಕುಲಕ್ಕೆ ಕಳಿಸಿದ್ದು ಮತ್ತು ಅಕ್ರೂರನನ್ನು ಹಸ್ತಿನಾವತಿಗೆ ಕಳಿಸಿದ್ದರ ಸೂಚನೆ ಮಾತ್ರ ಕೀ.೬೭, ನಂ.೯ರಲ್ಲಿ ಬಂದಿದೆ.) ಇವುಗಳ ಬದಲಿಗೆ ಅಂತ್ಯದಲ್ಲಿ ಬರುವ ಕೀ. ೬೭ ಒಂದು 'ಮಂಗಳಪದ'ದಂತಿದ್ದು ಕೃಷ್ಣನಿಂದಾದ ಮಹತ್ಕಾರ್ಯಗಳೆಡೆ ಒಂದು ಪಕ್ಷಿನೋಟವನ್ನು ಬೀರುತ್ತದೆ. ನಂ. ೧–೯ರಲ್ಲಿ ದಶಮಸ್ಕಂಧದ ಪೂರ್ವಾರ್ಧದಲ್ಲಿಯ ಘಟನೆಗಳ ಸ್ಮರಣೆ ಇದ್ದರೆ, ನಂ. ೧೦–೧೩ರಲ್ಲಿ ಕೃಷ್ಣನ ಅನಂತರದ ಬದುಕಿನ ಕೆಲವು ಘಟನೆಗಳನ್ನು ಸ್ಮರಿಸಲಾಗಿದೆ.

ಒಟ್ಟಿನಲ್ಲಿ ಪ್ರ.ಭಾ.ವನ್ನು ಮೂಲದೊಡನೆ ಹೋಲಿಸಿ ನೋಡಿದಾಗ, ಮೂಲ ಭಾಗವತದ ದಶಮಸ್ಕಂಧ ಪೂರ್ವಾರ್ಧದಲ್ಲಿ ೪೯ ಅಧ್ಯಾಯಗಳಿದ್ದು ಪ್ರ.ಭಾ.ದಲ್ಲಿ ೪೫ನೆಯ ಅಧ್ಯಾಯದ ಶ್ಲೋಕ ೨೧ರವರೆಗಿನ ಕಥೆಯನ್ನು ಮಾತ್ರ ಆಧರಿಸಿ ಕೀರ್ತನೆಗಳನ್ನು ರಚಿಸಿರುವುದು ಕಂಡುಬರುತ್ತದೆ. ಆಧರಿಸಿರುವಷ್ಟು ಭಾಗವನ್ನೂ ಅವರು ಯಥಾವತ್ತಾಗಿ ಭಾಷಾಂತರಿಸಿಲ್ಲವೆನ್ನುವುದು ಮೇಲಿನ ಅಧ್ಯಯನದಿಂದ ಮೇಲು ನೋಟಕ್ಕೇ ಕಾಣಿಸುವ ಸಂಗತಿಯಾಗಿದೆ. ಸಂಸ್ಕೃತ ಭಾಗವತದ ೪೫ ಅಧ್ಯಾಯಗಳನ್ನು ಪ್ರ.ಭಾ. ಆಧರಿಸಿದೆಯಾದರೂ, , ಅನೇಕ ಸಂದರ್ಭಗಳಲ್ಲಿ ಯಥಾವತ್ತಾಗಿ ಅನುಸರಿಸಿರುವಂತೆ ಕಂಡರೂ, ಅನೇಕ ಸಂದರ್ಭಗಳು ಸಂಗ್ರಹಗೊಂಡು ಬಂದಿವೆ. ಕೆಲವೆಡೆ ವಿಸ್ತಾರಗೊಂಡು ಹೊಸ ಅಂಶಗಳು ಸೇರಿವೆ. ಹಾಗೆಯೇ ಕೆಲವು ಕಡೆಗಳಲ್ಲಿ ಮೂಲದ ವಿವರ ವರ್ಣನೆಗಳೇ ಬಿಡಲಾಗಿವೆ. ಒಂದು ಭಾಷೆಯ ಗದ್ಯವನ್ನು ಮತ್ತೊಂದು ಭಾಷೆಗೆ ಭಾಷಾಂತರಿಸುವುದೇ ಸಾಕಷ್ಟು ತೊಡಕಿನ ಕೆಲಸ. ಅಂಥದರಲ್ಲಿ ಪ್ರಸನ್ನವೆಂಕಟದಾಸರು ಸಂಸ್ಕೃತದಂಥ ಪ್ರೌಢಭಾಷೆಯಲ್ಲಿ ಶ್ಲೋಕದಲ್ಲಿರುವ ಭಾಗವತವನ್ನು ಭಿನ್ನಜಾಯಮಾನದ ಭಾಷೆಯಾದ ಕನ್ನಡದಲ್ಲಿ, ಮೂಲದಲ್ಲಿರುವಂತೆ ಅಧ್ಯಾಯಗಳಾಗಿ ವಿಂಗಡಿಸದೆ ಬೇರೆ ಬೇರೆ ಛಂದಸ್ಸು, ಮಟ್ಟುಗಳ ವಿವಿಧ ಗಾತ್ರದ ನುಡಿಗಳಲ್ಲಿ ರಚಿಸುವ ಸಾಹಸವನ್ನು ಮಾಡಿದ್ದಾರೆ. ಈ ಎಲ್ಲ ಕಾರಣಗಳಿಂದ ಪ್ರಸನ್ನವೆಂಕಟರ ಈ ಭಾಗವತವನ್ನು ಸಂಸ್ಕೃತ ಭಾಗವತದ ರೂಪಾಂತರ ಎನ್ನಬಹುದಾಗಿದೆ.

ಭಾಗವತ ದಶಮಸ್ಕಂಧ ಪೂರ್ವಾರ್ಧದಲ್ಲಿರುವುದು ಕೃಷ್ಣನ ಕಥೆ, ಆತನ ಜನನ, ಬಾಲಲೀಲೆಗಳು, ದುಷ್ಟಶಿಕ್ಷಣ ಹಾಗೂ ಶಿಷ್ಟರಕ್ಷಣ ಕಾರ್ಯಗಳು. ಇವೆಲ್ಲಕ್ಕಿಂತ ಮುಖ್ಯವಾಗಿ ಹರಿಯೇ ಕೃಷ್ಣನಾಗಿ ಈ ಕಾರ್ಯಗಳಿಗಾಗಿ ಜನಿಸಿ ಬಂದನೆಂಬ ಕಲ್ಪನೆ–ಇವು ಹರಿಭಕ್ತರಾದ ದಾಸರನ್ನು ಸೆಳೆದದ್ದರಲ್ಲಿ ಆಶ್ಚರ್ಯವೇನಿಲ್ಲ. ಆದರೆ ಅವರು ಅದನ್ನು ಯಥಾವತ್ತಾಗಿ ಗದ್ಯದಲ್ಲೋ, ನಿರ್ದಿಷ್ಟವಾದ ಛಂದಸ್ಸಿನಲ್ಲಿ ಕಾವ್ಯವಾಗಿಯೋ ಭಾಷಾಂತರಿಸದೆ, ಕೀರ್ತನೆಗಳನ್ನಾಗಿ ವಿವಿಧ ಮಟ್ಟುಗಳಲ್ಲಿ ರಚಿಸಿದ್ದರ ಉದ್ದೇಶ ಸಂಸ್ಕೃತದಲ್ಲಿದ್ದ ಆ ಕೃಷ್ಣ ಕಥೆಯನ್ನು ಒಂದು ಜನಪ್ರಿಯ ಮಾಧ್ಯಮವಾದ ಕೀರ್ತನೆಗಳ ರೂಪದಲ್ಲಿ ಆದಷ್ಟು ಹೆಚ್ಚು ಜನರಿಗೆ ತಲುಪಿಸಿ ಹರಿಭಕ್ತಿಯ ಪ್ರಚಾರ ಮಾಡುವುದಾಗಿದ್ದಿರಬೇಕು. ಆ ದೃಷ್ಟಿಯಿಂದ ನೋಡಿದಾಗ ದಾಸರು ಮೂಲದಿಂದ ಕಥೆಯಲ್ಲಿ, ವರ್ಣನೆಗಳಲ್ಲಿ ಮಾಡಿಕೊಂಡ ವಿಸ್ತರಣೆ ಸಂಗ್ರಹಣೆಗಳಿಗೂ ಅರ್ಥವಿರುವಂತೆ ತೋರುತ್ತದೆ.

ಆದರೆ ದಾಸರು ಮೂಲದ ವರ್ಣನೆಗಳನ್ನು ಅನೇಕ ಕಡೆಗಳಲ್ಲಿ ಯಥಾವತ್ತಾಗಿ ತರುವ ಪ್ರಯತ್ನ ಮಾಡಿರುವುದನ್ನೂ ಗಮನಿಸಬಹುದು. ಉದಾ.ಗೆ, ಕುವಲಯಾ ಪೀಡ ಮತ್ತು ಕೃಷ್ಣನ ನಡುವಿನ ಹೋರಾಟ (ಅ. ೪೩, ಶ್ಲೋಕ ೩–೧೪ ಮತ್ತು ಕೀ. ೬೩, ನು.೨ ರಿಂದ ೯ರ ಪೂರ್ವಾರ್ಧ), ಚಾಣೂರ ಕೃಷ್ಣರ ನಡುವಿನ ಹೋರಾಟ (ಅ.೪೪, ಶ್ಲೋಕ ೨೧–೨೪ ಮತ್ತು ಕೀ.೬೪, ನು. ೨೧, ೨೨) ಇತ್ಯಾದಿ. ಇಂಥಲ್ಲೆಲ್ಲ ಭಾಷಾಂತರದ ಕ್ಲಿಷ್ಟತೆಗಳಿಂದ ಕೆಲವು ವ್ಯತ್ಯಾಸಗಳಾಗಿದ್ದರೂ ವರ್ಣನೆಗಳು ಮೂಲಕ್ಕೆ ತುಂಬ ಹತ್ತಿರದಲ್ಲಿಯೇ ನಿಲ್ಲುವುದನ್ನು ನೋಡಬಹುದು.

ದಾಸರು ಕೆಲವೆಡೆ ಮೂಲವನ್ನು ಯಥಾವತ್ತಾಗಿ ತಂದಂತೆಯೇ ತಮಗೆ ತುಂಬ ಪ್ರಿಯವಾದ ಭಾಗಗಳಲ್ಲಿ ಮೂಲ ಭಾಗವತದಲ್ಲಿಲ್ಲದ ವರ್ಣನೆಗಳನ್ನು ತರುತ್ತಾರೆ, ವಿಸ್ತರಿಸುತ್ತಾರೆ. ಉದಾ.ಗೆ, ಕೃಷ್ಣನ ನಾಮಕರಣದ ಪ್ರಸಂಗವನ್ನು ಕುರಿತ ಕೀರ್ತನೆಯ ಭಾಗ (ಕೀ. ೮) ಮೂಲದಲ್ಲಿಲ್ಲ. ಹೀಗೆಯೇ ಗೋಪಿ ಕೃಷ್ಣನಿಗೆ ಹೇಳುವ ಜೋಗುಳದ ಹಾಡು (ಕೀ.೧೪), ಮಗು ಕೃಷ್ಣನನ್ನು ನೋಡಿ ನಲಿಯುವ ಗೋಪಿಯ ಚಿತ್ರ (ಕೀ.೧೫), ಕೀ. ೧೬, ೧೭ರಲ್ಲಿಯ ಕೃಷ್ಣನ ಚೇಷ್ಟೆಗಳ ವರ್ಣನೆಗಳ ವಿಸ್ತರಣೆ–ಇವೆಲ್ಲ ದಾಸರ ಆಸಕ್ತಿ ಹೆಚ್ಚಾಗಿ ಎಲ್ಲಿ ಇದೆ ಎನ್ನುವುದನ್ನು ತೋರಿಸುವುದರ ಜೊತೆಗೆ ಸುಂದರ ಕಾವ್ಯ ಭಾಗಗಳಾಗಿಯೂ, ಮೂಲದ ಸಂದರ್ಭಗಳಿಗೆ ಹೊಂದುವಂತೆಯೂ ಬಂದಿರುವುದು ಗಮನಾರ್ಹವಾಗಿದೆ. ಹಾಗೆಯೇ ಕೀ. ೩೧, ನು. ೮ರಲ್ಲಿ ಬರುವ ಮೂಲದಲ್ಲಿಲ್ಲದ ದಂಪತಿ ಗಳ ವರ್ತನೆಯ ಒಂದು ಸಹಜ ಸುಂದರ ಚಿತ್ರವನ್ನೂ ಇಲ್ಲಿ ನೆನೆಯಬಹುದು. ತನ್ನ ಹೆಗಲಿಗೆ ಹೆಗಲಿಟ್ಟು ನಿಂತ ಹಸುಗಳನ್ನು ನೇವರಿಸುತ್ತಿರುವ ಕೃಷ್ಣನ ಚಿತ್ರ (ಕೀ. ೩೧, ನು. ೮)ವೂ ನೆನಪಿನಲ್ಲಿ ಉಳಿಯುವಂಥ ಮತ್ತೊಂದು ಮೋಹಕ ಚಿತ್ರವಾಗಿದೆ. ಇಲ್ಲೆಲ್ಲ ಮೂಲದ ಸೊಗಸನ್ನು ಬೆಳೆಸುವ ದಾಸರ ಪ್ರತಿಭೆಯನ್ನು ಗುರುತಿಸಬಹುದಾಗಿದೆ.

ತಮಗೆ ಅಗತ್ಯ ಕಂಡೆಡೆಗಳಲ್ಲಿ ಮೂಲದ ಸಂದರ್ಭ, ವರ್ಣನೆಗಳನ್ನು ವಿಸ್ತರಿಸುವ ದಾಸರು ಈ ಮೊದಲೇ ಗುರುತಿಸಿರುವಂತೆ ಕೆಲವೆಡೆ ಮೂಲದ ಪ್ರಸಂಗಗಳನ್ನು, ವರ್ಣನೆ ಗಳನ್ನು ಸಂಗ್ರಹಿಸುವ ಕೆಲಸವನ್ನೂ ಮಾಡಿದ್ದಾರೆ. ಉದಾ.ಗೆ, ಅ. ೪, ಶ್ಲೋಕ ೧೫-೨೩ ರಲ್ಲಿ ಬರುವ ದೀರ್ಘವಾದ ತಾತ್ವಿಕವಾದ ಕಂಸನ ಮಾತುಗಳ ಮುಖ್ಯಾಂಶವನ್ನು ಕೀ. ೬, ನು. ೩ರಲ್ಲಿ ಸಂಗ್ರಹಿಸಿರುವ ಪರಿ ಮೆಚ್ಚುವಂಥದು. ಸಂದರ್ಭಕ್ಕೆ, ಕೀರ್ತನೆಯ ಚೌಕಟ್ಟಿಗೆ ಉಚಿತವಾಗಿ ಬಂದಿರುವಂಥದು. ಹೀಗೆಯೇ ಮುಖ್ಯಕಥೆಗೆ ಅಗತ್ಯವಲ್ಲದ ಅ. ೪, ಶ್ಲೋಕ ೧೧, ೧೩ರಲ್ಲಿ ಬರುವ ದುರ್ಗೆಯ ಪೂಜೆ ಪ್ರಸಿದ್ಧಿಗಳ ವಿವರಗಳನ್ನು ಬಿಟ್ಟದ್ದರಲ್ಲಿಯೂ ಔಚಿತ್ಯವಿದೆ. ಮೂಲದಲ್ಲಿ ವಿಸ್ತಾರವಾಗಿ ಬರುವ ಸ್ತೋತ್ರಭಾಗಗಳು, ತಾತ್ವಿಕ ವಿವರಣೆ ಗಳನ್ನು ಸಂಗ್ರಹಿಸುವ ಮೂಲಕ ಅನೇಕ ಕಡೆಗಳಲ್ಲಿ ಉತ್ತಮ ಸಂಗ್ರಹಕಾರನ ಲಕ್ಷಣವನ್ನು ತೋರಿದ್ದಾರೆ. ಉದಾ.ಗೆ, ಕಾಳಿಯನ ಪತ್ನಿಯರು ಮಾಡುವ ಸ್ತುತಿಯ ಸಂಗ್ರಹಣೆ ಯನ್ನೇ (ಕೀ. ೨೮, ನು. ೨೪ರಿಂದ ನು. ೨೭ರ ಪೂರ್ವಾರ್ಧದವರೆಗೆ) ಗಮನಿಸಬಹುದು.

ಆದರೆ ಕೆಲವೆಡೆ ಹೀಗೆ ಉಚಿತವೆನ್ನಿಸುವ ರೀತಿಯಲ್ಲಿ ಮೂಲವನ್ನು ಸಂಗ್ರಹಿಸುವ

ದಾಸರು ಇತರ ಕೆಲವು ಸಂದರ್ಭಗಳಲ್ಲಿ ಮೂಲದ ಸನ್ನಿವೇಶಕ್ಕೆ, ವರ್ಣನೆಗಳಿಗೆ ಅನ್ಯಾಯ ವಾಗುತ್ತಿದೆಯೆನ್ನಿಸುವ ರೀತಿಯಲ್ಲಿ ಸಂಗ್ರಹಿಸಿರುವುದೂ ಇದೆ.ಮೂಲದ ಆ ಸನ್ನಿವೇಶದ ಕಲ್ಪನೆಯೇ ಅಸ್ಪಷ್ಟವಾಗಿ ಕೇವಲ ಆ ಘಟನೆಗಳ ಮುಖ್ಯಾಂಶಗಳ ವರದಿ ಮಾತ್ರ ಕೊಡುತ್ತಿರುವಂತೆ ಕಾಣಿಸುತ್ತದೆ. ಉದಾ.ಗೆ, ಅ. ೨೭, ಶ್ಲೋಕ ೨೨–೨೮ರಲ್ಲಿ ಬರುವ ಇಂದ್ರನ ಗರ್ವಭಂಗದ ನಂತರ ನಡೆಯುವ 'ಗೋವಿಂದಪಟ್ಟಾಭಿಷೇಕ'ದ ಪ್ರಸಂಗ, ಪ್ರ.ಭಾ.ದ ಕೀ. ೩೬, ನಂ. ೯ರಲ್ಲಿ ತೀರ ಅಸ್ಪಷ್ಟವಾಗಿ ಬಂದಿದೆ. ಹೀಗೆಯೇ ಪೂತನೆ, ವತ್ಸಾಸುರ, ಬಕಾಸುರ ವಧೆಯ ಸಂದರ್ಭಗಳೂ ಮೂಲದೊಡನೆ ಹೋಲಿಸಿದಾಗ ವರದಿ ಮಾತ್ರವಾಗಿ ಬಂದಂತೆ ಎನ್ನಿಸುತ್ತದೆ. ಹೀಗೆಯೇ ಮೂಲದಲ್ಲಿ ಬರುವ ಕೆಲವು ಸುಂದರ ವರ್ಣನೆಗಳೂ ಕೈಬಿಟ್ಟು ಹೋಗಿರುವುದು ಕಂಡುಬರುತ್ತದೆ. ಉದಾ.ಗೆ, ಅ. ೩, ಶ್ಲೋಕ ೫೦ರಲ್ಲಿ ವಸುದೇವ ಕೃಷ್ಣನನ್ನು ಗೋಕುಲಕ್ಕೆ ಒಯ್ಯುವಾಗ ಬರುವ ಯಮುನಾನದಿಯ ವರ್ಣನೆ, ಅ. ೬, ಶ್ಲೋಕ ೪೪ರ ನಂದನ ಪುತ್ರವಾತ್ಸಲ್ಯದ ಒಂದು ಚಿತ್ರ, ಅ. ೯, ಶ್ಲೋಕ ೮ರ ತುಂಟಕೃಷ್ಣ ಕೋತಿಗೆ ಬೆಣ್ಣೆ ತಿನ್ನಿಸುತ್ತಿದ್ದ ಚಿತ್ರ ಇತ್ಯಾದಿಗಳನ್ನು ಗಮನಿಸಬಹುದು. ಕೃಷ್ಣಲೀಲೆಗಳನ್ನೇ ಮುಖ್ಯವಾಗಿ ಹೇಳಹೊರಟ ದಾಸರು ಮೂಲದಲ್ಲಿ ಬರುವ ಅಘಾಸುರ ವಧೆ(ಅ. ೧೨, ಶ್ಲೋಕ ೧೩–೩೮)ಮತ್ತು ಬ್ರಹ್ಮ ಕೃಷ್ಣನನ್ನು ಪರೀಕ್ಷಿಸಿ ಸೋತ ಪ್ರಸಂಗ ಗಳನ್ನು ಪೂರ್ಣವಾಗಿ ಕೈಬಿಟ್ಟದ್ದು ಕೂಡ ಆಶ್ಚರ್ಯಕರ ಸಂಗತಿಯಾಗಿದೆ.

ಇಲ್ಲಿಯೇ ಗಮನಿಸಬಹುದಾದ ಇನ್ನೊಂದು ಅಂಶವೆಂದರೆ ಮೂಲದ ದೀರ್ಘ ಸಂಭಾಷಣೆಗಳನ್ನು, ಸ್ತೋತ್ರ ಭಾಗಗಳನ್ನು ಕೆಲವೆಡೆ ಸಂಗ್ರಹಿಸುವ ದಾಸರು ಮೂಲದಲ್ಲಿ ಇಲ್ಲದೆಡೆಗಳಲ್ಲಿಯೂ ಕೃಷ್ಣಸ್ತುತಿಯನ್ನು ಸೇರಿಸಿರುವುದು. ಅನೇಕ ಕೀರ್ತನೆಗಳ ಅಂತ್ಯ ದಲ್ಲಿ, ಕೆಲವೆಡೆ ಮಧ್ಯದಲ್ಲಿಯೂ ಕೃಷ್ಣಸ್ತುತಿ ಬಂದಿರುವುದು ಮೂಲದೊಡನೆ ಹೋಲಿಸಿ ನೋಡಿದರೆ ತಿಳಿಯುತ್ತದೆ. ಉದಾ.ಗೆ, ಕೀ. ೨೬, ನು. ೯ರ ಕೃಷ್ಣನ ಪಾದಮಹಿಮೆಯ ಸ್ತುತಿ, ಕೀ. ೨೮, ನು. ೬, ೭ರ ಸ್ತುತಿ ಇತ್ಯಾದಿ. ಜೊತೆಗೆ ಕೃಷ್ಣನ ಈ ಚರಿತ್ರೆಯನ್ನು ಕೇಳುವವರೇ ಜಾಣರು. ಅವರು ಮುಕ್ತಿಯನ್ನು ಪಡೆಯುತ್ತಾರೆ. – ಎಂಬಂಥ ಮಾತು ಗಳನ್ನು ಅನೇಕ ಕೀರ್ತನೆಗಳಲ್ಲಿ ಮತ್ತೆ ಮತ್ತೆ ಹೇಳುವ ಮೂಲಕ ಆ ಕಥೆಯ ಬಗ್ಗೆ ತಮಗಿರುವ ಅಮಿತವಾದ ಭಕ್ತಿ, ಪ್ರೀತಿ, ವಿಶ್ವಾಸಗಳನ್ನು ವ್ಯಕ್ತಪಡಿಸಿದ್ದಾರೆ. ಉದಾ.ಗೆ ಕೀ. ೨, ಕೀ. ೨೮ ಇತ್ಯಾದಿ. ಇಂಥಲ್ಲೆಲ್ಲ ಈ ಕೀರ್ತನೆಗಳ ರಚನೆಯ ಹಿಂದಿನ ಉದ್ದೇಶ ವನ್ನು ಊಹಿಸಬಹುದಾಗಿದೆ.

ಭಾಗವತದ ಕಥೆಯನ್ನು ಕೃಷ್ಣಭಕ್ತಿಗೆ ವಾಹಕವಾಗಿಸಿಕೊಂಡು ಹೇಳಹೊರಟ ದಾಸರು ಮೂಲದಲ್ಲಿ ಬರುವ ಪಾತ್ರಗಳ ಚಿತ್ರಣದಲ್ಲಿ ವಸ್ತುನಿಷ್ಠತೆಗಿಂತ ಹೆಚ್ಚಾಗಿ ವ್ಯಕ್ತಿನಿಷ್ಠತೆಯನ್ನು ತೋರಿರುವುದು ಇಲ್ಲಿ ಗಮನಿಸಬಹುದಾದ ಮತ್ತೊಂದು ಅಂಶ ವಾಗಿದೆ. ಉದಾ.ಗೆ, ಕಂಸನ ಪಾತ್ರವನ್ನೇ ನೋಡಬಹುದು. ಮೂಲದಲ್ಲಿ ತಂಗಿ ದೇವಕಿಯ ಬಗ್ಗೆ ಇದ್ದ ಮಮತೆಯಿಂದಾಗಿ ತಾನೇ ರಥವನ್ನು ನಡೆಸುವ ದೊರೆ ಕಂಸ, ಆಕಾಶವಾಣಿಯನ್ನು ಕೇಳಿದ ನಂತರ ಬದಲಾಗುತ್ತಾನೆ. ಆದರೆ ಪ್ರ. ಭಾ.ದಲ್ಲಿ ದೇವಕಿಯ

ಬಗ್ಗೆ ಆತನಿಗಿದ್ದ ಪ್ರೀತಿಯ ಸೂಚನೆಯೂ ಇಲ್ಲ. ಹಾಗೆಯೇ ದುರ್ಗೆಯ ಮಾತನ್ನು ಕೇಳಿದ ನಂತರದ ಕಂಸನ ಸಾವಿನ ನಿರೀಕ್ಷೆ, ತಲ್ಲಣಗಳೂ ಮೂಲದಲ್ಲಿ ತುಂಬ ಸಹಜವಾಗಿ ಶಕ್ತವಾಗಿ ಚಿತ್ರಿಸಲ್ಪಟ್ಟಿವೆ. ಇಂಥ ಅಂಶಗಳಿಂದ ಕಂಸನ ಪಾತ್ರ ಪ್ರ.ಭಾ.ಗಿಂತ ಮೂಲ ದಲ್ಲೇ ಹೆಚ್ಚು ಮಾನವೀಯವಾಗಿ ಬಂದಿದೆ ಎನ್ನಿಸುತ್ತದೆ. ಕೊನೆಯಲ್ಲೂ, ಕಂಸ ಸಾವಿನ ಭಯದಿಂದಾಗಿ ಸಾವಿನ ಪ್ರತೀಕವಾಗಿಯೇ ಕೃಷ್ಣನನ್ನು ನೆನೆಯುತ್ತಿದ್ದರೂ ಆತ ಯಾವಾ ಗಲೂ ಕೃಷ್ಣನನ್ನು ನೆನೆಯುತ್ತಿದ್ದುದರಿಂದ ಸಾರೂಪ್ಯ ಮುಕ್ತಿಯನ್ನು ಪಡೆದನೆಂದು ಮೂ.ಭಾ.ದಲ್ಲಿ (ಅ. ೪೪, ಶ್ಲೋಕ ೪೧) ಬಂದರೆ ದಾಸರು ಕ್ಷಮಾತ್ರ, ಕೀ. ೬೫, ನಂ. ೧೧ರಲ್ಲಿ—

ಸಲೆ ಹರಿಯ ವೈರಭಾವ ಬಲಿದ ಪಾಪಿ ಕಾಲನೇಮಿ
ನಿಲದೆ ತಮಸಕ್ಕೈದಿದ ದುರಾತ್ಮ

ಎಂದು ನರಕಕ್ಕೇ ಕಳಿಸುತ್ತಾರೆ. ಹೀಗಾಗಿ ಇಲ್ಲಿಯ ಪಾತ್ರಗಳೆಲ್ಲ ಎರಡೇ ಬಗೆಯವಾಗಿ ಕಾಣಿಸುತ್ತವೆ. ಒಂದು ಹರಿಭಕ್ತರು, ಶಿಷ್ಟರು. ಎರಡು ಹರಿದ್ವೇಷಿಗಳು, ದುಷ್ಟರು. ಹರಿದ್ವೇಷಿಯಾದ ಕಂಸ ನರಕಕ್ಕೆ ಮಾತ್ರವೇ ಅರ್ಹ ಎನ್ನುವುದು ಇಲ್ಲಿ ವ್ಯಕ್ತವಾಗಿರುವ ದೃಷ್ಟಿ. ಹರಿಭಕ್ತರಾದ ದಾಸರಿಗೆ ಈ ದೃಷ್ಟಿ ಸಹಜವಾದದ್ದಾದರೂ ಆ ಪಾತ್ರದ ಉಳಿದ ಮಿಡಿತಗಳನ್ನೂ ತಂದಿದ್ದರೆ ಆ ಪಾತ್ರ ಇನ್ನಷ್ಟು ಜೀವಂತವಾಗಿರುತ್ತಿತ್ತು ಎಂದಂತೂ ಅನ್ನಿಸುತ್ತದೆ.

ಈ ಕೀರ್ತನೆಗಳು ಅಭಿವ್ಯಕ್ತಗೊಂಡಿರುವ ಭಾಷೆ ಶಿಷ್ಟಕನ್ನಡ ಎನ್ನಬಹುದಾದರೂ ಅನೇಕ ಕಡೆ ಮುಖ್ಯವಾಗಿ ಕೃಷ್ಣಸ್ತುತಿ ಬರುವ ಸಂದರ್ಭಗಳಲ್ಲಿ ಈ ಭಾಷೆ ಬಹಳಷ್ಟು ಸಂಸ್ಕೃತಮಯವಾಗುತ್ತದೆ. ಇದಕ್ಕೆ ನಿದರ್ಶನವಾಗಿ ಮೊದಲ ಕೀರ್ತನೆಯನ್ನೇ ಗಮನಿಸ ಬಹುದು. ಹಾಗೆಯೇ ದಾಸರು ಲಲಿತವಾದ ಕನ್ನಡದಲ್ಲೂ ಸಮರ್ಥವಾಗಿ ಅಭಿವ್ಯಕ್ತಿ ನೀಡಬಲ್ಲರೆಂಬುದಕ್ಕೆ ಕೃಷ್ಣನ ಬಾಲಲೀಲೆಗಳ ವರ್ಣನೆಯನ್ನು ನೋಡಬಹುದು. ಒಂದು ಉದಾ :

ಕೆನೆಕೆನೆ ಮೊಸರನಸುದಿನ ತುಡು ತಿಂಬನು
ನಿನ ತೋಳ್ ಮೊಸರಿಲಿ ಮುಳುಗಿದೆ ಕಳ್ಳ
ಎನಲು ನಮ್ಮೆಳೆಗರು ಮುಳುಗಿದೆ ಪಡಗದಿ
ದಣಿಹುಡುಕಿದೆ ನಾ ತಿನಲಿಲ್ಲೆಂಬ

(ಕೀ. ೧೭, ನು. ೨೦)

ಇಲ್ಲಿಯ ವರ್ಣನೆಗಳಲ್ಲಿ ಉಪಮೆಗಳ ಬಳಕೆಯಲ್ಲಿ ಹೆಚ್ಚಾಗಿ ಮೂಲವನ್ನೆ ಅನು ಸರಿಸಿದ್ದರೂ ಕೆಲವೆಡೆಗಳಲ್ಲಿ ಸ್ವತಂತ್ರವಾಗಿಯೂ ಉಪಮೆಗಳನ್ನು ತಂದಿರುವುದು ಕಾಣಿಸು ತ್ತದೆ. ಉದಾ: 'ವನವಿಲ್ಲದ ಮೀನದಂತಾವು ವತ್ಸವನು ಕಾಣದಂತೆ' (ಕೀ. ೧೧, ನಂ. ೭), 'ಒರಳಿಗಿಕ್ಕಿದ ಧಾನ್ಯದಂತೆ' (ಕೀ. ೬೧, ನು. ೭) ಇತ್ಯಾದಿ. ಕೆಲವೆಡೆ ಪದಗಳ ಪ್ರಾಸ ಕ್ಕಾಗಿ, ಆಕೆಯ ಕಾಯ-ಆಕೆಯಕ್ಕಾಯ (ಕೀ. ೭. ನು. ೫), ಆಹ್ಲಾದ-ಅಹಲ್ಲಾದ (ಕೀ.

೨೧, ನಂ. ೧೧,) ಸಮಸ್ತ–ಸಮ್ಮಸ್ತ (ಕೀ. ೧೧, ನಂ. ೧) ಎಂದು ವ್ಯತ್ಯಾಸಗೊಂಡಿದ್ದರೆ; ಇನ್ನು ಕೆಲವೆಡೆ ವೃಕ್ಷರೂಪಿಲಿದ್ದನಂ–ವೃಕ್ಷರೂಪದಲಿದ್ದನು (ಕೀ. ೨೯, ನಂ. ೨), ಕೋಳಿಲಿ–ತೋಳಿನಲ್ಲಿ (ಕೀ. ೩೯, ನಂ. ೯), ಖರ್ಜೂರನಂಡನಂ-ಖರ್ಜೂರವೃಂಡನಂ (ಕೀ. ೩೧, ನಂ. ೪)–ಇಂಥ ವಿಶೇಷ ಪ್ರಯೋಗಗಳು ಕಾಣಿಸುತ್ತವೆ.

ಇಲ್ಲಿಯ ಕೀರ್ತನೆಗಳಲ್ಲಿ ಸಾಂಗತ್ಯ (ಕೀ. ೫), ಷಟ್ಪದಿ (ಕೀ. ೪), ವಿವಿಧ ವೃತ್ತ (ಕೀ. ೪೫)ಗಳನ್ನು ಬಳಸಿಕೊಂಡಿರುವಲ್ಲಿ ದಾಸರ ಪ್ರಯೋಗಶೀಲತೆಯನ್ನೂ ಪ್ರೌಢಿಮೆಯನ್ನೂ ಗುರುತಿಸಬಹುದಾದರೂ, ಇವುಗಳಲ್ಲಿ ಎಲ್ಲ ಕಡೆಯಲ್ಲೂ ಛಂದಸ್ಸು ನಿಯತವಾಗಿ ಬಂದಿಲ್ಲ. ಪಾಠ ವ್ಯತ್ಯಾಸದಿಂದ ಹೀಗಾಗಿದೆಯೆ ಎನ್ನುವುದನ್ನೂ ಏಕೈಕ ಆಕರದ ಆಧಾರದ ಮೇಲೆ ಹೇಳುವುದು ಕಷ್ಟವಾಗುತ್ತದೆ.

ಇಂಥ ಮಿತಿಗಳು ಏನೇ ಇದ್ದರೂ ಈ ಕೀರ್ತನೆಗಳ ಸೃಷ್ಟಿಯ ಹಿಂದಿನ ಉದ್ದೇಶಗಳನ್ನು ನಾವು ಮರೆಯುವಂತಿಲ್ಲ. ಇಡೀ ಭಾಗವತದಲ್ಲೇ ರಸಮಯವಾದ ಭಾಗವೆಂದು ಪ್ರಸಿದ್ಧವಾದ ದಶಮಸ್ಕಂಧ ಪೂರ್ವಾರ್ಧವನ್ನು ಕುರಿತು ರಚಿತವಾದ ಪ್ರಸನ್ನವೆಂಕಟರ ಈ ಕೀರ್ತನೆಗಳು ದಾಸಸಾಹಿತ್ಯದ ಶ್ರೀಮಂತಿಕೆಯನ್ನು ಹೆಚ್ಚಿಸಿರುವ ಕೃತಿಗಳು ಎನ್ನುವುದಂತೂ ನಿಜ. ಶ್ರೀ ವಾದಿರಾಜ ಕೃತ (?)ವೆಂದು ಅಚ್ಚಾಗಿರುವ 'ಶ್ರೀಕೃಷ್ಣ ಬಾಲಲೀಲೆ' (ಸಂ.ಲಕ್ಷ್ಮೀಕಾಂತ ಭೀ. ಮುರಗೋಡ)ಯೂ ಭಾಗವತ ದಶಮಸ್ಕಂಧ ಪೂರ್ವಾರ್ಧವನ್ನೇ ಕುರಿತು ಬಂದಿರುವ ಕೃತಿಯಾದರೂ ಸಾಹಿತ್ಯಿಕ ಅಭಿವ್ಯಕ್ತಿಯ ದೃಷ್ಟಿಯಿಂದ ಅದಕ್ಕೂ ಪ್ರಸನ್ನವೆಂಕಟರ ಈ ಕೀರ್ತನೆಗಳಿಗೂ ಅಜಗಜಾಂತರ ವ್ಯತ್ಯಾಸವಿದೆ. 'ಇವರ ಪದಗಳಲ್ಲಿ ಪದಪ್ರೌಢಿಯೂ, ಅಲಂಕಾರವೂ, ಪ್ರಾಸವೂ ಹೆಚ್ಚಾಗಿ ಕಂಡುಬರುವುದು'[1] ಎಂಬ ಅಭಿಪ್ರಾಯ ಒಪ್ಪುವಂಥದು.

"ಭಾಗವತದ ಆದ್ಯಂತವನ್ನೂ ಹಾಡಾಗಿ ವೃತ್ತವಾಗಿ ದ್ವಿಪದೆಯಾಗಿ ಸಂಪೂರ್ಣವಾಗಿ ಕನ್ನಡಿಸಿದವರು ಪ್ರಸನ್ನರಾಯರು....ಗ್ರಂಥಶೋಧಕರು ಪ್ರಸನ್ನರ ಭಾಗವತವನ್ನು ಪೂರ್ತಿಯಾಗಿ ಸಂಗ್ರಹಿಸಿ ಶೋಧಿಸಿ ಮುದ್ರಿಸಿದರೆ ಮಹಾರಾಷ್ಟ್ರದ ಏಕನಾಥ ಭಾಗವತದಂತೆ ಉಪಯುಕ್ತ ಗ್ರಂಥವಾಗುವುದರಲ್ಲಿ ಸಂಶಯವಿಲ್ಲ"[2] ಎಂಬ ಅಭಿಪ್ರಾಯವಿದೆ. ಹೀಗೆಯೇ ಪ್ರಸನ್ನವೆಂಕಟರ ಪೂರ್ವರು ಮರಿಮಕ್ಕಳಲ್ಲಿ ಒಬ್ಬರಾದ ಬಾಳಾಚಾರ್ಯರ ಪಾಲಿಗೆ ಬಂದ ಗ್ರಂಥಗಳ ಪಟ್ಟಿಯಲ್ಲಿ ಭಾಗವತ ಚತುರ್ಥಸ್ಕಂಧ ಹಾಗೂ ಭಾಗವತ ಷಷಸ್ಕಂಧಗಳ ಹೆಸರುಗಳು ಇರುವುದನ್ನು ಗಮನಿಸಿ ಶ್ರೀ ಎ. ಟಿ. ಪಾಟೀಲರು, 'ದಶಮಸ್ಕಂಧ ಭಾಗವತವನ್ನು ಕನ್ನಡದಲ್ಲಿ ಬರೆದಂತೆ ಇವುಗಳನ್ನು ಕೂಡ ಕನ್ನಡದಲ್ಲಿ ಬರೆದಿರಬಹುದೆಂದು ಊಹೆ ಮಾಡಿದರೆ ತಪ್ಪಾಗಲಾರದು'[3] ಎಂದು ಅಭಿಪ್ರಾಯಪಟ್ಟಿದ್ದಾರೆ.

---

1 ಕರ್ನಾಟಕದ ಹರಿದಾಸರು, ಎಚ್. ಕೆ. ವೇದವ್ಯಾಸಾಚಾರ್ಯ, ಪು. ೨೯೨.

2 ಶ್ರೀ ಕರ್ನಾಟಕ ಭಕ್ತವಿಜಯ (ಭಾಗ ೨). ಬೇಲೂರು ಕೇಶವದಾಸರು, ಪು. ೨೭೫.

3 ಶ್ರೀ ಪ್ರಸನ್ನವೆಂಕಟದಾಸರು ಮತ್ತು ಅವರ ಕೃತಿಗಳು. ಡಾ॥ ಎ. ಟಿ. ಪಾಟೀಲ, ಪು. ೫೪.

ಈ ಊಹೆ ನಿಜವೇ ಇದ್ದದ್ದಾದರೆ ಆ ಕೃತಿಗಳು ಇದುವರೆಗೂ ಸಿಕ್ಕದಿರುವುದು ಹರಿದಾಸ ಸಾಹಿತ್ಯಕ್ಕಾಗಿರುವ ಒಂದು ದೊಡ್ಡ ನಷ್ಟವೆಂದೇ ಎನ್ನಿಸುತ್ತದೆ.

## ಹಸ್ತಪ್ರತಿ–ಸಂಪಾದನೆ

ಪ್ರಸ್ತುತ ಕೃತಿಯನ್ನು ನಮಗೆ ದೊರೆತ ಏಕೈಕ ಮುದ್ರಿತಪ್ರತಿ (ಮು.೩೨–ದಾಸವರ್ಯ ಶ್ರೀ ಪ್ರಸನ್ನವೆಂಕಟರ ಭಾಗವತ)ಯನ್ನು ಆಧರಿಸಿ ಸಂಪಾದಿಸಲಾಗಿದೆ. ಕಾವ್ಯಪ್ರೇಮಿಯವರ ಸಂಗ್ರಹ(ಮು. ೨೧)ದಲ್ಲಿಯೂ ಇಲ್ಲಿಯ ೮ ಕೀರ್ತನೆಗಳು ಇವೆಯಾದರೂ ಅವಕ್ಕೂ ಮು. ೩೨ರ ಕೀರ್ತನೆಗಳಿಗೂ ಪಾಠಭೇದವಿಲ್ಲ. ಮು. ೩೨ನ್ನು ಶ್ರೀ ಕೌಜಲಗಿ ಬಂಡೇರಾಯರು ಹಾಗೂ ಶ್ರೀ ಕವಿಭೂಷಣ ಬೆಟಗೇರಿ ಕೃಷ್ಣರಾಯರು ಸಂಪಾದಿಸಿದ್ದು, ಕ್ರಿ. ಶ. ೧೯೨೮ರಲ್ಲಿಯೇ ಅದು ಪ್ರಕಟವಾಗಿದೆ. ಸಂಪಾದಕರು ಆ ಕೃತಿಯನ್ನು ೩–೪ ಹಸ್ತಪ್ರತಿಗಳನ್ನು ಬಳಸಿಕೊಂಡು 'ಯಥಾಮತಿ ತಿದ್ದಿ' ಸಂಪಾದಿಸಿದ್ದಾಗಿ ಹೇಳಿಕೊಂಡಿದ್ದಾರಾದರೂ, ಅದರಲ್ಲಿ ಪಾಠಾಂತರಗಳನ್ನು ಕೊಟ್ಟಿಲ್ಲ.

ಈ ಕೀರ್ತನೆಗಳ ಬೇರೆ ಹಸ್ತಪ್ರತಿಗಳು ದೊರೆಯದ ಕಾರಣ ಮು. ೩೨ರ ಪಾಠವನ್ನೇ ಬಳಸಿಕೊಂಡು ಇಲ್ಲಿಯ ಪಾಠಪರಿಷ್ಕರಣ ಕಾರ್ಯ ನಡೆದಿದೆ. ಅದರಲ್ಲಿ ಕಂಡ ಕೆಲವು ಲಿಪಿದೋಷಗಳನ್ನು (ಹ್ರಸ್ವ, ದೀರ್ಘ, ಅಲ್ಪಪ್ರಾಣ, ಮಹಾಪ್ರಾಣ-ಇಂಥವು) ಸರಿಪಡಿಸಿ ಕೊಟ್ಟಿದೆ. ಬಳಸಿರುವ ಪ್ರತಿಯ ಪಾಠ ವ್ಯತ್ಯಾಸ ಮಾಡಿಕೊಂಡಿರುವ ಕಡೆಗಳಲ್ಲಿ ಪುನರ್ರಚಿತ ಪಾಠಗಳನ್ನು ಚೌಕ ಕಂಸಗಳಲ್ಲಿಯೂ, ಮು. ೩೨ರ ಪಾಠಗಳನ್ನು ಅಡಿಟಿಪ್ಪಣಿಗಳಲ್ಲಿಯೂ ಕೊಟ್ಟಿದೆ. ಕೆಲವು ಊಹಾತ್ಮಕ ಪಾಠಗಳನ್ನು ಅವುಗಳ ಮುಂದೆಯೇ ಧುಂಡು ಕಂಸಗಳಲ್ಲಿ ಪ್ರಶ್ನಾರ್ಥಕ ಚಿಹ್ನೆಯೊಂದಿಗೆ ಸೂಚಿಸಲಾಗಿದೆ. ಇಷ್ಟಾಗಿಯೂ ಇನ್ನೂ ಕೆಲವೆಡೆ ಪಾಠ ಪರಿಷ್ಕರಣ ನಡೆಯಬೇಕಾದ್ದಿದೆ ಎನ್ನಿಸುತ್ತದೆ. ಉದಾ. ಗೆ, ಕೀ. ೧೦, ನು. ೩ ; ಕೀ. ೩೧, ನು. ೪ ಇತ್ಯಾದಿ.

ಇಲ್ಲಿಯ ಕೀರ್ತನೆಗಳಲ್ಲಿ ಬರುವ ಪುರಾಣ ಪ್ರಸಂಗಗಳನ್ನು ಅನುಬಂಧ ೧ರಲ್ಲಿ ಮೊದಲಿಗೆ ಒಂದು ಬಾರಿ ಮಾತ್ರ ವಿವರಿಸಿ, ಉಳಿದಂತೆ ಆ ವಿವರಣೆಯ ಕೆಳಗೆ ಅವೇ ಪ್ರಸಂಗಗಳು ಬರುವ ಕೀರ್ತನೆಯ ಸಂಖ್ಯೆ ಮತ್ತು ನುಡಿಸಂಖ್ಯೆಗಳನ್ನು ಸೂಚಿಸಲಾಗಿದೆ.

## ಕೃತಜ್ಞತೆಗಳು

ಈ ಕೃತಿ ಹೊರಬರುವಲ್ಲಿ ಅನೇಕರು ವಿವಿಧ ರೀತಿಯಲ್ಲಿ ನೆರವು ನೀಡಿದ್ದಾರೆ. ನಮಗೆ 'ಪ್ರಸನ್ನವೆಂಕಟರ ಭಾಗವತ'ದ ಒಂದು ಪ್ರತಿಯೂ ಸಿಕ್ಕದಿದ್ದ ಸಂದರ್ಭದಲ್ಲಿ ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಕೇಂದ್ರದ ಶ್ರೀ ಎಸ್. ಶಿವಣ್ಣನವರು ತಮ್ಮ ಒಂದು ಪ್ರತಿ ಶ್ರೀ ಎಂ. ವಿ. ಸೀತಾರಾಮಯ್ಯನವರ ಬಳಿ ಇರುವುದಾಗಿ ತಿಳಿಸಿದರು. ಅವರ ಸೂಚನೆಯ ಮೇರೆಗೆ ಶ್ರೀ ಎಂ. ವಿ. ಸೀ.ಯವರನ್ನು ಸಂಪರ್ಕಿಸಿ

ವಾಗ ಅವರು ಆ ಪ್ರತಿಯನ್ನು ಕಳುಹಿಸಿ ಉಪಕರಿಸಿದ್ದಾರೆ. ಈ ಇಬ್ಬರು ಮಹನೀಯರಿಗೂ ನಮ್ಮ ಅನಂತ ವಂದನೆಗಳು ಸಲ್ಲುತ್ತವೆ. ಸಂಪಾದನಾ ಕಾರ್ಯದ ಬಗ್ಗೆ ಆಗಾಗ ವಿಚಾರಿಸುತ್ತ ಸಲಹೆ ಸೂಚನೆಗಳನ್ನಿತ್ತ ಡಾ.ಜಿ. ವರದರಾಜರಾಯರಿಗೂ, ಡಾ. ಟಿ. ಎನ್. ನಾಗರತ್ನ ಅವರಿಗೂ. ಈ ಕೀರ್ತನೆಗಳ ರಾಗತಾಳಗಳನ್ನು ನಿಷ್ಕರ್ಷಿಸಿ ಕೊಟ್ಟ ಮೈಸೂರು ವಿಶ್ವವಿದ್ಯಾನಿಲಯದ ಲಲಿತ ಕಲೆಗಳ ಕಾಲೇಜಿನಲ್ಲಿ ರೀಡರ್ ಆಗಿರುವ ಸಂಗೀತ ಶಾಸ್ತ್ರಜ್ಞರಾದ ಶ್ರೀ ಬಿ. ಎಸ್. ವಿಜಯರಾಘವನ್ ಅವರಿಗೂ, ಹಲವು ಉಪಯುಕ್ತ ಮಾಹಿತಿ ನೀಡಿ ಉಪಕರಿಸಿದ ಶ್ರೀ ಸೀತಾರಾಮ ಜಾಗೀರ್‌ದಾರ್, ಶ್ರೀ ಎಂ. ವಿ. ವರದರಾಜನ್ ಅವರಿಗೂ, ಕರಡಚ್ಚುಗಳನ್ನು ತಿದ್ದುವಲ್ಲಿ ಸಹಕರಿಸಿದ ಶ್ರೀಮತಿ ನಗುವನಹಳ್ಳಿ ಪಿ. ರತ್ನ ಅವರಿಗೂ ನಮ್ಮ ವಂದನೆಗಳು.

ಟಿ. ಕೆ. ಇಂದುಬಾಯಿ

# ಕೀರ್ತನೆಗಳ ಕ್ರಮಸೂಚಿ


| | ಕೀರ್ತನೆಗಳ ಮೊದಲ ಪಂಕ್ತಿ | ಪುಟಸಂಖ್ಯೆ |
|---|---|---|
| ೧ | ಶ್ರೀದೇವಿಯಾಳ್ದ ಶ್ರೀ ವೇದ್ಯೈಕವೇದ್ಯ ಜಯ | ೧ |
| ೨ | ಶ್ರೋತವ್ಯವು ಇದೆ ಮಂತ್ರವ್ಯವು ಇದೆ | ೧ |
| ೩ | ಶ್ರೀ ಕೃಷ್ಣನ ಲೀಲಾವತಾರ ಧನ್ಯ | ೨ |
| ೪ | ದ್ವ್ಯಸ್ಥ ನಿವ್ಯಂಘ್ರಿರಜ ಮಸ್ತಕದಿ ಧರಿಸುತ | ೪ |
| ೫ | ಶ್ರೀವಲ್ಲಭನುದಿಸಿದಾ ಕ್ಷಣದಿ ದುರ್ಗಾ | ೬ |
| ೬ | ಅಂತರಿಕ್ಷಾದ್ಭುತ ನೋಡಿದ ಬದು | ೭ |
| ೭ | ಕೇಳಿಕೆ ಕೆಟ್ಟಳು ಪೂತನಿಯು ಹಸಿಗೆ | ೧೦ |
| ೮ | ಪುತ್ರಂಗೆ ಎರಡಾರನೆಯ ದಿನ ಗೋಪಿ | ೧೦ |
| ೯ | ರಂಗಗೆ ನಮೊ ಪಾಂಡುರಂಗಗೆ ನಮೊ | ೧೩ |
| ೧೦ | ಏತತ್ಪೂರ್ವಾದಿ ಮಧುರೆಲಿ ಮಹಾ | ೧೪ |
| ೧೧ | ಈ ತಮ್ಮನೆ ಪರಪೊಮ್ಮ | ೧೫ |
| ೧೨ | ಲಲಿತಲೀಲೆಯು ತೋರುವೆನೆಂದು ತಾ | ೧೭ |
| ೧೩ | ಕರಚರಣಂಗಳ ಸ್ಪರುಶದಿ ಗೋಪ್ಯವ | ೧೮ |
| ೧೪ | ಜೋ ಜೋ ನಂದನ್ನ ಕಂದ ಗೋವಿಂದ | ೨೦ |
| ೧೫ | ಧ್ಯಾನವಿದು ಮೌನಿಧ್ಯಾನವಿದು | ೨೦ |
| ೧೬ | ನಂದನ್ನರ್ಧಾಂಗಿಯು ಬಳಿಗೆ ಬಂದು | ೨೨ |
| ೧೭ | ತಾಳಲಾರೆವಮ್ಮಾ ಉಪಟಳವ ನಂದನ್ನರಾಣಿ | ೨೨ |
| ೧೮ | ಲೀಲೆ ಘನ ಹರಿಲೀಲೆ ಘನ ಈ | ೨೬ |
| ೧೯ | ಮೊಸರು ಕಡೆದಳಮ್ಮ ತನಯಗೆ ಹೊಸಬೆಣ್ಣೆಗಾಗಮ್ಮ | ೨೮ |
| ೨೦ | ರಂಗ ಗೋಕುಲದೊಳಗಾಡಿದ | ೨೯ |
| ೨೧ | ಸಾರಿ ಸಾರಿಗೆ ಗೋವಿಂದ ಮಹಾ | ೩೦ |
| ೨೨ | ತೊರೆದ ಮೊಲೆಯಿಂದಲಿ ಕರೆದಳು | ೩೦ |
| ೨೩ | ಪಾಹಿ ಗೋವಿಂದ ಪಾಹಿ ಮುಕುಂದ | ೩೨ |
| ೨೪ | ಹರಿ ಹರಿ ಗೋವಿಂದ ಎಳೆ | ೩೪ |
| ೨೫ | ಸ್ವರ್ಗಕೆ ಸಮ ವೃಂದಾವನವು | ೩೫ |
| ೨೬ | ಧನ್ಯ ಧನ್ಯ ಯಮುನೆ ಗೋವರ್ಧನ್ನ ಗಿರಿಪತಿ | ೩೮ |
| ೨೭ | ಶ್ರೀ ಮಾಧವ ಬಲರಾಮರ ಸಖಿ ಶ್ರೀದಾಮ | ೪೦ |

| | | |
|---|---|---|
| ೨೮ | ಕಾಳಿಯ ಫಣೆ ಮದದಲಿ ಕೃಪಾಳು ಸುಜನಾಧಾರಾ | ೪೨ |
| ೨೯ | ಕಾಲಕಾಲ ಮರಿತ ಕೋಲಾಹಲದಿಂ ಪ್ರಸಾದನಾತ್ | ೪೫ |
| ೩೦ | ನಾಕೇಶನ ಪಾಪಿ ಪ್ರಯಾಸದ | ೪೬ |
| ೩೧ | ವೃಷ್ಟಿವರ್ಷ ಕೃಷ್ಣನಿಂ ಸ್ಪೃಷ್ಟವಾದ ಗೋಷ್ಠಕೆಲ್ಲ | ೫೦ |
| ೩೨ | ವೇಣುಗೋಪಾಲನ ವೇಣು ವರ್ಣಿಪರು | ೫೩ |
| ೩೩ | ವಸಂತದ ಪ್ರಥಮ ಮಾಸದಿ ಶ್ರೀ | ೫೪ |
| ೩೪ | ವರ್ಣಿಪ ಕವಿಗಳಿಂದ ಉಪೇ: | ೫೬ |
| ೩೫ | ಮಹಾಪಾಪಹಾರಿ ಕೇಳು ರಾಮಾ | ೫೭ |
| ೩೬ | ನಿತ್ಯೋತ್ಸವ ಪುಣ್ಯಸಂಕುಲ ನಂದಗೋಕುಲ | ೫೯ |
| ೩೭ | ಹರಿಪ್ರಮದ ಗೋಪಾಲಕರು ಶ್ರೀ | ೬೦ |
| ೩೮ | ಕಾಮನಯ್ಯನ ಕಾಮಿನಿಯರ ಕಾಮುಕ ಭಕ್ತಿಯೆ ಮುಕ್ತಿ | ೬೩ |
| ೩೯ | ಶ್ರೀಕೃಷ್ಣ ಒಮ್ಮೊಂದೊಮ್ಮಿರುಳಿ ತನ್ನಾಕೃತಿಯನಡಗಿಸಿ | ೬೬ |
| ೪೦ | ಜಯಪ್ರದಕೆ ನೀ ಜನ್ಮಸಫಲವು | ೬೮ |
| ೪೧ | ಈ ಪರಿ ಗೋಪಿ ಚಮೂ ಪರಲಾಪಿಸೆ | ೭೦ |
| ೪೨ | ಕೋರಿದಾ ತನ್ನ ತೋರಿದಾ ತನ್ನ ಸಾರಿದ | ೭೧ |
| ೪೩ | ನೆನೆದರು ಹರಿಯ ಗೆಳತಿಯರು ಸ್ಮರನ ಶರದಟ್ಟುಳಿಗೆ | ೭೧ |
| ೪೪ | ಆ ಸಖಿಯರ ಸುಖಕೆ ಸರಿಯುಂಟೆ | ೭೨ |
| ೪೫ | ಪಾದನ್ಯಾಸಗಳಿಂದಾ ಭುಜಗಳ ಒಲುಪಿಂ | ೭೫ |
| ೪೬ | ರಾಸಕ್ರೀಡೆಯಲಾ ಸಖಿಗೆ ವಾಸುದೇವನ | ೭೬ |
| ೪೭ | ಗೋಷ್ಠದ ಜನರೆಲ್ಲ ಸೃಷ್ಟಿಕೋಟಿಗೆಲ್ಲ | ೮೦ |
| ೪೮ | ಅವರೇ ಸುಖಿಗಳು ಅವರೇ ಧನ್ಯರು | ೮೧ |
| ೪೯ | ಜಾಣೆ ಗೋಪೇರೊಂದುಗೂಡಿ ವೇಣುಗೋಪತಿಯ | ೮೨ |
| ೫೦ | ಕೃಷ್ಣನಾಶ್ರಿತ ಶಿಷ್ಟರೆಲ್ಲರು ತುಷ್ಟಿಲಿರಲು ಅರಿಷ್ಟನೆಂಬುವ | ೮೮ |
| ೫೧ | ಕೃಷ್ಣನಾಶ್ರಿತರಿಗ್ಯಭೀಷ್ಟ ಜಯಿಪ ಶ್ರೀ ವಿಷ್ಣು | ೮೯ |
| ೫೨ | ಹರಿಯ ಪಾದಾಬ್ಜ ಹೊಕ್ಕವರಿಗೆ ದುರಿತವ | ೯೩ |
| ೫೩ | ಸುಜ್ಞನಾರದ ತ್ರಿಕಾಲಜ್ಞ ಹೇಳಿದನು | ೯೪ |
| ೫೪ | ವಾಸುದೇವನ ಅಡಿದಾವರೆಯ ಆಶ್ರಿತ ಗೋವಳರು | ೯೬ |
| ೫೫ | ಹರಿಭಟರಿಗೆ ಲವ ಭಯವಿಲ್ಲ | ೯೭ |
| ೫೬ | ಶ್ರೀಪುರರಮಣ ಶ್ರೀ ಕೃಷ್ಣಪ್ರಿಯನಾದ ದಾನಪತಿ | ೧೦೨ |
| ೫೭ | ಬಿಂದು ಸುಖ ಪೊಗಳೆ ಹರಿಯ ಮಹಿಮೆ | ೧೧೦ |
| ೫೮ | ಶ್ರೀ ಕೃಷ್ಣಪಾದ ಸರೋರುಹ ಹೊಂದಿದ | ೧೧೬ |
| ೫೯ | ಬಿಲ್ಲಹಬ್ಬವ ನೋಡುತ್ತೈದಲು ರಾಮಕೃಷ್ಣರುಲ್ಲಾಸದಿ | ೧೧೮ |

೬೦ ಭಾಗ್ಯವನೆಣಿಸಿದರೆಣಿಕಿಲ್ಲ ಕುಬ್ಜೆಯ ಯೋಗ್ಯತೆ ೧೨೨
೬೧ ಮುಕ್ಕಣ್ಣನ ವರಧನುವನು ಕಂಸನು ೧೨೪
೬೨ ರಾಮಕೃಷ್ಣರ ದ್ರೋಹದ ಫಲ ತತ್ಕಾಲ ಒದಗಿತು ೧೨೫
೬೩ ಗಜಪಾಲ ಅಷ್ಟದಿಗ್ಗಜಪಾಲ ಗಜವದನಜನಕಪಾಲ ೧೨೭
೬೪ ಮಧುಕೈಟಭಮರ್ದನನೊಳು ಚಾಣೂರ ೧೩೦
೬೫ ಜಾತಃ ಕಂಸವಧಾರ್ಥನು ಪಾತಕಹರ ೧೩೪
೬೬ ಅಮ್ಮಮ್ಮ ಚಕ್ರಿಯ ವಿಚಿತ್ರ ಚರಿತ್ರ ೧೪೦
೬೭ ಜಯ ಜಯ ರಂಗಗೆ ಜಯ ದೇವೋತ್ತುಂಗಗೆ ೧೪೦

## ೧

**ರಾಗ : ನಾಟಿ** — **ತಾಳ : ಝಂಪೆ**

ಶ್ರೀದೇವಿಯಾಕ್ಷ ಶ್ರೀ ವೇದ್ಯೈಕವೇದ್ಯ ಜಯ
ವೇದಗರ್ಭನುತಶ್ರೀಪಾದಾಬ್ಜಯುಗ್ಮ ಜಯ
ಯಾದವಕುಲಾಬ್ಧಿಗಾಲ್ಹಾದಕರ ಚಂದ್ರ ಜಯ
ಶ್ರೀಧೇನುಗಿರೀಶ ಸನಕಾದಿ ಮುನಿವಂದ್ಯ ಜಯ ಜಯ ೧

ಭೂಸತಿಯ ಭಾರಕೆ ವಿನಾಶಕಾರಣನೆ ಜಯ
ಪೋಷಕಾಧಾರಕ ಪರೇಶ ಕೇಶವನೆ ಜಯ
ಶೇಷಶಯನ ವೈಕುಂಠನಂತಾಸನ ಜಯ
ಈಶೇಂದ್ರ ಸುರಮುನಿಪಸಂಸೇವ್ಯ ಭವ್ಯ ಜಯ ಜಯ ೨

ದಾಶರಥಿ ದಾಶಾರ್ಹ ವಾಸಿಷ್ಠಕೃಷ್ಣ ಜಯ
ಗೋಸಮೂಹದ್ವಿಜದೇವದ್ವೇಷಿಕುಲಹರಣ ಜಯ
ದಾಸ ಕಪಿವರ ಭೀಮ ಶ್ರೀಸುಖಿಮುನೀಶ ಜಯ
ಪೇಶಲಚರಿತ್ರ ಶ್ರೀಪ್ರಸನ್ವೇಂಕಟೇಶ ಜಯ ಜಯ ೩

## ೨

**ರಾಗ : ಸಾರಂಗನಾಟಿ** — **ತಾಳ : ಏಕತಾಳ**

ಶ್ರೋತವ್ಯವು ಇದೆ ಮಂತ್ರವ್ಯವು ಇದೆ ಧಾತವ್ಯವು ನಮಗೆ
ಪೂತವು ಹರಿಗುಣಗಾಥೆಯು ಮುಕುತಿಯ ಪಾಥೇಯವು ನಮಗೆ ಪ.

ಶ್ರೀಮದ್ದಶಮಸ್ಕಂಧ ಭಾಗವತ ಭೂಮಿಪ ಪರೀಕ್ಷಿತನು
ಧೀಮಜ್ಜನಗುರು ಶುಕಮುನಿಗೆ ನಮಿಸಿ ಪ್ರೇಮದಿ ಕೇಳಿದನು
ಈ ಮುಕುತಿಯ ಪಥ ಸಾಧನವು ಖಳಪಾಮರರಿಗೆ ದೂರ
ಶ್ರೀ ಮಹಾಲಕುಮಿಯ ರಮಣನ ದಾಸರ ಸ್ತೋಮಕೆ ಸೌಖ್ಯಕರ ೧

ಕರ್ಣಪುಟಗಳಿಗೆ ನೈರಂತರದಲಿ ಪೂರ್ಣಸುಧಾರಸವು
ನಿರ್ಣಾಯಕ ಶ್ರೀದಶಪ್ರಮತಿಶಾಸ್ತ್ರಾರ್ಣವಜ್ಞರ ಹಿತವು
ಚೂರ್ಣೀಕೃತ ಪಾಪಾಚಲವಜ್ರವು ಸ್ವರ್ಣ ವಿಪಗ ಕಥೆಯು
ವರ್ಣಾವರ್ಣಗಳಿಂ ಕೀರ್ತಿಪರಾಭರ್ಣ ಸುಖದ ತತಿಯು ೨

೮

ರಾಗ : ಸಾರಂಗ ತಾಳ : ಝಂಪೆ

ದ್ಯುಸ್ಥ ನಿಪ್ಪ್ಯಂಘ್ರಿರಜ ಮಸ್ತಕದಿ ಧರಿಸುತ ನಿ
ರಸ್ತಾಘರಾವು ಚಿಂತಾಗ್ರಸ್ತರಾಗಿಹೆವು ಗಡ
ಪ್ರಸ್ತುತ ವಸುಧೆಯು ಅಂತಸ್ತಾಪವಿಡಿದು ಅಸ್ವಸ್ಥಮನದಲಿ ಉಸುರಲು
ವಿಸ್ತರಿಸಬಂದೆವು ಸಮಸ್ತ ಸುರರಿಂದೀಗ
ದುಸ್ತರದ ದೈತ್ಯರುಧ್ವಸ್ತರೆಂದೆಂದಿಗು ಪ್ರ
ಶಸ್ತೋಕ್ತಿಯಿಂದಭಯ ಹಸ್ತವಂ ನೀಡೆಂದು ತ್ವತ್ ಸ್ತೋತ್ರವಂ ಮಾಳ್ಪೆವು ೧

ನೀನು ಪರವೈದ ನಿನ್ನನ್ನು ಹೊಂದಿದೆವಾವು
ನೀನೆ ನಿನ್ನಿಂದಲವತರಿಸಿ ದುಷ್ಟರ ಸದೆವೆ
ನೀನೆ ನಿನಗಾಗಿ ಸದ್ಧರ್ಮಪದ್ಧತಿದೋರ್ವೆ ನಿನ್ನ ದೆಸೆಯಿಂದೆಲ್ಲರ
ಜ್ಞಾನೋದಯವು ನಿನ್ನ ವಿಜ್ಞಾನಭಕುತಿಯನು
ನೀನಿತ್ತು ನಿನ್ನಲ್ಲಿ ವಿಶ್ವಾಸವಂ ಬಳೆಸು
ಸಾನುರಾಗದಲಿ ಪೊರೆ ಹೇ ದಾತ ಹೇ ತ್ರಾತ ಹೇ ನಾಥನೇ ನಮೋನಮೋ ೨

ಶಿಷ್ಟರೆಲ್ಲರು ಹೀಗೆ ಸಾಷ್ಟಾಂಗದಿಂ ನಮಿಸೆ
ಹೃಷ್ಟಮುಖನಾಗಿ ಶ್ರೀವಿಷ್ಣು ನುಡಿದನೆಲೆ ನಿ
ರ್ದುಷ್ಟ ಮತಿಗಳಿರ ನಾ ಕೃಷ್ಣಾಭಿದಾನದಲಿ ವೃಷ್ಣಿಕುಲವಸುದೇವನ
ಇಷ್ಟಗೃಹಿಣಿಯ ಉದರ ಶ್ರೇಷ್ಠದಿಂದುದಿಸುತಿಹೆ
ದುಷ್ಟ ದೈತ್ಯರಕುಲವ ನಷ್ಟಮಾಡುವೆ ನಿಮ್ಮ
ಇಷ್ಟ ಪೂರಣವಾಗೆ ತುಷ್ಟಿಪಡುವಳು ಭೂಮಿಯು ಕಷ್ಟ ಬಿಡಿ ಸುಖಿ
ಸಿರೆನಲು ೩

ಈ ಸುರರ ಮೊದಲೆ ಹರಿದ್ವೇಷಿ ಕಾಲ್ನೇಮಿ ಭೋ
ಜೇಶ ಮಧುರಾಪುರದಿ ತಾ ಸ್ವಕೀಯ ಯಾದವರ
ದೇಶಾಂತರಕೆ ಅಟ್ಟಿ ವಸುದೇವ ದೇವಕಿಯ ಲೇಸಾಗಿ ಮದುವೆಮಾಡೆ
ಈ ಸತಿಯ ಬಸಿರೆಂಟು ಮೋಸ ನಿನಗೆಂದು ಆ
ಕಾಶವಾಣಿಯು ನುಡಿಯಲಾಸಮಯಕಂಜಿ ಬಲು
ರೋಷದಲ್ಲಿ ದೇವಕಿಯ ಘಾಸಿಸಲು ಶೌರಿ ಪೃಥ್ವೀಶನಂ ತಿಳಿದುಳುಹಿದ ೪

ಆಗ ಕೊಲದುಳುಹಿದನು ಯೋಗಿ ನಾರದನ ನುಡಿ
ಗಾಗಂಜಿ ಪಾಪಿ ಕಾರಾಗೃಹದಿ ಬಿಗಿದಾರು
ತಾ ಘಾತಿಸಿದ ಏಳನೇ ಗರ್ಭ ನಿಲ್ಲದೆ ಪತನಾಗೆ ಖಳ ಸಂಭ್ರಮನಾದ
ಬೇಗ ದುರ್ಗೆಯು ರೋಹಿಣೀ ಗರ್ಭದಲಿ ಇಡಲು
ನಾಗೇಶನವತಾರ ಶ್ರೀಗೋಪ್ತನಾವೇಶ
ನೀಗೇಳು ತಿಂಗಳಿಗೆ ಆ ಗೋಕುಲದಲಿ ಶುಭಯೋಗದಲಿ ಜನಿಸಿದ ಗಡ ೫

ಹರಿಯಾಜ್ಞೆ ವಹಿಸಿ ತಾ ಸಿರಿದುರ್ಗೆ ಯಶೋದೆಯಳ
ವರಗರ್ಭದಲಿ ನಿಂತು ಧರೆಗಿಳಿವಳಾಬಾಲೆ
ಪುರುಷೋತ್ತಮ ದೇವಕಿಯು ಪರಮಜಠರದಿ ನಿಜೈಶ್ವರಿಯದಲಿ ಕ್ರೀಡಿಸುತಿರೆ
ಸುರರ ಸಮೂಹಕೆ ಅಮಿತ ಹರುಷವಾಯಿತು ಖಳನಿ
ಕರಕೆ ಉತ್ಪಾತ ಸಂದರುಶನವು ಫಲಪುಷ್ಪ
ಭರಿತ ತರುಲತೆಯುವನಿ ಚಿರಭದ್ರಮಯುವಾಗೆ ಕರೆದವಾವು ಕೊಡಪಾಲ್ಗಳ ೬

ದೇವರ್ಕಳೆಲ್ಲ ಪರದೇವತೆಯ ಆಜ್ಞೆಯಲಿ
ತೀವಿದ ಸಂತೋಷದಲಿ ಭೂವಲಯದಲಿ ಹುಟ್ಟಿ
ಕೋವಿದತೆ ಬೈಚಿಟ್ಟು ತಾವು ದುರ್ಬಲರಂತೆ ದೇವರಿಪುಗಳಿಗಂಜಲು
ಮಾವ ಕಂಸನ ಕೊಲುವ ಭಾವದಲಿ ತಂದೆ ವಸು
ದೇವನಂಗನೆ ತಾಯಿ ದೇವಕಿಯ ಜಠರದಲಿ
ಶ್ರೀವಾಸುದೇವಾವಿರ್ಭಾವನಾದನು ಸ್ವೇಚ್ಛೆ ಶ್ರೀವರ ನೃಸಿಂಹನಂತೆ ೭

ಶ್ರಾವಣದ ಬಹುಳಾಷ್ಟಮಿ ವಿಧುಬಿಂಬೋದಯದಿ
ದಾವ ರೋಹಿಣಿ ಕೂಡಿದವೇಳೆ ಬೊಮ್ಮಾದಿ
ದೇವರ್ಕಳಂಬರದಿ ತೀವಿ ಸ್ತೋತ್ರವ ಮಾಡೆ ಶ್ರೀ ವನಜನಯನ ಕೃಷ್ಣ
ಶ್ರೀವತ್ಸಮಣಿಕಿರೀಟ ಕೌಸ್ತುಭಕುಂಡಲವಲಯ
ಪೀವರ ಚತುರ್ಭುಜ ಗದಾವನಜಚಕ್ರಧರ
ಪ್ರಾವೃಟ್ಪಯೋದಾಂಗ ಸುವರ್ಣವಸನಾದಿದೇವನದ್ಭುತಬಾಲನು ೮

ಸಾಸಿರ ಮುಂಗುರುಳ ಮುಖ ವಾಸುದೇವನ ಕಂಡು
ಸ್ತ್ರೀಸಹಾನಕದುಂದುಭಿ ಸ್ತುತಿಸೆ ಶ್ರೀಕೃಷ್ಣ
ಶೈಶ್ವರೂಪದಿ ದ್ವಿಭುಜ ಲೇಸಾಗಿ ಮೋಹಿಸಿದ ಶ್ರೀಶ ಜನನೀಜನಕರ
ಈ ಸುತನ ಕಂಡು ಗೋಸಾಸಿರದಶತಗಳನು
ಭೂಸುರರಿಗಿತ್ತನು ಸಂತೋಷದಲಿ ವಸುದೇವ
ಭೂಸತಿಗೆ ಮಾಂಗಲ್ಯರಾಶಿ ಕೈವಶವಾಯ್ತು ಶ್ರೀಪ್ರಸನ್ವೆಂಕಟೇಶನಂದಿಸೆ ೯

ಹರಿಮುಖಿ ದೇವಕಿದೇವಿಗೆ ಕೊಟ್ಟನು
ಪ್ರಸೂತ ಸುದ್ದಿಯ ಕೇಳಿದ ಕಂಸ ೬

ಬಿಟ್ಟ ಮಂಡೆಯಲಿದ್ದ ಬಲು ಬಡಬಡಿಕೆಯ
ಕಟ್ಟುಗ್ರಕೋಪದಿ ನಿಶಿಥದಲಿ
ಹುಟ್ಟಿದ ಸ್ಥಳಕೈದಿ ಭಗಿನಿಯ ಕೈಯಿಂದ
ದುಷ್ಟನು ಸೆಳೆದನು ದುರ್ಗೆಯನು ೭

ಅಣ್ಣನ ಕಾಲ್ಪಿಡಿದಳತ್ತ ದೇವಕಿದೇವಿ
ಹೆಣ್ಣುಮಗಳು ಇದು ಪುರುಷಲ್ಲ
ಪುಣ್ಯಸಂತಾನವನುಳುಹೆಂದರೆ ಆಕಾ
ರುಣ್ಯದಿ ಕೊಲಲಿಕ್ಕೆ ಅನುವಾದ ೮

ಜಗಜ್ಜನನಿಯು ಕಾಲ್ಪಿಡಿದಪ್ಪಳಿಸಲು
ಮುಗಿಲಿಗೆ ಹಾರಿದಳು ನಗೆಮೊಗದಿ
ವಿಗಡ ಕಂಸನು ಬೆದರಿದ ಪದವಿಗಿಲಲಿ
ಖಗಗಮ ಪ್ರಸನ್ವೆಂಕಟನಿಯಮದಿ ೯

೩

ರಾಗ : ತೆಲುಗು ಕಾಂಬೋಧಿ ತಾಳ : ಅಟ್ಟ

ಅಂತರಿಕ್ಷದಲ್ಲಿತ್ತ ನೋಡಿದ ಬಹು
ಕಾಂತಿಮೈಯುಳ್ಳ ಕಂಡು ಬಾಡಿದ ಪ.

ಕಾಂತೆ ಮಾತಾಡಿದಳವನೊಳು ಈ
ಭ್ರಾಂತಿಯು ನಿನಗ್ಯಾಕೆಂದಳು ಅ. ಪ.

ಕಂಸಕೇಳಪರಾಧಿ ನಾನಲ್ಲ ನನ್ನ
ಹಿಂಸೆ ನಿನಗೆ ಶಕ್ಯ ತಾನಲ್ಲ
ಹಂಸನೊಬ್ಬನ್ಯತ್ರ ಇಹನು ನಿನ್ನ
ಧ್ವಂಸಕ್ಕೆ ಕಾರಣನವನು ೧

ಬ್ರಹ್ಮಾದಿವಂದ್ಯಳು ಕನ್ಯಳು ಆ
ಹಮ್ಮಿನ ಖಳಗಿಂತೆಂದಳು

ಮಹಜ್ಞಾನದಲಿ ಚಿಂತೆ ಬಿಟ್ಟನು ಬಂಧ
ನವಿಮೋಚನವ ಮಾಡಿಬಿಟ್ಟನು ೨

ವ್ಯರ್ಥ ನಿಮ್ಮಿಬ್ಬರ ನೋಯಿಸಿದೆ ಶಿಶು
ಹತ್ಯಕೆ ಕಾರಣನೆನಿಸಿದ
ಪ್ರಾರ್ಥನೆ ಮಾಡುವೆ ಕ್ಷಮಿಸೆಂದು ಸ
ಮರ್ಥ ಸುಶೀಲರು ನೀವೆಂದು ೩

ಶೌರಿ ನುಡಿದನು ಜೀವಾತ್ಮಕೆ ನೀ
ಕಾರಣನಲ್ಲೊ ಸುಖದುಃಖಕೆ
ಪ್ರೇರಕ ನಿಯಾಮಕ ಹರಿತಾನು ಸೃ
ಷ್ಟಾರ ಪಾತಾರ ಹಂತಾರನು ೪

ಕೋಪವ ಬಿಡದು ಮನೆಗೆ ಬಂದು ಪಶ್ಚಾ
ತ್ತಾಪದಿ ಕಳೆದ ಯಾಮವನೊಂದು
ತಾ ಪುನರಪಿ ಪಾಪಕ್ಕೆಳಸಿದ ದುಷ್ಟ
ಪಾಪಾತ್ಮ ಮಂತ್ರಿಗಳ್ಕರೆಸಿದ ೫

ಮೊದಲಂತೆ ದುರ್ಗೆ ಬಾಲಿಕೆಯಾಗಿ ತಾಯಿ
ಬದಿ ಮಲಗಿದಳು ಹಾಸಿಕೆಹೊಂದಿ
ಮುದವನಿತ್ತಳು ತಾಯಿ ತಂದೆಗೆ ಶ್ರೀ
ಯದುಕುಲೇಂದ್ರನ ಪ್ರಿಯಳೆಂದಿಗೆ ೬

ಕನ್ಯಳ ಮಾತು ಮಂತ್ರಿಗಳಿಗೆ ಕಂಸ
ಚೆನ್ನಾಗಿ ಪೇಳೆ ಪಾಪಿಗಳಿಗೆ
ಚೆನ್ನರ ಹಿಂಸೆಗೆ ನಡೆದರು ದೈತ್ಯ
ಮನ್ನೆರು ಹಿಂಸಾಕ್ರೀಡಾಪರರು ೭

ನಂದವ್ರಜದಿ ನಂದನರಾಣಿ ನಿದ್ರೆ
ಹೊಂದಿರೆ ಸುತನ ಪಡೆದ ವಾಣಿ
ಅಂದಿನ ರಾತ್ರಿಲಿ ಕೇಳ್ದರು ಆ
ನಂದಾಬ್ಧಿಯಲಿ ಓಲಾಡಿದರು ೮

ಆನಂದಸಾಂದ್ರಾಪ್ರಮೇಯನು ಚತು
ರಾನನ ಹರನ ಸೃಷ್ಟಾರನು

ಆ ನಂದನು ಯಶೋದೆಯು ತಮ್ಮ ಕೈ
ಸೂನುಯೆಂದರು ನೋಡಿ ಅಮ್ಮಮ್ಮ ೯

ದೈವಜ್ಞರು ನೆರೆಕೊಂಡರು ಪರ
ದೈವ ಬಾಲಕನೆಂದು ಕಂಡರು
ದೇವೇಶ್ವರಗೆ ಜಾತಕರ್ಮವ ಮಾಡಿದ
ರು ವಿಶ್ವಕರ್ಮಜ್ಞ ಮಾಧವಗೆ ೧೦

ಮಹೋತ್ಸವದಿ ನಂದಗೋಪನು ಅಮಿತ
ಗೋವು ಹಿರಣ್ಯರತ್ನಗಳನ್ನು
ಸುವಸ್ತ್ರ ಅನ್ನ ಭೂದಾನವ ಭೂ
ದೇವರಿಗಿತ್ತನು ನಿಧಾನವ ೧೧

ಸುಪ್ರಭಾತವಲಿ ಒಪ್ಪಿದ ಬಾಲಸೂ
ರ್ಯ ಪ್ರಭಾನಂತನಂತರ ಚೆಲ್ವ
ಸುಪ್ರೀತಿಕಾರಣನು ಜನಕೆ ದೈ
ತ್ಯಪ್ರಾಣಹರಣನು ತ್ರಿಭುವನಕೆ ೧೨

ಸಿಂಗರಿಸಿದರ್ಗೋಪರ್ಗೋಗಳು ಗೋ
ಪಾಂಗನೇರ್ಮಂಗಳ ಸ್ವನಗಳು
ರಂಗಪೂರ್ಣೇಂದೂದಯವಾಯ್ತು ಅಂತ
ರಂಗ ತೋಷಾಬ್ಧಿಲಿ ಉಬ್ಬಿತು ೧೩

ಪಂಕಜನೇತ್ರೇರು ಗೋಪೇರು ವಸ್ತ್ರಾ
ಲಂಕಾರವಿಟ್ಟರು ನಲಿದರು
ಕುಂಕುಮರಸದೋಕುಳಿಯಾಟ ಶ್ರೀ
ಪಂಕಜನಾಭ ಹುಟ್ಟಿದ ಮಾಟ ೧೪

ಪ್ರತ್ಯಬ್ದಕೀವ ಕಪ್ಪವಕೊಂಡು ನಂದ
ಪೃಥ್ವೀಪತಿ ಕಂಸನ ಕಂಡು
ಅರ್ಥವನವನಿಗೊಪ್ಪಿಸಿದನು ತನ್ನ
ಭ್ರಾತೃ ವಸುದೇವನ ಕಂಡನು ೧೫

ಯಮುನಿಂದ ಬಂದು ಕಪ್ಪವ ತಂದುಕೊಟ್ಟು
ಗಮನಕುಜ್ಜುಗಿಸೆ ಶೂರಜನಂದು

ಅಮಿತೋತ್ಪಾತವ ವೃಂದಾವನಕೆಂದ ಕೇಳಿ
ಯಮುನಾ ತಂಗಿಯು ತೀರಕೆ ಬಂದ ೧೬

ಅಷ್ಟಕ್ಕೆ ಮೊದಲೆ ಕಂಸನ ಧಾತ್ರಿದೇವ
ಕನ್ನಿಕೆಯಂತೆ ಸೋಗಿನ ಗಾತ್ರೆ
ಚಿನ್ನ ಪುರುಷೋತ್ತಮನಿದ್ದಲ್ಲಿಗೆ ನಂ
ದನ್ನ ವಸ್ತುವ ಗೃಹ ಪೊಕ್ಕಾಗೆ ೧೭

ಶಿಶುರೂಪ ಹರಿಯ ಮಾಯವಳಾಗೆ ತಾಯಿ
ಯಶೋದೆಗೆ ನಿದ್ರೆಯು ಕವಿದಾಗೆ
ವಿಷಮುರಕ್ಕಪಿ ಮೊಲೆಗೊಟ್ಟಳು ಆಕೆ
ಯಸು ಸಹ ಹೀರಿದ ತೃಟಿಯೊಳು ೧೮

ವೃತ್ತಕಾವಳು ಸಾರ್ಧಯೋಜನವನು
ಕ್ಷಿತಿಯನ್ನು ವ್ಯಾಪಿಸೆ ವ್ರಜಜನ
ಅತಿಯಾಶ್ಚರ್ಯಪಡಲಾಗೆ ಗೋ
ಪತಿ ಬಂದು ಕಂಡ ಬೃಹದ್ವನವಾಗೆ ೧೯

ತ್ರೈಕಾಲದರ್ಶಿ ನವ್ಯಾಗ್ನನು ಅ
ನೇಕ ಉತ್ಪಾತವ ಪೇಳ್ದನು
ನಾ ಕಂಡೆ ಪ್ರಸನ್ನವೆಂಕಟೇಶನ ಲೀ
ಲಾಕೌತುಕವೆಂದ ನಂದನು ೨೦

## ೨

**ರಾಗ : ಗಾಂಧಾರಿ** **ತಾಳ : ಅಟ್ಟ**

ಕೇಳಿರಿ ಕೆಟ್ಟಳು ಪೂತನಿಯು ಹರಿಗೆ
ಸ್ತನವ ಕೊಟ್ಟು ಕೊಂದನು ಪರಾಕೆಯಿಂದ ಪ.

ವನಜಭವಾಂಡ ನುಂಗುವನ ಮೃದ್
ವನಜದಿ ಮುನಿಗಳಿಗೊಪ್ಪಿದ ತೋರುವನ
ನೆನೆವರಘಕುಲದರನ ಭಗವ
ಜ್ಜನರು ಸಜ್ಜನರಿಗೆ ಸುಲಭನೆನಿಪನ ೧

ಶ್ರೀಲೋಲನವಳಿವಮೋರೆ ಬಾಲ
ಲೀಲೆಯ ತೋರ್ದನ ಇಕ್ಕಿದನು ಚಪ್ಪಾಳೆ
ಶೈಲೇಂದ್ರನಂತೆ ಬಿದ್ದವಳ ಕಂಡು
ಗೋಳಿಟ್ಟಿತಾಗ ಗೋಪಾಲರ ದಂಳ ೨

ಎತ್ತಿಕೊಂಡಪ್ಪಿದಳು ಮಗನ ಗೋಪ
ಕರ್ತ ಸೋಜಿಗವೆಂದಾತ್ಮಾತ ಗೆಲಿದನ
ಪುತ್ರಂಗೆ ಗವ್ಯಾಮೃತದಲಿ ಸಾದೆ
ಸುತ್ತ ಗೋಮಯರಪಾಂಸು ಇಟ್ಟು ಪಣೆಯಲಿ ೩

ಸತ್ಪಾತ್ರರಿಗೆ ಸರ್ವಸ್ವವನು ಕೊಟ್ಟು
ಸೂಕ್ತಗಳಿಂದಾಶೀರ್ವೋಕ್ತಿ ಪಡೆದನು
ಮುಕ್ತಾಮುಕ್ತರ ಒಡೆಯನಿಗೆ ಯೋಗಿ
ಹೃತ್ಪೀಠದಲ್ಲಿ ರಾಜಿಸುವ ಮಹಿಮಗೆ ೪

ರಕ್ಷಿಸಿಗ್ನಿಯ ಕೊಡಲು ಆಕೆ
ಯಕ್ಷ್ಯಾಯ ಧೂಮಾಮೋದವಾಗಿರಲು
ಚಿಕ್ಕ ರಂಗನ ಬಾಯಿ ಮುಟ್ಟಿ ಇ
ದಕ್ಕಾರಣ ಪ್ರಸನ್ವೆಂಕಟನ ಸೃಷ್ಟಿ ೫

೮

**ರಾಗ : ಮೋಹನ ಕಲ್ಯಾಣಿ** **ತಾಳ : ಅಟ್ಟ**

ಪುತ್ರಂಗೆ ಪರಡಾರನೆಯ ದಿನ ಗೋಪಿ
ಮುತ್ತೈದೆಯರ ಕರೆದಳಾದಿನ ಪ.

ಮಿತ್ರೇಂದುಕೋಟಿಕಳಾತ್ಮಗೆ ಮೃಗ
ನೇತ್ರೇರಲಂಕರಿಸಿದರಾಗೆ ಅ. ಪ.

ಮುದ್ದುಮೋರೆಯ ಮುಂಗುರುಳಾಳಿಯ ಪ
ತ್ಪದ್ಮರಾಗದ ಅರಳೆಲೆಯ
ಮದ್ದಿಕಾಯಿ ಮಕರ ಕುಂಡಲಕರ್ಣ ಸ್ನೇಹ
ದೊದ್ದಿದ ಕರ್ಣ ಕಾಡಿಗೆಗಣ್ಣ ೧

ಸುಧೆಯ ಸೂಸುವನಾಗಿ ಕೂಸಿಗೆ ರತ್ನ
ಪದಕ ಹಾರಗಳೊಪ್ಪೆ ಶ್ರೀಶಗೆ
ಚಮರೀರಿಟ್ಟರು ತಮ್ಮ ಮನೋಹರ ಅಂ
ಗವ ಹುಲಿಯುಗುರು ಮುತ್ತಿನಸರ ೨

ಕೊರಳ ಕೌಸ್ತುಭ ಮುಂಗೈ ಮುರಿಗೆಯ ಸಣ್ಣ
ಬೆರಳುಂಗುರದ ಮುರಾರಿಯ
ಕಿರಿಗಂಟೆ ಉಡುದಾರ ಬುಲ್ಲಿಕಾಯಿಯ ಶ್ರೀ
ಚರಣದಂದುಗೆ ಗೆಜ್ಜೆಕಾಯಿಯ ೩

ತರಳನಪ್ಪಿಕೊಂಡರು ತರಳೆಯರು ನೀಲ
ಮರಿಬಂಡುಣಿಯ ಕುರುಳೆಯರು
ಹರಿಯ ಹರಿಮಣೆ ತೊಟ್ಟಿಲಲಿಟ್ಟರು ಬಲು
ಹರುಷವಾರ್ಧಿಲಿ ಜೋಗುಳಿಟ್ಟರು ೪

ಜೋಜೋ ಝಷಕುಲೋತ್ತರ ಕಮಠ ಜೋಜೋ
ಜೋಜೋ ಜಲಧಿ ಮಂಥನ ಕೂರ್ಮ
ಜೋಜೋ ವಸುಧೆ ಸ್ಥಾಪಕ ಕೋಲ ಜೋಜೋ
ಜೋಜೋ ಖಳವಿದಾರಣ ಶೀಲ ೫

ಜೋಜೋ ಬಲಿವಿದಾರಕ ಭ್ರಾತ ಜೋಜೋ
ಜೋಜೋ ಸುರಭಿ ಭೂಸುರನಾಥ
ಜೋಜೋ ವನಚರಾನ್ವಯಚರ ಜೋಜೋ
ಜೋಜೋ ನವನೀತದ ಚೋರ ೬

ಜೋಜೋ ಜಿತವಿಳ ಪತಿವ್ರತ ಜೋಜೋ
ಜೋಜೋ ಮತಿಹೀನ ಕಲಿಹರ್ತ
ಜೋಜೋ ದ್ರುಹಿಣ ಶಂಕರ ಗೋಪ್ತ ಜೋಜೋ
ಜೋಜೋ ನಿಖಿಳ ಭುವನ ವ್ಯಾಪ್ತ ಜೋಜೋ ೭

ಮದಿರ ನಯನೆಯರು ಹಾಡಿದರ್ಜೋಗೆ ಅತಿ
ಮೃದು ಸ್ವನದಿಂದೆ ಒಪ್ಪಿದರಾಗೆ
ಯದುಕುಲದರಸಂಗೆ ಹಸುಳರಿಗೆ ವಿ
ಶ್ವದಲಿ ಪೂರಣೆಂಟನೆಯರಸಂಗೆ ೮

ಮಂಗಳ ಸಾಮಂಗಳಿಟ್ಟಿರು ಶ್ರೀ
ಮಂಗಳಾಕ್ಷತೆಯ ಹಣೆಗಿಟ್ಟರು
ಮಂಗಳಾರತಿಯ ಬೆಳಗಿದರು ಗೋ
ಪಾಂಗನೆಯರು ಬಾಗಿನ ಹಿಡಿದರು ೯

ಅಂದಿನ ಭಾಗ್ಯಕ್ಕೆ ಎಣೆಯಿಲ್ಲ ಶ್ರೀ
ಮಂದರಧರವಿಷ್ಣು ಗೋಪಾಲ
ನಂದನೆನಿಸಿಕೊಂಡ ಶ್ರೀಪಾಲ ನಿತ್ಯಾ
ನಂದ ಪ್ರಸನ್ವೆಂಕಟ ನಿಜಲೀಲ ೧೦

೯

ರಾಗ–ಶಂಕರಾಭರಣ ತಾಳ–ಅಟ್ಟ

ರಂಗಗೆ ನಮೊ ಪಾಂಡುರಂಗಗೆ ನಮೊ ಪ.

ರಂಗಗೆ ನಾಲ್ಕನೆಯ ತಿಂಗಳೊಳು ಜನ್ಮ ಋಕ್ಷ
ಸಂಗವಾದ ದಿವಸ ಬಹಿರ್ನಿಷ್ಕ್ರಮಣವು
ಅಂಗನೆ ಗೋಪೆಮ್ಮ ತನ್ನ ಸಿಂಗನ ಕೂಡಿ ಮಿಂದಳು
ಮಂಗಳಾರ್ತಿ ಬೆಳಗಿದರಂಗನೇರೆಲ್ಲ ೧

ಬಹಳನ್ನಪಾನವಸನ ಮಹೀಸುರರಿಗೆ ಇತ್ತು
ಬಹು ಪುಣ್ಯ ಗುಣಶೀಲ ನಂದಗೋಪಾಲ
ಅಹಸ್ಯನುದಯದಲ್ಲಿ ಮಹೋತ್ಸವ ಕಾಳಿಂದಿಯಲ್ಲಿ
ಅಹಿಶಯನ ಶಕಟದ ನೆಳಲಿನಲ್ಲಿ ೨

ಮಲಗಿರೆ ಕಂಸಭೃತ್ಯರೊಳಂ ಶಕಟಾಖ್ಯ ದೈತ್ಯ
ಒಳಪೊಕ್ಕು ಬಂಡಿಯ ತಳದಲಾತನ
ಕೊಲುವೆನೆಂಬನಕಾಂಕ್ಷ್ರಿ ತಳದಲವನ ಒದ್ದ ಬಾಲ
ಕುಳುಕುಳಿಸಿ ಶಕಟವು ಭಗ್ನವಾಗಿರೆ ೩

ಬಂಡಿಗಾಲಿ ವ್ಯಸ್ತವಾದವು ತುಂಡು ತುಂಡಾದವು ಕಾಷ್ಟ
ಕಂಡರು ಜನರು ಆಶ್ಚರ್ಯಕಾರ್ಯವ
ಪಾಂಡುರಂಗನೆಳೆಯ ಪಾದ ಬಂಡಿಯ ಖಂಡಿಪುದುಂಟೆ ಉ
ದ್ದಂಡ ಮೃತ್ಯು ಗೆದ್ದನೆಂದ ನಂದದಿ ನಂದ ೪

ಪ್ರಾರ್ಥನೆಯನು ಕೇಳಿದ ಶ್ರೀ ವಿಭುವು ಸಾ
ಸಿರಿಯೊಡನವತಾರ ಗುಣಸಾಂದ್ರ
ಪರ ಶಕ್ತಿಗಾದೇಶವನು ಗರ್ಭ ನಿತ್ತ
ವರುಷದಿ ಬಸಿರಿದ್ದರು ಗರ್ಭ ೪

ರೋಹಿಣಿ ದೇವಕಿ ವಸುದೇವ ಮುನ್ನ
ಮಹಾ ತಪವ ಮಾಡೆ ವಾಸುದೇವ
ಶ್ರೀಪತಿ ಪ್ರಸನ್ನವೆಂಕಟ ಕೃಷ್ಣ ಸೇವೆ
ಗೈ ಹಿರಿಯನು ದ್ವಿತೀಯಾಂಗೇಷ್ಟ (?) ೫

## ೧೧

ರಾಗ : ತೆಲುಗುಕಾಂಭೋಧಿ ತಾಳ : ಅಟ್ಟ

ಈ ತಮ್ಮನೆ ಪರಬೊಮ್ಮ
ಈ ತಮ್ಮನ ಮಗನೀವ ಬೊಮ್ಮ ಪ.

ಒಮ್ಮನೊಮ್ಮ ಅವ್ಯಯಾನಂತಾಕಳಿಸಿದ
ರಮ್ಯ ವದನದಿ ಕಂಡಳು ತಾಯಶೋದೆ
ಸಮಸ್ತ ಭುವನ ಕಂಡಳಾಶ್ಚರ್ಯ
ಬೊಮ್ಮಾಂಡದೊಳಗಣ ಹೊರಗಣ ಸ್ಥಿತಿಯ ೧

ಬ್ರಹ್ಮೇಶೇಂದ್ರ ರವಿಮುಖ್ಯ ನಿರ್ಜರರ
ಸಮುದ್ರಕಧಿಕ ದ್ವೀಪಗಳ ವಿಸ್ತಾರ
ತಮ್ಮಾನಂದಮಯ ಸ್ವರೂಪವನು
ರಮ್ಯೆಯರಸ ತಾಯಿಗೆ ತೋರಿದನು ೨

ಅಮ್ಮ ಕಣ್ಮುಚ್ಚಿ ಬೆದರಿದಳು ತಾನು
ತಾ ಮತ್ತೆ ಬಚ್ಚಿಟ್ಟನು ಪ್ರಪಂಚವನು
ಅಮ್ಮಾ ಅನ್ಯರೆಂದು ಮಾಯದಳಿದನು
ಸುಮ್ಮನನರನಾಳ್ವ ಸರ್ವಜ್ಞ ತಾನು ೩

ಮಗನ ಮಾಯದಿ ಮೋಹಿಸಿದಳು ಗೋಪಮ್ಮ
ಮಗುವೆ ಬಾಯೆಂದು ಲಾಲಿಸಿದಳಮ್ಮಮ್ಮ

ಜಗದೀಶ್ವರನ ತನ್ನ ತೊಡೆಯ ಮೇಲಿಟ್ಟು
ಬಗೆ ಬಗೆಯಾಡಿಸಿದಳು ಮುದವಟ್ಟು ೪

ತಾಯಿಯು ತೊಡೆಯ ಮೇಲಾಡುವ ಪಸುಳೆ
ಶೈಲಕೂಟದ ಭಾರದಂತಾಗೆ ಆಬಲೆ
ಆಯಾಸದಿಂದಿಳಿಗಿಳುಹಿವಳಾಕೆ
ವಾಯು ಚಕ್ರೋತ್ಪಾತವು ಬರಲಿಕ್ಕೆ ೫

ಏನಾಯಿತು ಮಗನೆನುತಂಜುತಿರಲು
ಶ್ರೀನಾಥಗಳಕಿಲ್ಲ ಕುಳಿತ ಜಡದೊಳು
ಹೀನ ತೃಣಾವರ್ತನವ ಕಂಸಭೃತ್ಯ
ತಾನೆತ್ತಿ ಒಯ್ದನು ಅಣುಗನಾ ದೈತ್ಯ ೬

ಘನಚಕ್ರವಾತದೊಳವನಂಜಿಸುತ
ತನಯನ ಒಯ್ದಿರಲಂಜುತ ಅಳುತ
ವನವಿಲ್ಲದ ಮೀನದಂತಾವು ಪತ್ನಿ
ಮನು ಕಾಣದಂತೆ ಮರುಗಿದಳತ್ಯಂತ ೭

ಖಳಗಂತರಿಕ್ಷದಿ ಮಾಡಿದ ಶಿಕ್ಷಾ
ಇಳೆಯ ಮೃತ್ಯಲಿ ಕೆಡವ್ಯಾತನ ಪಕ್ಷ
ಮಲಿ ಆಡುತಿದ್ದನಿರುದ್ಧಾಂಬುಜಾಕ್ಷ ಆ
ಜಲದಂತೆ ಬಿದ್ದನು ಖಂಕ್ಷಾಂಕ ರಕ್ಷಾ ೮

ಹಿಂಡು ಗೋಪರು ಇವ ಕಂಡಾಶ್ಚರಿಯದಿ
ಪುಂಡರೀಕಾಕ್ಷನ ಕೊಂಡಾಡಿ ಸುಖಿದಿ
ಗಂಡಹೆಂಡಿರು ಮಗನಪ್ಪಿದರಾಗ ಉ
ದ್ದಂಡ ಉತ್ಪಾತ ಗೆಲಿದನು ರಂಗ ೯

ಅಹೋ ಪಾಪಿಯಿಂದು ಹತನಾದನೆಂದು
ಮಹಾ ವಿಸ್ಮಯೆಂದು ವ್ರಜಾಂತಸ್ಥರಂದು
ಬಹು ಪುಣ್ಯ ನಂದಯಶೋದೆಯರೆಂದು
ಆಹ್ಲಾದವಾರ್ಧಿಲೋಲಾಡಿದರಂದು ೧೦

ಸೃಷ್ಟ್ಯಾದಿಕಾರಣಗಚ್ಚರಿಯಿಲ್ಲ
ಶಿಷ್ಟಜನ ಪ್ರತಿಪಾಲ ಶ್ರೀನಲ್ಲ

ದುಷ್ಟಕುಲಾಂತಕ ಪ್ರಸನ್ವೆಂಕಟಲೀಲ ವಿ
ಶಿಷ್ಟಾನಂದ ಸಮುದ್ರಕಲ್ಲೋಲ ೧೦

## ೧೨

ರಾಗ : ಮ್ಲೇಚ್ಛಭೌಳಿ — ತಾಳ : ಏಕತಾಳ

ಲಲಿತಲೀಲೆಯ ತೋರುವೆನೆಂದು ತಾ
ಬಲನಿಂದ ಕೂಡಿ ಭರತಬಂಧು
ಬೆಳೆವಂತೆ ತೋರಿ ಗೋಕುಲದೊಳಗೆ
ಎಳೆ ಗೆಳೆಯರಿಂದದ ಬಲುಬ್ಯಾಗೆ ೧

ನವನೀತಸಾರನಾದವ ಚೋರ
ನವಯುವತಿಯರಿಗೆ ಮನೋಹರ
ಅವರವರ್ಯೋಗ್ಯತೆಯನುಸಾರ
ಸವಿದೋರಿದಾ ನಂದಕುಮಾರ ೨

ಕೆಲವು ಗೋಪಿಯರತಿ ಮುದ್ದಿಪರು
ಕೆಲವು ಗೋಪಿಯರೊಮ್ಮೆ ಕ್ರುದ್ಧಿಪರು
ಬೆಳದಿಂಗಳ ನೀಲ ಮೈಯವರು
ಚೆಲುವಿಕೆಯಲಿ ಥಳಥಳಿಸುವರು ೩

ವೀರ ಯಾದವರ ಪುರೋಹಿತನು
ಶೌರಿ ಕಳುಹಲಲ್ಲಿಗಾಗಾತನು
ಧೀರ ಮುನೀಂದ್ರ ಗರ್ಗನುಭಯರಿಗೆ ಕ್ಷ
ತ್ರೀರ ಸಂಸ್ಕಾರ ಮಾಡಿದನಾಗೆ ೪

ನಿನ್ನ ಮಗನು ಸಾಕ್ಷಾದ್ವಿಷ್ಣು
ನಿನ್ನ ಪುಣ್ಯಫಲತಾಯಿಷ್ಟು
ನಿನ್ನ ಮಗನೆಂಬುವ ಮೋಹವ ಬಿಡು
ಧನ್ಯನಾದೆ ಗೋಪತಿ ಕೇಳು ೫

ಈತ ಶೂರಜ ದೇವಕಿಜಾತ ಆ
ಜಾತಗೆ ಜಾತನೆಂಬುದು ಮಿಥ್ಯ

ಈತನಿಂದ ಸರ್ವಭೂತಕೆ ಸೃಷ್ಟಿ
ಈತನೆ ಭುವನವ್ಯಾಪ್ತನು ಗಟ್ಟಿ ೭

ಈತನಾರಾಧಿಪರ್ಬ್ರಹ್ಮಾದಿಕರು
ಈತ ಪ್ರಸನ್ವೆಂಕಟ ಜಗದ್ಗುರು
ಈ ತೆರ ಉಪದೇಶಿಸಿ ನಡೆದ
ಆತುರದಲಿ ತನ್ನ ಸ್ಥಾನಕೆ ಹೋದ ೮

## ೧೩

ರಾಗ : ಮೋಹನಕಲ್ಯಾಣ ತಾಳ : ಏಕತಾಳ

ಕರಚರಣಂಗಳ ಸ್ಪರುಶದಿ ಗೋಷ್ಠದ ಪರಮಪವಿತ್ರದ ಮಾಡಿ
ಚರಿಸಿದರು ನಲಿನಲಿದಾಡಿ ಶ್ರೀ ಹರಿಬಲರೀರ್ವರು ಕೂಡಿ
ಪರಿಪರಿದ್ಯವಿ ಕೆಸರಿನಲಿ ಚಿಲಿಪಿಲಿ ಬರಿಮೈಯ್ಯರ್ಭಕರ ನೋಡಿ ೧

ಅಕಟಕಟೆನ್ನುತ ಸಖಿ ರೋಹಿಣಿ ಗೋಪಿಕುಮಾರರನಪ್ಪುವಳು ಬಾ
ಲಕರ ಸೆರಗಿಲೊರಸುವರು ಅವರ್ಮುಖವ ನೋಡಿ ನಗುತಿಹರು
ಸುಖಪೂರ್ಣರು ಜನನಿಯರಾಗ್ರದಿ ತಾವ್ ಕಳಕಳ ನಗುತಿಹರು ೨

ಹರಿ ತಾಯ್ ನಿರಿಯಲಿ ಹರುಷದಿ ನಿಂದು ಚಪ್ಪರಿದಮ್ಮಿಯನುಂಬುವನು ತನ್ನ
ಕಿರಿನಗೆ ಜೊಲ್ಲಾಯುಯುನು ಬಾಯ್ದೆರೆಯೆನೆ ಪಲ್ದೋರುವನು
ಪರಮಪುರುಷ ಪೆತ್ತರಿಗುಪಕರಿಸುತ ಚಿರಸುಖವಂ ಬೀರುವನು ೩

ತನಯರ ಉಲುಹಿಲಿ ಮನೆಗೆಲಸಂಗಳು ಇನಿತು ನಡೆಯಲಿಲ್ಲಾಗ ಆ
ಜನನೀರು ಮೋಹಿಪರಾಗ ತಮ್ಮ ದಿನ ತಕ್ಕಾಟದಲೀಗ
ಅಣುಅಣು ಕರಿಶಾವಕದಂದದಿ ರಿಂಖಣವಿಡುವರ್ ಬ್ಯಾಗ ಬ್ಯಾಗ ೪

ಇರುಕಳುಪಶು ನೀರುರಿಗಂಜರು ಕ್ಷಣ ಕ್ಷಣಕ್ಹರಿದಾಡುವರಲ್ಲಿ ಆಸಿ
ಯರು ಹಿಡಿಹಿಡಿ ತಹರಲ್ಲಿ ತಾಯರಿಗೊಪ್ಪಿಪರು ನಗುತಲಿ ಎಳೆ
ಗರುಗಳ ಬಾಲವ ಜಿಗಿಜಿಗಿದೆಳೆವರು ನಡೆವರು ಅರ್ಥಿಯಲಿ ೫

ಪುಚ್ಛವಿಡಿಯೆ ಬೆದರ್ವತ್ಸಗಳೋಡಲು ಅಚ್ಯುತ ಕೂಗಿ ಅಂಜುವನು ಜನ
ಕಷ್ಟರಿಯುವ ತೋರುವನು ತಾ ಸ್ವೇಚ್ಛೈಕಲೀಲಾನ್ವಿತನು
ಒಚ್ಚರೆಗಂಗಳ್ಯಶೋದೆಯು ಬಿಗಿದಪ್ಪಿ ಬೆಚ್ಚಿದಂತಿಹ ಕೇಶವನು ೬

ಸರಿಯ ತರಳರೊಳು ಹಿರಿಯಗ್ರಜನೊಳು ಪರಿಪರಿ ಕ್ರೀಡೆಯನಾಡೆ ಅಕ್ಷಿ
ಹರಿಣಾಕ್ಷಿಯರ್ಗಳು ನೋಡೆ ಘನ ಹರುಷದಿ ರಂಗನ ಕೂಡೆ
ಸರಸವನಾಡಿ ಸೋದರ ಮಾವನಣುಗರು ಉರುಸುಖವಾರ್ಧಿಲೀನಾದೆ ೭

ತನುಮನ ಸೂರೆಯ ಕ್ಷಣಕ್ಷಣಕಿತ್ತರು ವನಜನಾಭನ ಪವರತರು ಆ
ಮನಸಿಜ ಮಾರ್ಗಣಹತರು ಮತ್ತಿನಿಗೋಲನ ಸನ್ನುತರು
ಅನುದಿನ ನಂದನ ಸುತನ ನೆನಹಿನಲಿ ಮುನಿಪರಿ ಧ್ಯಾನಂಗತರು ೮

ತೊದಲು ಮೃದುಲನುಡಿ ವದಿಸುವ ಮೆಲ್ಲನೆ ವೇದವೇದಾಂತ ವಿಖ್ಯಾತ ತ
ನ್ನುದರದಿಂದಜನ ಪೆತ್ತಾತ ಮೃದು ಮೃದು ಪದನ್ಯಾಸವ ಕಲಿತ
ಹದಿನಾಲ್ಕು ಭುವನವ ವದನದಿ ತೋರಿದ ಪದಯೇಷ್ಟಕ ಹೃನ್ನಾಥ ೯

ಪಟ್ಟಸಾಲೆಯಲಿ ದಟ್ಟಸಾಲಿಕ್ಕಿಸಿ ದಟ್ಟಡಿ ನೋಡಿ ಒಗ್ಗುವಳು ನನ್ನ
ಪುಟ್ಟ ದಣಿದೆಯೆಂಬುವಳು ಮೊಲೆಗೊಟ್ಟು ಮೈ ತಡವುವಳು ತ
ನ್ನುಟ್ಟ ಸೀರೆಯ ಮೇಲ್ ಕೃಷ್ಣನ ಕುಣಿಸಿದಳ್ ಅಟ್ಟಹಾಸದಿ
ಯಶೋದೆಯಳು ೧೦

ಇಂದುವದನೆ ತನ್ನ ಕಂದಗೆ ಮೊಲೆಗೊಡಲೊಂದಮ್ಮಿಯುಂಡು ಚಪ್ಪರಿವ ಮ
ತ್ತೊಂದಮ್ಮಲಿ ಕೈಯಿಡುವ ಗೋವಿಂದ ಮೋರೆಯ ನೋಡಿ ನಗುವ
ನಂದನ ರಾಣಿಯ ನಂದಕೆ ಸರಿಯಿಲ್ಲ ಹಿಂದಣ ಸುಕೃತ ಸುಭಾವ ೧೧

ಕಾಲ ನಾಮಕನಿಗೆ ಕಾಲ್ಮ್ಯಾಲ್ಮಲಗಿಸಿ ಪಾಲ್ಬೆಣ್ಣೆಯ ನೀಡುವಳು ಶ್ರೀ
ಲೋಲಗೆ ನಿದ್ರೆ ಬೇಡುವಳು ತೊಟ್ಟಿಲೊಳಿಟ್ಟು ಜೋಗುಳ್ಹಾಡುವಳು
ಭಾಳ್ಬವ್ ಬರುತಿವೆ ಕಂದ ಮುಕುಂದ ಬಾಲಕ ಮಲಗೆಂಬುವಳು ೧೨

ಬಾಲಕ್ರೀಡೆಯಲಜಾಂಡವನಾಳುವ ಶ್ರೀಲಲನೆಯ ವಲ್ಲಭನು ತಾ
ಓಲಾಡಿ ಆನಿಯಾಡುವನು ಚಪ್ಪಾಳಿ ಹೊನ್ನುಗುಬ್ಬಿಯಾಡುವನು ವಿಶ್ವ
ಪಾಲಕ ಶಿಕ್ಷಕ ಜೋಗಿಗೆ ಅಂಜಿ ಗೋಪಾಲರ ಬಾಲನಂತಿಹನು ೧೩

ತೋಳನ್ನಾಡುವ ತೋಳ್ಗದಂಬೆಯ ಲಾಲಿಸುವ ತಲೆಗಿಂಬು ಅಂಬೆ
ಗಾಲಿನ ತವಕ ವಿಡಂಬು ಮತ್ತಾಲದೆಲೆಯ ಲಯದಂಬು
ಆಲಯದವನಿಗೆ ತೊಟ್ಟಿಲ ನಿದ್ರೆಯ ಹೇಳುವುದೇ ಭ್ರಮೆಗಿಂಬು ೧೪

ಆ ಪ್ರಳಯದಿ ದುರ್ಗಾ ಪ್ರಾರ್ಥಿಸಿ ಶ್ರುತಿರೂಪದಿ ಕಡೆಗಾಣಳಂತೆ ಆ
ದೇ ಪರಬ್ರಹ್ಮನಿವನಂತೆ ಸುರತಾಪಸರಿಗೆ ಪ್ರಭುವಂತೆ
ಶ್ರೀ ಪ್ರಸನ್ವೆಂಕಟ ಉಪನಿಷದ್ವೇದ್ಯಗೆ ಗೋಪಿಯ ಜೋಗುಳವಂತೆ ೧೫

ತಿದ್ದಿದ ಹುಬ್ಬು ಕಾಮನ ಬಿಲ್ಲ ಗಡಾ
ಸ್ನಿಗ್ಧ ಭಾಲವೇ ಸುಧಾನಿಧಿ ಪಾಡಾ
ಗದ್ದವೆಂಬುದು ಸವಿಮುದ್ದಿನ ಗಂಟು
ಮುದ್ದಿನ ಮುಖ ವೀಕ್ಷಿಪ ಜನ ನಂಟು ೨

ಕೊರಳೊಳೊಪ್ಪುವ ತ್ರಿರೇಖೆಯು ಸುಂದರ
ಉರದ ವಿಸ್ತರ ಪ್ರಿಯಳಿಗೆ ಮಂದಿರ
ಕರಯುಗ ಕರಿಶಾವಕದ ಸೊಂಡಿಲವು
ಕರತಳವಂಗುಲಿ ಪಂಕಜ ದಳವು ೩

ಅತಿ ಅತಿ ಮೃದುವೊಳ್ಳೆ ತ್ರಿವಳಿ ಶೋಭೆಯು
ಸತತ ಗರ್ಭಿತ ಭುವನನಾಭಿಯು
ಅತುಲ ವರ್ತುಲ ಊರು ಜಂಘೆಗಳಿರವು
ಮತಿಗೆ ಮಂಗಳವು ಬಳ್ಳಿಕಾಯಿ ಲಿಂಗವು ೪

ಸಿರಿಗೆ ಸಿಂಗರವಾದರುಣ ಪಾದವು
ಹರಿಧ್ವಜಾಂಕುಶ ವಜ್ರಾಂಕಿತ ಪಾದಾಂಭೋಜ
ಶರಧಿಜಾತನ ಗೆಲುವ ಅಂಗುಲಿ ನಖವು
ತರಳನ್ನ ನೋಡಿ ನಲಿವಳ ಸುಕೃತವು ೫

ಉರಕೆಲೆ ತಲೆ ರನ್ನಕುಂಡಲಕರ್ಣ
ಕೊರಳ ಪದಕ ಹಾರ ಕೌಸ್ತುಭ ಚಿಹ್ನ
ಸರಪಣಿ ಮಣಿ ಸುಪ್ಪಾಣಿ ನೂಪುರವು
ಕರವಲಯ ಉಡಿದಾರ ಕಾಲ್ಪೆಂಡೆ ಪ್ರಭೆಯು ೬

ಘಿಲಿ ಘಿಲಿ ಘಿಲಿರೆಂಬ ಅಂದುಗೆ ಗೆಜ್ಜೆ
ಎಳೆನೀಲ ಹವಳ ಮುತ್ತಿನ ಹುಲಿಗೆಜ್ಜೆ
ಬೆಲೆಯಿಲ್ಲದಂಗಕೆ ಬೆಲೆಯುದ್ದಾಭರಣ
ನಳಿನನಾಭನ ರೀತಿ ಲೋಕಾನುಕರಣ ೭

ಥಳಥಳಿಸುವ ಇಂದ್ರನೀಲದ ಬಿಂಬ
ಜಲಧಿಶಯನನಂತ ಜೀವದ ಬಿಂಬ
ನಳಿನಮುಖಿಯು ಗೋಪಿ ನೋಡಿ ದಣಿಯಳು
ಲಲಿತ ಶ್ರೀ ಕೃಷ್ಣ ಲಾವಣ್ಯಾಬ್ಧಿರತಳು ೮

ಗೋಪಿ ನೋಡಿ ಭಾಗ್ಯ ನೋಡಿ ನಿರ್ಜರರು
ಶ್ರೀಪತಿಯಮ್ಮನ ಬಲುಕೊಂಡಾಡಿದರು
ಈ ಪರಿ ಶುಕಮುನಿ ಪೇಳ್ದ ಭೂಪತಿಗೆ
ಶ್ರೀ ಪ್ರಸನ್ವೆಂಕಟಕೃಷ್ಣಭಕ್ತನಿಗೆ ೬

## ೧೬

ರಾಗ–ಸಾವೇರಿ ತಾಳ–ಅಟ್ಟ

ನಂದನ್ನಭಾರ್ಗಿಯೆ ಒಳಿಗೆ ಬಂದು
ಇಂದು ಮುಖಿಯರ್ಭಾಳಿಭಾಳಿಗೆ ನಿನ್ನ
ಕಂದ ಮರುಳನೆಂಬುವರು ನಮ್ಮ
ಮಂದಿರ ಬಿಡನೆಂಬುವರು ೧

ಎಳೆಯನಂತೊಪ್ಪುವ ತಾಯಿಗೆ ಪ್ರಾಣ
ಗೆಳೆಯನಂತಪ್ಪುವವರಿಗೆ
ಲಲಿತಚರಿತನ ಚರಿತ್ರೆ ಗೋ
ಪಳೆಯರು ಪೇಳ್ವುದೊಂದರ್ಥ ೨

ಅನಂತ ಕರ್ಮಾನಂತ ನಿ
ತ್ಯಾನಂತ ಪೂರ್ಣ ಅನಂತ
ಅನಂತ ನಿಗಮಕ್ಕೆ ನಿಲುಕ ಸ
ದಾನಂತ ಪ್ರಸನ್ವೆಂಕಟ ತೋಕ ೩

## ೧೭

ರಾಗ : ಪಂತುವರಾಳಿ ತಾಳ : ಏಕತಾಳ

ತಾಳಲಾರೆವಮ್ಮಾ ಉಪಟಳವ ನಂದನ್ನ ರಾಣಿ
ಹೇಳಬಾರದ ಆಟವನಾಡುವ ಪ

ಕೆನೆವಾಲ್ಮೊಸರನು ಮನದಣಿ ಮೆಲುವ
ತನಯರ ನಿಕರಕೆ ಉಣಲಿತ್ತು ನಲಿವ

ನಿನ ಮಗ ನಮ್ಮೆಲ್ಲರಣುಗರ ಒಡೆಯ
ವನಿತೆರಿಗಣಕಿಸಿ ಮನೆಗೋಡಿ ಬರುವ ೧

ಎಳೆಗರು ಆವಿನ ಮೊಲೆಯುಣ ಬಿಡುವ
ಗೆಳೆಯರ ಸಹ ಚಪ್ಪಳೆ ಇಕ್ಕಿ ಕುಣಿವ
ಕೆಲವರ ಕಣ್ಣು ಮುಚ್ಚಿ ಕಿಲಿಕಿ ತಾ ನಲಿವ
ಪಾಲ್ ಬೆಣ್ಣೆ ಗುಂಡಿಗೆಗಳನೊಡೆದುಡಿವ ೨

ಒರಳಿನ ಮೇಲೊಂದೊರಳ ನಿಲಿಸುವ
ತರಳರ ಹೆಗಲೇರಿ ಒರಳನಡರುವ
ಕರದಲಿ ಕೋಲ್ವಿಡಿದುರು ಘನ ಪಾಲ್ದಧಿ
ಹರವಿಯನೊಡೆದು ಗವ್ಯಾಮೃತ ಸುರಿವ ೩

ನಾರೇರು ನೆರದೀ ಚೋರನ ಹಿಡಿಯೆನೆ
ಸಾರಿ ಸಾರಿಗ ಫೂತ್ಕಾರವ ಮಾಡುವ
ಮೋರೆಯ ಮೇಲುಗುಳ್ದಾರುವ ಹಿಡಿವರೆ
ಜಾರುವ ನಡುಗುವ ತೋರುವನೊಮ್ಮೆ ೪

ಅಂಧಕಾರವ ಮಂದಿರ ಮಣಿಗಳ
ದಿಂದ ಪ್ರಕಾಶಿಸಿ ಬಂದ ಗೋಪಾಲಕೆ
ವೃಂದಕೆ ಗೋರಸ ಚಂದದಿಂದುಣಿಸುವ
ಗೊಂದಣಕಿಕ್ಕುವ ತಾಂ ಮಣಿಯುಣುವ ೫

ಕಂಡಿವನಾಟವ ಮಂಡಿಪೆವೆನುತಲಿ
ಮುಂತಸಿಯರು ಬಂದಂತಲಿದರೆ ಒಳ
ಕೊಂಡೆಯನಿಕ್ಕಿ ಪೌಗಂಡರ ಸಮ್ಮ ಬೆಳ
ಕಿಂಡಿಲಿ ಸಿಲುಕಿಸಿ ಪುಂಡ ನೋಡಿದನೌ ೬

ಮೃಷ್ಟಾನ್ನವನಟ್ಟಿಟ್ಟರೆ ಮೀಸಲು
ಜಟ್ಟಿಗರಾಯಗೆ ಕೊಟ್ಟೇವೆನುತಿರೆ
ಪುಟ್ಟ ಗೋವಳರೊಳು ಕೃಷ್ಣನು ಬಂದ
ದೃಷ್ಟಿಗೆ ತೋರದಂತಷ್ಟು ಸವಿದನೌ ೭

ಹಟ್ಟಿಯ ದೇವರ ಗಟ್ಟಿ ಹಂಗಡದಲಿ
ಕಟ್ಟೆಳೆದೊಯ್ದನು ಬಟ್ಟ ಬಯಲಿನಲಿ

ಭಾಸಿಯೆನಗುಣಿಸಿದೆ ಆಕಾಶವವಗೆ ನಿನ್ನ
ಮಾಸಲು ಬುದ್ಧಿಯು ಲೇಸೆಂದೆನುವ ೧೫

ಎಳೆಹಾವಿನ ಮರಿಗಳ ತಂದಬಲೆರ
ಗಳಕಿಕ್ಕುವ ನೀವಿಯೊಳು ಬಿಡುವ ಮಂ
ಗಳ ಮಾರುತಿ ಹೆಂಗಳು ವಸನಂಗಳ
ಕಳೆದು ನಿಲ್ಲಲು ಪರಿ ಕಳಕಳೆ ನಾಟವೆ ೧೬

ಗಡಿಗೆಸಹಸ್ರಗಳೊಡೆವ ನಿರಂತರ
ತುಡುಗಿಲಿ ಬಚ್ಚಿದ ಮಡುಗೀರ ಕೆಡಿಸಿದ
ಅಡಿಗಡಿಗಡಗುವ ಹುಡುಕಿ ಓಡಿಬಂತರೆ
ಮಡದೇರ ಬತ್ತಲಾಗುವವರೆದೆ ಬಡಿವ ೧೭

ಒಮ್ಮೆ ನಿನ್ನ ಮಗಸ್ವಮ್ಮಲಿ ಕಟ್ಟಿದೆ
ಹಮ್ಮ ಇವ ಪರಬೊಮ್ಮನೆಂದರಿಯದೆ
ನಮ್ಮ ಮಕ್ಕಳ ನಾಮಃ ಮತ್ತೆ ಕಟ್ಟಿದೆ
ಎಮ್ಮಮ್ಮ ಮಾಡಲಿನ್ನೇನಮ್ಮ ೧೮

ಶಿಶುಗಳ ಬಿಡಿಸಿದನು ಪಶುಗಳ ದಾಳಿಕೆ
ಹೊಸೆದು ಗಂಟನು ಮಿಸಾಳಿಸಿ ಕಟ್ಟಿದ
ನಸುನಗಿಯುತಲಿ ನಮಗಾಸುರುವ ನಿಮ್ಮಯ
ಹಸುಳೆರ ಪಡಿಪಾಟಲ ನೋಡೆನುವ ೧೯

ನಂದನರಾಣಿಯು ಕಂದನೆ ನಿನಗಿದು
ಚಂದವೆ ಮಕ್ಕಳ ಅಂದಗೆಡಿಸುವದು
ಎಂದೆನೆ ಕೊಲುದಿಲ್ಲೆಂದೆನುತಲಿ ತಾಂ
ಕೊಂದೋಡದೆ ಬಿಡ ಮಂದರಧರನು ೨೦

ಕೆನೆ ಕೆನೆಮೊಸರನುದಿನ ತುಡು ತಿಂಬನು
ನಿನ ತೋಳ್ ಮೊಸರಿಲಿ ಮುಳುಗಿದೆ ಕಳ್ಳ
ಎನಲು ನಮ್ಮಾಳಿಗರು ಮುಳುಗಿದೆ ಪಡಗದಿ
ವಣೆ ಹುಡುಕಿದೆ ನಾ ತಿನಲಿಲ್ಲೆಂಬ ೨೧

ರಸಭರಿತೋಖಿಣಿ ಹಸುಳನ ಹುಸಿಗೇಳಿ
ಶಶಿವದನೆಯುಮಾರ್ದ್ದಿಸಿ ಅಪ್ಪಿಕೊಂಡರೆ

ಎಸೆವ ಸಿರಿಯು ಪಚ್ಯಾಲ್ ಶಿಶುವರ ಕುಣಿವನು
ಅಶಿಯರ ವಸನವ ಬಿಡಿಸಿ ತಾ ನಗುವ ೨೨

ಮತ್ತೊಂದಿನ ನಿನ್ನ ಪುತ್ರನ ಕಟ್ಟಿದೆ
ವರ್ಥಿಲಿ ನಿನ್ನೆತೆ ತರ್ಶಿರೆ ನಡುವೆ ಪ್ರ
ಮತ್ತ ಘೋಳಿಯ ತೆರ ಚಿತ್ರದಿಂದಂಜಿಸೆ
ಸತ್ವರ ಬಿಟ್ಟೋಡಿ ಸತ್ತುಳಿದೇವೆ ೨೩

ಪುಟ್ಟರ ಚಿದುರಿಸಿ ಅಟ್ಟದ ಪಚ್ಯಾಲ್ ಬೈ
ಚಿಟ್ಟ ಬೆಣ್ಣೆಯ ಚಿಟ್ಟಿಗೆಗಳ ತೆಗೆ
ದಷ್ಟನು ಸವಿದನು ಎಷ್ಟು ಪೆದ್ದೆಂದರೆ
ಬಿಟ್ಟು ಕುಚವ ಪಿಡಿದಿಷ್ಟೇ ಎನುವ ೨೪

ಗಟ್ಟಿದೆಗಳ್ಳನು ಕೃಷ್ಣನೆನುತ ಕೈ
ಕಟ್ಟಿದರಂಜದೆ ಬಿಟ್ಟುಕೊಂಡನು ನಮ್ಮ
ಚಟ್ಟಿಗನಾಣೆಯನಿಟ್ಟೋಡಿದನವ
ನಟ್ಟುಳಿ ಘನವಿನ್ನೆಷ್ಟುಸುರುವೆವ ೨೫

ತಿಳಿತುಪ್ಪಿಟ್ಟ ಬಿಸುಳಿಗೆಯೊಳಗೆ ತನ್ನ
ಶೆಳಲನು ನೋಡಿದನೆಳೆಯರರಸನು
ಗೆಳೆಯನೊಬ್ಬಡಗಿಹ ಒಳಗೆನ್ನುತ ಕ
ಲ್ಲಿಲಿ ಗಡಿಗೊಡದನು ನಳಿನನಯನನು ೨೬

ಹರಿಬಲರೀರ್ವರು ಉರು ಮಾಯ್ಕಾರರು
ಚಿರರುಚಿರರು ಸುಂದರವರರಿವರು
ಪುರುಷೋತ್ತಮರ ಸುಚರಿತೆಯ ಪೇಳ್ವೆವು
ಪರಸನ್ವೆಂಕಟಗಿರಿವರನಿಲಯ ೨೭

## ೧೮

ರಾಗ : ಮೋಹನಕಲ್ಯಾಣಿ ತಾಳ : ತ್ರಿಪುಟ

ಲೀಲೆ ಘನ ಹರಿಲೀಲೆ ಘನ ಈ
ಬಾಲಕನಿವ ಜಗತ್ಪಾಲ ಘನ ಪ.

ಶ್ರೀಲಲನೆಯ ಮತಿಜಾಲಕೊದಗದಿಹ
ಮಹೌಳಿಯ ಚಿದ್ಗುಣಶಾಲಿ ಘನ ಶ್ರೀ. ಪ.

ಅಪ್ರತಿಮಲ್ಲರು ಆ ಗೋಕುಲದಿ
ಸುಪ್ರತೀಕನಂತೆ ರಂಜಿಪರು
ತಾ ಪ್ರಾಕೃತ ಅರ್ಭಕರಂತೆ ಲೀಲೆಯ
ಆ ಪ್ರಜರಿಗೆ ತಾವ್ ತೋರುವರು ೧

ವ್ರಜದ ವೀಥಿಯಲಿ ಆಡುತಲಾಡುತ
ನಿಜ ಸಖರೆಂದರು ಮೃತ್ತಿಕೆ ಮೆಲಲು
ಆ ಜನನಿ ಯಶೋದೆಗೆ ಪ್ರಜರ್ಪೇಳಲು
ಅಜನಯ್ಯನ ತಾ ಕೇಳಿದಳು ೨

ಅಮ್ಮ ನಾ ಮೆಲಲಿಲ್ಲವೆ ಮೃತ್ತಿಕೆಯನು
ಸುಮ್ಮನೆ ಹುಸಿ ಹೇಳ್ಯಾಡುವರು
ಆ ಮಾಡುವೆ ನೋಡೆಂದು ಪ್ರಟ್ಟ ಬಾಯೊಳು
ಬೊಮ್ಮಾಂಡವ ಹರಿ ತೋರಿದನು ೩

ತಮ್ಮಂತಸ್ಥ ಬಾಹ್ಯಾಂತಸ್ಥ ತೋರಿ
ತಮ್ಮಮ್ಮನು ಬೆದರುವಳೆಂದೆನುತ
ತಾ ಮತ್ತೆ ಬೈಚಿಟ್ಟನು ಬಾಯೊಳು ಪರ
ಬ್ರಹ್ಮಾತ್ಮೈಕ ಶಕ್ತ್ಯಾತ್ಮಕನು ೪

ತಾಯಿಯ ವಶದಿ ಮಕ್ಕಳು ಇಹ ಪರಿಯಲಿ
ಶ್ರೀಯರಸನು ಮಾಯವದಳೆದು
ಬಾಯತೆರೆದು ಅಮ್ಮಿಯು ಜಪ್ಪರಿದುಣ
ಲೀಯಚ್ಚರಿಯನು ನೆನೆನೆನೆದು ೫

ಎನ್ನಯ ಬುದ್ಧಿಯ ಭ್ರಮೆಯೊ ಸ್ವಪ್ನವೊ
ಅನ್ನಿಮಿಷರ ಮಾಯಾದ್ಭುತವೊ
ತನ್ನಯ ಸನ್ನುತ ಚಿನ್ನನ ಗುಣಕೀ
ರ್ತನ್ನೆಯ ಮಾಡಿದಳೆಂದಪ್ಪ ೬

ಎಂದಿನ ತೆರ ಮನೋವಾಕ್ಕಾಯದಿ ಯದು
ನಂದ ವ್ರಜದವರ ಮೋಹಿಸಿದ

ಕೊಡಹಿ ಲೀಲಾನಂದಾಯುಧದಲಿ
ನಂದಿಸಿದನು ಗೋಕುಲೇಶನು ೭

ಶ್ರೀಕೃಷ್ಣ ಭಗವಾನ್ ಲೋಕೇಶ್ವರನು ತಾ
ನಾಕದ ಜೀವರ ಶೋಕಹರ
ವೈಕುಂಠಾಲಯ ಪತಾನೇಕ ವಿ
ಭಾಕರ ಕೋಟಿ ನಿಶಾಕರಭಾ ೮

ಲೆಕ್ಕಕೆ ನಿಲುಕದ ಲಕ್ಷ್ಮಿಯರಸನು
ಕುಕ್ಷಿಯೊಳಾಳುವ ಭುವನಗಳ
ರಕ್ಷಿಸಲಿಹನು ಭಕ್ತರ ಬೆಳೆವ ಗೋ
ವರ್ಗಗಳೊಳಿಹ ಪ್ರಸನ್ವೆಂಕಟನ ೯

## ೧೯

ರಾಗ : ದೇಶಾಕ್ಷಿ ತಾಳ : ಏಕತಾಳ

ಮೊಸರು ಕಡೆದಳಮ್ಮ ತನಯನಿಗೆ ಹೊಸ ಬೆಣ್ಣೆಗಾಗಮ್ಮ ಪ.

ಬಿಸಜಸಖನುದಯಿಸದ ಮುನ್ನೆ
ಶಶಿಮುಖಿ ಗೋಪಿ ತನ್ನನು ಸಿಂಗರಿಸಿ ಅ. ಪ.

ಹೊಂದಿಸಿದ್ದಳು ದೇವ ನಂದಾದೀಪವ
ಅಂದು ಪ್ರಜ್ವಲಿಸುತ ಮಿಂದುಟ್ಟು
ಪೊಂಬಟ್ಟೆಯ ಮಣಿವೃಂದದ ಭೂಷಣ
ಸಿಂಧೂರ ಸೀಮಂತದಲಿಟ್ಟು ೧

ಗಂಧ ಕಸ್ತೂರಿಯಿಟ್ಟು ಮಂದಿರದೈವಕೆ
ವಂದಿಸಿ ಮುಡಿಗೆ ಮಲ್ಲಿಗೆ ಮುಡಿದು
ಇಂದುಕಾಂತಿಯ ಭಾಂಡದಿ ದಧಿ ತುಂಬಿ
ಧುಂ ಧುಂ ಧುಡುಕೆಂಬ ಚಂದದಲಿ ೨

ಹವಳದ ಕಡಗೋಲು ಹಿಡಿದು ಬೆಳ್ಳಿಯ
ನವನೇಣುವ ಸುತ್ತಿ ಸ್ವರ ತೆಗೆದು

ಕುವಲಯಪತ್ರಯು ಕುಲೋದ್ಧವನ ನಯನಗಳ
ಸವಿಯಿಂದೊಲಿದು ಪಾಡುವೆನಿಂದು ೩

ಚರಚರ ಗಿರಿಧರ ಧರೋದ್ಧರ ನರಹರೆ
ವರವಟು ಪರಶುಕರಾ ರಘುಪ
ನರಸಖ ಸುರಪೋಷಕರ ಹರಿಹರ
ಸುರವರ ಪರಾತ್ಪರ ಹರಿಯೆನುತ ೪

ಅಡಿಗಡಿಗಲೆಯಲು ಬಹಳದು ಬಳುಕಲು
ಮುಡಿಯು ಮಲ್ಲಿಗೆ ಮಾಲೆ ಸಡಿಲುವರೆ
ನಡುಗಲಿಟ್ಟಿದ್ದಮೊಲೆ ಬಿಡುಗಂಧ ಕಸ್ತೂರಿ
ಕಡು ಬೆವರಿಡೆ ಕಡಲೊಡೆಯನ ಅಪ್ಪಿಯು ೫

ಕೊರಳಪದಕ ಮುತ್ತಿನ್ ಹಾರ ತೂಗಾಡಲು
ಕರಿಕರಭಕರಕಂಕಣ ಸರಿಯೆ
ಚಿರರುಚಿರತ್ನನೂಪುರ ಝಣತ್ಕರಿಸಲು
ಪರಮಪುರುಷ ನಮ್ಮ ಹರುಷದಲಿ ೬

ಮಂಥನ ರವಕೆ ನವನೀತ ಬೇಡಿ ಹರಿ ತಾನ್
ಗತಿಯಿಂದ ಕುಣಿಯೆ ಗೋಪತಿಯರಸಿ
ಸುತ ಪ್ರಸನ್ವೆಂಕಟಪತಿಗೆ ಹೈಯಂಗವೀ
ನಿತ್ತಪ್ಪಿದಳತಿ ತೋಷಿತೆಯಾಗಿ ೭

## ೨೦

ರಾಗ : ಆನಂದಭೈರವಿ ತಾಳ : ಅಟ್ಟ

ರಂಗ ಗೋಕುಲದೊಳಗಾಡಿದ ಬಲು
ಶೃಂಗಾರ ಚೇಷ್ಟೆಯ ಮಾಡಿದ ಪ.

ಮಂಗಳಮಹಿಮ ಕೊಂಡಾಡಿದ ಭಕ್ತ
ಜಂಗುಳಿಗೆ ಮುಕ್ತಿ ನೀಡಿದ ಅ. ಪ.

ಮತ್ತೊಂದುದಿನ ಮೊಸರ್ಕಡೆವಾಗ ರಂಗ
ಹಸ್ತ ಬಂದನು ಗೋಪಿ ಬಳಿಗಾಗ

ತಾ ಸ್ತನಪಾನ ಮಾಡುವನಾಗ ದಧಿ
ಮಂಥನವಂತೆ ಹಿಡಿದ ಬ್ಯಾಗ ೧

ಕಡೆವ ಕೆಲಸವನು ಇಟ್ಟಳು ತನ್ನ
ತೊಡೆಯನೇರಿಸಿ ಮೊಲೆಗೊಟ್ಟಳು
ಪಡಗದ ಪಾಲೊಳಗುಕ್ಕಲು ಮೊಲೆ
ಬಿಡಿಸಿ ಮಂದಿರದೊಳು ಪೊಕ್ಕಳು ೨

ತೃಪ್ತಿಯಾಗದ ಪ್ರಾಕೃತರಂತೆ ನಿತ್ಯ
ತೃಪ್ತನು ತಾನು ರೋದಿಸಿ ಮತ್ತೆ
ಕುಪಿತನಾಗುತ ಕಲ್ಲುಪಿಡಿದನು ಬೆಣ್ಣೆ
ಯು ಪಡಗವಾಕ್ಷಣ ಒಡೆದನು ೩

ಹರುಷದಿ ಬೆಣ್ಣೆಯ ಗುಳಿಗೆಯ ಒಯ್ದು
ಒರಳ್ ಮೇಲೆ ಮೆಲುತಿದ್ದ ಜನಯ್ಯ
ಅರಸಿ ಗೋಪಮ್ಮನು ಹಾಲಿಗೆ ನೀರ
ನೆರೆದು ಬಂದು ಕಂಡಳೀ ಬಗೆ ೪

ಕೋಪದಿ ಕೋಲು ತಕ್ಕೊಂಡಳು ನೋಡಿ
ಶ್ರೀ ಪ್ರಸನ್ವೆಂಕಟ ನೋಡಲು ದ
ಯಾಪರ ಮೆಲಮೆಲ್ಲನೈದಲು ಕಂಡು
ಗೋಪಮ್ಮ ಸಿಕ್ಕಿದೆಯೆಂದಳು ೫

## ೨೧

ರಾಗ : ಘಂಟಾರವ ತಾಳ : ಏಕತಾಳ

ಸಾರಿ ಸಾರಿಗೆ ಗೋವಿಂದ ಮಹಾ
ಕಾರಣಕಜಭವಸುರವಂದ್ಯ ಪ.

ತಾಯಿ ಬಳಲುವದು ಮಕ್ಕಳಿಗೆ ಸಂ
ನ್ಯಾಯವಲ್ಲವೆನ್ನುತೆ ಬ್ಯಾಗೆ
ಆಯಸಪಡಿಸಿ ಸಿಲುಕಿದ ತನ್ನ
ಮಾಯದಿ ತಾ ವರ್ತಿಸುವ ಮುಕುಂದ ೧

ಕೃಷ್ಣನ ಕಟ್ಟಲು ಕುಂದಲವಾಗೆ ಯ
ಶೋದೆ ಕಣ್ಣೀರುಗಳಿಂದಾ ಜನನಿ
ಅಷ್ಟು ದಾಮವು ಸಾಲದಾಗೆ ಹರಿ
ಕಟ್ಟಿಕೊಂಡನು ವತ್ಸದಾಮದಾಗೆ ೩

ಒರಳನೆಳೆದುಕೊಂಡು ಹೋಗಿ ಮತ್ತಿ
ಮರಗಳ ಮುರಿದ ಚೆನ್ನಾಗಿ
ಸುರಋಷಿ ಶಾಪದಿ ನಳಕೂಬರರನ್ನು ಉ
ದ್ಧರಿಸಿದ ಸಿರಿವರ ಅತಿಬ್ಯಾಗೆ ೪

ದಿವ್ಯಪುರುಷರು ಇಳೆಯಲ್ಲಿ ಸು
ಸೇವ್ಯನ ಪಾದಕ್ಕೆರಗುತಲಿ
ಭವ್ಯಚರಿತನ ಕೊಂಡಾಡಿದರು ಬಹು
ದ್ರವ್ಯಾಧಿಪನ ಸುತರ್ ಭಕ್ತಿರತರು ೫

ನಿನ್ನ ಗುಣಕಥನೆಗೆ ವಾಣಿಗಳು ಹರಿ
ನಿನ್ನ ಕಥೆಗೆ ಶ್ರವಣಗಳು
ನಿನ್ನ ಸೇವೆಗೆಮ್ಮ ಪ್ರಾಣಗಳು ಹರಿ
ನಿನ್ನ ಸ್ಮೃತಿಗೆ ಮನವಿರಲಿ ದಯಾಳು ೬

ನಿನ್ನ ಪಾದಾಬ್ಜಕೆ ತಲೆಯೆರಗಿ ಹರಿ
ನಿನ್ನ ನೋಟವೇ ದೃಷ್ಟಿಗಾಗಿ
ನಿನ್ನವರ ಸಂಗತಿ ಇತ್ತು ಹರಿ
ಚೆನ್ನಾಗಿ ನಮ್ಮ ರಕ್ಷಿಪುದೆ ಸಂಪತ್ತು ೭

ಅವರು ಸ್ತೋತ್ರ ಮಾಡ್ಯೆದಿದರು ಮ
ತ್ರವರ ಕಾಣುತಾ ವ್ರಜದವರು
ಇವ ಪರಂಜೀವನೆಂದರಿದರು ಪ್ರಸ
ನ್ನವೆಂಕಟನ ಸ್ತವಿಸಿ ಸುಖಿಪರು ೮

## ೨೨

**ರಾಗ : ರೇಗುಪ್ತಿ** **ತಾಳ : ಜಕ್ಕಣಿ (?) [ಆದಿತಾಳ]**

ತೊರೆದ ಮೊಲೆಯಿಂದಲಿ ಕರೆದಳು ಕಂದನ
ಭರಿತ ಪ್ರೇಮದಿಂದ ಅರಸಿ ಗೋಪಮ್ಮ ಪ.

ವೃಂದಾವನಕೆ ಪಯಣೋದ್ಯೋಗದಿಂದ
ನಂದನಂದನ ತನುರುಹ ಕೃಪೆಯಿಂದ
ಅಂಧಕನು ಪಡೆದಾ ವ್ಯಾಘ್ರವೃಂದ
ಮುಂದಿಯು ಬಾಧಿಸೆ ನಡೆದನು ನಂದ ೧

ಭಕ್ಷ್ಯಪಾಯ್ಸನ್ನ ಭೋಜನವ ಮಾಡಿದರು
ಸೂಕ್ಷ್ಮಾಂಬರ ಅಲಂಕಾರ ಧರಿಸಿದರು
ಗೋಕ್ಷೀರ ದಧಿ ಘೃತ ಭಾಂಡ ತುಂಬಿದರು
ಲಕ್ಷೋಪಲಕ್ಷ ಶಕಟವ ಹೊಡೆಸಿದರು ೨

ಬಂಡಿಯ ಮೇಲೆ ಭಾಜನ ಹೇರಿ ಹತ್ತಿ
ಪುಂಡರೀಕಾಕ್ಷ ಸಂಕರ್ಷಣರೆತ್ತಿ
ಕೊಂಡರು ತಾಯ್ಗಳಿಂದಾಯಿತು ಆರ್ತಿ
ಹಿಂಡು ಗೋವ್ಗಳ ಗೋವಳರನು ಬೆಂಬತ್ತಿ ೩

ಕುಂಭಕುಚಗಳ್ಗದಗದಿಪ ಚೆಲ್ವೆಯರು
ಅಂಬುಜಾಕ್ಷನ ಗುಣಕೀರ್ತನೆ ಮಾಡಿದರು
ಕೊಂಬು ಕೊಳಲು ತಾಳ ತಪ್ಪಟೆ ಭೇರಿ
ಸಂಭ್ರಮದಿಂದ ವೃಂದಾವನ ಸಾರಿ ೪

ಅರ್ಧಚಂದ್ರಾಕಾರ ಶಕಟವ ನಿಲಿಸಿ
ಅದ್ರಿತಪ್ಪಲುಕೂಲ ಯಮುನೆಯ ಬಳಸಿ
ಸದ್ರತ್ನನಿಭ ಪುಲಿನಸ್ಥಳವಿಡಿದು
ಉದ್ರೇಕದಿಂದಲಿ ನೆಲೆಗೊಂಡರಂದು ೫

ಉಚ್ಚಶೈಲ ಗೋವರ್ಧನ ತಳದಿ
ಅಚ್ಯುತ ಬಲರಾಮರಾಡಿದರ್ ಮುದದಿ
ಸ್ವೇಚ್ಛೈಕಲೀಲನಂತುಂದು ಲಾವಣ್ಯ
ವತ್ಸಗಳ ಕಾಯ್ದದ್ದು ನಂದನ ಪುಣ್ಯ ೬

ಕರುಗಳ ಕಾಯ್ದರು ಹರಿ ಸಂಕರ್ಷಣರು
ಸರಿ ಗೆಳೆಗೋವಳರ್ವೆರಸಿ ಸುಂದರರು
ವರ ಕಲೋಚ್ಚಾರದಿ ವ್ರಜಪಾದಿ ಜನಕೆ
ಹರುಷಾಮೃತಾಬ್ಧಿಲಿಟ್ಟರು ಕ್ಷಣಕ್ಷಣಕೆ ೭

ಒಬ್ಬೊಬ್ಬ ಮಂಜುಳ ಕೊಳಲನೂದುವರು
ಒಬ್ಬೊಬ್ಬ ಮಲ್ಲರಾಟವನಾಡುವರು
ಒಬ್ಬೊಬ್ಬ ಸ್ಫಟಿಕವನಿಯನೆಸೆಗುವರು
ಒಬ್ಬ ಘೋರುಹದಾಟ ನೀರಾಟಾಡುವರು ೮

ಶ್ರೀಕಾಂತೆಯನ್ನಾಳ್ವ ವೈಕುಂಠಧಾಮ
ತೋಕಪೋಷದ ಶ್ರೀಕೃಷ್ಣನೆ ಪರಬೊಮ್ಮ
ಆಕಳಕಾಯ್ದರ ಕೂಡಿದ ಕೀರ್ತಿ
ಶ್ರೀಕರ ಪ್ರಸನ್ವೆಂಕಟ ಶರಣಾರ್ಥಿ ೯

## ೨೪

ರಾಗ : ರೇಗುಪ್ತಿ ತಾಳ : ಏಕತಾಳ

ಹರಿ ಹರಿ ಗೋವಿಂದ ವಿಳ
ಶರಣ ಪ್ರಣತರಾನಂದ ಪ.

ಕುತ್ಸಿತಮತಿ ಕಂಸನ ಭಟನೊಬ್ಬನು
ವತ್ಸಾಕೃತಿಯಲಿ ಬಂದ
ಅಚ್ಯುತರಾಮರ ಕೊಲುವ ಉದ್ಯೋಗವ
ನಿಶ್ಚ್ಯಲಸ್ಯವರೊಳು ನಿಂದ ೧

ವೃಕ್ಷದ ತುದಿಗೊಗೆದವನ ಮಡುಹ ಬಕ
ಪಕ್ಷಿಯ ತೆರ ಖಳನೋರ್ವ
ವೃಕ್ಷದಿ ಬಾಯ್ದೆರೆದೆತ್ತಿದಗೋಣಲಿ
ಭಕ್ಷಿಸಲಿಕ್ಕವ ಬಂದ ೨

ಹರಿ ಕರಪಲ್ಲವ ಅವನ ವದನದಲಿ
ತುರುಕಲು ಉರಿದು ಕಾರಿದನು
ದುರುಳನ ಚಂಚುಪುಟೆರಡನು ಮಾಡಿದ
ತ್ವರಿತದಿ ನಗುತೆ ಅಚ್ಯುತನು ೩

ಸರಸಿಜ ಭವ ಸುರವರರಂಬರದಲಿ
ನೆರೆದು ನುತಿಸಿ ಪೂಮಳೆಯ

ಗರೆದರು ಅಣ್ಣನ ಪೆರಸಿ ಮುಕುಂದನು
ಮರಳಿದ ಗೋಪತಿ ಬಳಿಗೆ ೪

ವ್ರಜನಾಥನು ಮಕ್ಕಳ ಬಿಗಿದಪ್ಪುವ
ಭಜಿಸಿ ಸ್ತೋತ್ರವ ಮಾಡಿದನು
ದ್ವಿಜವರ ಗರ್ಗನು ಹೇಳಿದ ನುಡಿಗಳು
ನಿಜಉತ್ಪಾತ ಗೆಲಿದನು ೫

ಏನುತಲಿ ಸುಖದಲಿ ವನದಲಿ ಮಂಗಳ
ದಿನದಿನ ವರ್ಧಿಸುತಲ್ಲಿ
ವನಜನಯನನ ಗುಣಸಂಕೀರ್ತನೆ
ಘನಜನ ಪೊಗಳುವರಲ್ಲಿ ೬

ಗೋಪರು ಗೋಪಿಯರಾವ್ಗಳು ತರುಲತೆ
ದೇವಾಂಶರು ವ್ರಜರೆಲ್ಲ
ಶ್ರೀವರ ಪ್ರಸನ್ವೆಂಕಟ ಕೃಷ್ಣರೇಯನ
ಭಾವುಕರ್ ಮಾನವರಲ್ಲ ೭

## ೨೫

ರಾಗ : ತೆಲುಗು ಕಾಂಬೋಧಿ ತಾಳ : ಏಕತಾಳ

ಸ್ವರ್ಗಕೆ ಸಮ ವೃಂದಾವನವು
ವೆಗ್ಗಳಿಸಿತು ಸೌಖ್ಯದೀವನವು ಪ.

ಹರಿ ಸಂಕರ್ಷಣರೀರ್ವರು ಹರುಷದಿ
ಚರಿಸಿದರಾಕಳ ಕಾಯುತಲಿ
ವರ ಗೋವರ್ಧನಗಿರಿಯ ತಪ್ಪಲಿನಲಿ
ನಿರುತದಿ ಯಮುನೆಯ ತೀರದಲಿ ೧

ಅಲ್ಲಿದ್ದ ಲೋಕಂಗಳು ನಾಕಲೋಕವು
ಅಲ್ಲಿದ್ದ ಧೇನುಗಳು ಸುರಧೇನು
ಅಲ್ಲಿಹ ವೃಕ್ಷಂಗಳು ಕಲ್ಪವೃಕ್ಷವು
ಅಲ್ಲಿಹ ನಾರಿಯರಪ್ಸರೆರು ೨

ಚಿಣ್ಣಿ ಪೊಗರೆ ಚೆಂಡು ಗುಮ್ಮ್ಯಾಗುಸಕುಹಿಡಿ
ಅಣ್ಣೆಕಲ್ಲು ಹತ್ತೆ ಗಜಗ ಘಾಲ್ತೆ
ಕಣ್ಣುಮುಚ್ಚಳೆ ಮರನೇರಾಟ ನೀರಾಟ
ಸಣ್ಣವರೊಳು ಸೋಲು ಗೆಲುವ ಆಟ ೩

ಸಂಮೋಹನ ಮಾಡುತ ರಂಗ ರಂಗಾ
ಸಂಮೋಹದಿಂದೆಂಬರು ರಂಗ
ನಂದಾಬ್ಧಿಯಲಿ ಗೋಪಿಯರಂತರಂಗ
ನಂದಿಸಿದಾನಂದಚಂದ್ರ ರಂಗ ೪

ಜಲಸೇತುಬಂಧನದಾಟ ನಿಲಯನ
ಪಲಾಯನದಾಟ ಕಪಿಪ್ಲವನ
ಕಲಹಂಸೋಚ್ಚರ ಅಳಿಗಳ ಝೇಂಕಾರ
ಗಿಳಿಶಿಖಿಯುಚ್ಚರ ಪಿಕೋಚ್ಚಾರ ೫

ಗಜಸಿಂಹಗರ್ಜನೆ ಗೋವೃಷಗರ್ಜನೆ
ಸುಜಲದ ಘೋಷಣೆ ಭೇಕರವ
ಸುಜನ ಗೋಪಳಿಗೆ ಶಿಕ್ಷಿಪ ದ್ವಿಜವರ
ಧ್ವಜ ನಿಗಮೇಶ್ವರ ಅಜನಪಿತ ೬

ಲೋಲಾಕ್ಷಿಯರೊಳು ನೋಟ ಬೇಟ ವಿ
ಶಾಲಿ ಗುಣಾಢ್ಯ ಸುರೇಢ್ಯ ಹರಿ
ನೀಲಾಂಬುದಶಾಮಲ ಪಶುಗಳ ಪ್ರತಿ
ಪಾಲಿಸಿದನು ಗೋಪಾಲರೊಳು ೭

ವೃಂದಾವನದಿ ಗೋವಿಂದ ವೇಣುಸ್ವರ
ದಿಂದ ಸ್ವಯಶೋವಿಖ್ಯಾತ ಗಡ
ಇಂದಿರೆಯರಸ ಗೋವೃಂದವ ಕಾಯ್ದನು
ಹಿಂದಣ ಪುಣ್ಯ ವಸುಂಧರೆಗೆ ೮

ನಳಿನಗಂಧವನುಂಡು ಅಳಿಗಳಘೋಷ ಮಂ
ಜುಳವಾಗಿರೆ ವಿಹಂಗಗಳ
ಬಳಗ ಮೃಗಾವಳಿಗಳ ಕ್ರೀಡೆಯೊಪ್ಪಿತು
ಬಲು ಕುಸುಮಾಕರ ಸ್ಥಾನದಲಿ ೯

ಎಲೆ ಎಲ ನೋಡಿವು ಎಳೆವಳಿರು ಕುಸುಮ
ಗಳ ಗೊಂಚಲ ಫಲಧಾರಿಡುತ
ತಲೆಬಾಗಿ ನಲಿವಿಲಿ ನಿಮಗೊಂದಿಸುತಿವೆ
ಎಳೆಯೆಲರ್ ಸೋಂಕಿ ಅಲರುದುರುತಿವೆ ೧೦

ಫಲವತಿ ಪುಷ್ಪಿಣಿಯರು ತುಂಬಿದ ಉಡಿ
ಯಲಿ ಹಿರಿಯರಿಗೆ ವಂದಿಪ ತೆರದಿ
ಇಳೆ ಸಾಕಿದ ಬೆಳೆಸಿದ ಉಪಕಾರಕೆ
ಲಲಿತಲತಾದ್ರುಮ ನತಿಸುತಿವೆ ೧೧

ಸ್ಥಾವರ ಜೀವದ ಯೋಗ್ಯತೆ ನೋಡಣ್ಣ
ದೇವ ನಿಮ್ಮಾರ್ಜನೆ ಮಾಡುತಿವೆ
ಈ ಉರುತರುಲತೆ ಜನ್ಮವೆ ಧನ್ಯವು
ದೇವಮುನಿಗಳಿರ್ಪರ್ ನಿಶ್ಚಯವು ೧೨

ಹರಿಯಗ್ರಜನಿಗೆ ಮಾನವನಿತ್ತು ಸಂ
ಚರಿಸುವ ಸೌಭಾಗ್ಯಕೆ ಮೆಚ್ಚಿ
ತರತರ ಬರುಹಿಗಳ್ ಗರಿಗೆದರಾಡಲ್
ಎರಳೆವೆಯಿಕ್ಕದೆ ನೋಡಿದವು ೧೩

ಹರಿಯ ಸೌಂದರ್ಯಾಂಬುಧಿಲೀಸಾಡುವ
ಪರಿಣಾಕ್ಷಿಯರಕ್ಷಿಮೀನಗಳು
ಮರುಳಿಟ್ಟು ನಿಂದವು ವರವೇಣುನಾದಕೆ
ಹರಿನೋಟಸ್ಮರಶರಪೀಡಿತರು ೧೪

ಕುಡಿತೆಗಣ್ ಮಡದಿಯರ ಮುಡಿ ನುಡಿ ಪಲ್ ಮೊಲೆ
ನಡು ನಡೆಗ್ಹರಿಣ ಮಯೂರ ಕೀರ
ದಾಡಿಮೇಭ ಹರಿಯಂಚೆಯಡವಿಗಿಡೆ
ಮಡುವಿಡಿದವು ನಾಚಿಕೆ ಹಿಡಿದು ೧೫

ಗೋಪಿಯರ್ ಗಾನವ ಪೋಲ್ವ ಭೃಂಗಾವಳಿ
ಗೋಪಿಯರ್ ನೋಟವು ಕುರಂಗಾಳಿ
ಗೋಪಿಯರ್ ನಡೆಯ ಪರಿಯು ಹಂಸಾಳಿಗಳ್
ಶ್ರೀಪತಿಸೇವೆಗೊಪ್ಪಿದವಲ್ಲಿ ೧೬

ವೃಂದಾವನವು ನಂದನೋದ್ಯಾನವು
ನಂದನ ವನಿಯಮರಾವತಿಯು
ಇಂದಿರೆಯರಸ ಪ್ರಸನ್ವೆಂಕಟ ಉ
ಪೊಂದ್ರ ಎಲ್ಲರು ವೃಂದಾರಕರು ೧೭

## ೨೬

**ರಾಗ : ಕನ್ನಡ ಗೌಳ** **ತಾಳ : ಅಟ್ಟ**

ಧನ್ಯ ಧನ್ಯ ಯಮುನೆ ಗೋವರ್ಧನ್ನ ಗಿರಿಪತಿ
ಚಿನ್ಮಯಾಂಗ ಸ್ವರೂಪ ಪಾವನ್ನಮೂರುತಿ ಪ.

ಎಳೆದಳಿರು ಶಾವಂತಿಗೆ ನೀಲೋತ್ಪಲ ಪೊಂಗ್ಯಾದಗೆಯು
ನಳಿನ ಚಂಪಕೆ ಪಾಟಲ ಬಕುಳ ಮೊಲ್ಲೆ ಮಲ್ಲಿಗೆಯು
ಅಲರು ತುಳಸಿ ಬದರಿಬರುವ ಗೆಳೆಂದುರೀವರು ಗೆಳೆಯರಿಗೆ
ಒಲಿದು ಇತ್ತು ತಾನಿಡುವನು ಚೆಲುವರರಸನು ೧

ಮುಕುತಬಳಗದೊಡನೆ ಸಂತತ ಲಕುಮಿ ಪೂಜಿಪಳು
ಮುಕುತ ಕುಸುಮ ಗಂಧಾಲಂಕಾರ ಶ್ರೀಕಾಂತೆ ತಾನಪಳು
ಮುಕುತಾಮುಕುತರಿಗೆ ದುರ್ಲಭ ವ್ಯಕ್ತಾವ್ಯಕ್ತನು
ಅಕಳಕಾಂಬರ ಮಕ್ಕಳು ಅರ್ಚಿಸೆ ಸ್ವೀಕರಿಸುತಿಹನು ೨

ಶುಕಪಿಕಗಳು ವೃಂದಧ್ವನಿಯು ಝೇಂಕಾರವದಿಂ ಕರೆವಂತೆ
ಪ್ರಕಟಿಸುತಿವೆ ಗ್ರಹಮೇಧಿಗಳಾಗಿ ಭಕುತಿ ವಿನಯರಂತೆ
ಸುಖಿಗಳವರೇ ಸಾಧುಕುಲ ಸೇವಕರು ಭಾವುಕರು ಜೀವನ್
ಮುಕುತರವರೆ ಪರೋಪಕಾರದಿ ಮುಕುತಿ ಪಡೆವರು ೩

ಮಧುಕರಗಳ ಕೂಡಿ ಝೇಂಕಾರ ಮುದದಿ ಮಾಳ್ಪರು
ಹೃದದ ಹಂಸ ಸಾರಸ ರಂಹಸ ವದಿಸಿ ನಗುವರು
ಕೆದರಿದಗರಿಬರುಹಿಗಳೊಡನೆ ಮುದದಿ ಕುಣಿಯುವರು
ಬೆದರು ಹುಲ್ಲೆಗಳಂತೆ ನೋಡಿ ಕದಲಿ ಜಿಗಿಯುವರು ೪

ಹರಿಬಲರೀರ್ವರು ಸರಿಗೋವಳರೊಳ್ ಬೆರಸಿ ತಿರುಗುತ
ತರುಲತೆಗಳ ಮೃಗ ಪಕ್ಷಿಗಳಚ್ಚರಿಯ ನೋಡುತ

ಸರಸಪಜನ ನುಡಿವರೆಲಿಲಿ ಕಿರ್ಯಗ್ವಾಜ್ವನ್ಕರ
ಪರಮಘರ್ಮವ ನೋಡಿ ಅತ್ಯಂತ ಹರುಷ ತೋರುವರು ೫

ಚಕೋರ ಕುರರಿ ಕ್ರೌಂಚ ತಿತ್ತಿರಿ ಶಕುಂತ ಕಾರಂಡ
ಬಕಗಳು ಪಾರಾವತ ಕಲವಿಂಕ ಚಕ್ರವಾಕಗಳ
ಸುಕಳೋಚ್ಚಾರವ ಮಾಡುತ ಪಾಡುತ ಆಕಳ ಕಾಯ್ವನು
ಸಖ ಗೋವಳರ ನಿಕರಕ್ಕಕ್ಷಯ ಸುಖವನುಣಿಪನು ೬

ಮೇಘಗಂಭೀರರವದಿ ದೂರಿದ್ದ ಗೋಗಳ ಕರೆಯುವನು
ಮೃಗಪ ವ್ಯಾಘ್ರಗಜಗಳ ಧ್ವನಿಗೆ ದಿಗಿಲು ತೋರುವನು
ಜಗದ ಪ್ರಭು ಮುಕುಂದ ದಣಿದ ಬಗೆಯ ಬಲ್ಲವಪ
ನಗುತ ಗೋವಳರ್ದಿಗಲಿನಲಿ ಬಾಹುಗಳನ್ನೇರುವ ೭

ಸಖರ ತೊಡೆಯ ತಲೆಗಿಂಬಿನಲಿ ಮುಖವನ್ನಿಡುವ
ಭಕುತವತ್ಸಲ ನಿದ್ರೆಯ ಮಾಡುವ ಸುಖದಿ ತರುಮೂಲ
ಸುಖಸಮುದ್ರ ನಿದ್ರಾಮುದ್ರ ಸುಕಲಿದೋರಿದ
ಆಕಳಕಾಯ್ವರ ಕೈಯಿಂದಂಘ್ರಿಕಮಲಗಳೊತ್ತಿಸಿದ ೮

ಲಕುಮಿ ಭಜಿಪ ಪಾದ ಚತುರ್ಮುಖನರ್ಚಿಪ ಪಾದ
ಲೋಕಗಳಳೆದ ಪಾದ ಗಂಗೆಯ ಪ್ರಕಟಿಸಿದ ಪಾದ
ಮುಕುತ ವ್ಯಕತ ಪಾದ ಕಾಳಿಂಗ ಭಕುತೋದ್ಧರ ಪಾದ
ಶಕಟವನೊದ್ದ ಪಾದ ಗೋವಳಸಖರೊತ್ತುವ ಪಾದ ೯

ಕುಣಿದು ಕುಣಿದು ದಣಿದು ನಡೆದು ತನುವು ಬೆವರಿದ
ವನಜನಯನ ಫಣಿಶಯನನು ಮಣಿದು ಮಲಗಿದ
ತನಯರೊಡನೆ ಯುದ್ಧದಿ ಗಾಯನದಿ ಶಾಂತನು
ದನುಜಮಥನ ಪುಣ್ಯಕಥನ ಸುನಿದ್ರೆಯೊಳಾಂತನು ೧೦

ಕದನಚೌಪಟ ಮದನಜನಕ ವದನದಿ ಬಾಡಿದನು
ಸದನತ್ರಯನು ಆ ದನ ಕಾಯ್ದುನ್ಯಶೋಧನ ಪೂರಣನು
ಹದಿನಾಲ್ಕು ಲೋಕಾದ್ಯದನ ಕರ್ಮಜ್ಞ ಸುಧನರೊಡೆಯನು
ಈ ಧೇನುಪಳ್ಳಿಯ ಬದಿ ನದಿವನದಿ ವಧ್ವೋದನ ಸವಿದನು ೧೧

ಅನುಗರ ಕರಪಿಡಿದು ನಗುತ ಪರಿಪರ್ಹಾಕರುತೆ
ತರುರ ಮರದ ನೆಳಲಿಗೈದಿ ಘನಶ್ಯಾಮಲ ಕೃಷ್ಣ
ತರುರು ಕಸೆಪ್ರ ತೊಡಿ ತಲೆಗಿಂಬು ಗೆಳೆಯರು ಮಾಡಿದರು
ವನಜನಾಭನ ಗುಣಸಂಕೀರ್ತನೆ ನೆನೆದು ಪಾಡಿದರು ೧೨

ವನಮಾಲಿ ಗಂಧವ್ಯಜನ ಪಾದ ಸಂಹನ ಚಾಮರಗಳಿಂ
ವನಜಾಸನನ ಚಿತ್ತವ ಒಲಿಸಿದರಾಗ ಗೋಪಳರು
ಘನ ಶ್ರುತಿಗಳ ಮನಕೆ ನಿಲುಕದ ಸನಕಾದೀಶ್ವರನು
ವನಗೋಚರರ ಗುಣಗ್ರಾಹಿಯಾದ ಮುನಿಜನೇಢ್ಯನು ೧೩

ವಾಮಸುರಾರ್ಚಿತ ಗ್ರಾಮ್ಯರ ಕೂಡಾಡಿ ವ್ಯಾಮೋಹಿಪ ವಿಶ್ವ
ಭೂಮಿಲತಾದ್ರುಮ ಯಮುನಾ ಪರ್ವತ ಸ್ತೋಮದಿ ಚರಿಸುವ
ಕೋಮಲ ತೃಣ ಕುಸುಮಾವಳಿಗಳ ತಾ ಮೊಡುವ ಧನ್ಯರ
ಶ್ರೀಮನೋಹರ ಸ್ವಜನೋಪಕಾರ ಕಾಮಿತದಾತಾರ ೧೪

ಕರಜಾಕರಪಲ್ಲವ ಆಲಿಂಗನ ಚರಣಾಂಬುಜಗಳಿಂ
ಸ್ಪರುಶನದಿಂದ ಕರುಣೋಟದಿ ಹೊರೆವ ಪೆಣ್ಣುಗಳ
ಸ್ವರತ ಸ್ವಪ್ರಿಯ ಪರಮಪುರುಷ ಪರಾತ್ಪರ ಕೃಷ್ಣ
ವರ ಗೋಪಿಯರ ಸುರಧೇನು ಕಲ್ಪತರು ಪ್ರಸನ್ವೆಂಕಟ ೧೫

## ೨೭

ರಾಗ : ಮುಖಾರಿ ತಾಳ : ಏಕತಾಳ

ಶ್ರೀಮಾಧವ ಬಲರಾಮರ ಸಖ ಶ್ರೀದಾಮ ಬಿನ್ನವಿಸಿದ ಹರಿಗೆ
ತಾಮಸ ಧೇನುಕನು ಮದಮತ್ತನು ಈ ಮಹಾತಾಳ್ವನದೊಳಗೆ ಪ.

ಖರನಾಕೃತಿಯಲಿ ಖಳನಿಕರದ ಗೂಡಿರುವನು ಬರಗೊಡೊಬ್ಬರಿಗೆ
ಸುರಭಿ ಸುರಸಫಲ ದುರುಗಮವಾಗಿವೆ ಹರಿ ನೀ ಕರುಣಿಸು ನಮಗೆ ೧

ಸುಖಮಯ ಮೂರುತಿ ಸಖನ ನುಡಿಗೆ ನಗೆಮುಖದಲಿ ಕೂಡಿ ಗೋಪರನು
ಕುಖಳನ ತಾಳ್ವನ ಆಕ್ಕರದಿ ಪೊಕ್ಕು ತರುನಿಕರಗಳಲ್ಲಾಡಿದನು ೨

ಇತ್ತೆಣಿಕಿಲ್ಲದ ಕತ್ತೆಬಳಗದೊಳು ಶತ್ರುಧೇನುಕ ಕೊಲಬಂದ
ಘ್ಯಾತ್ಕರಿಸುತ ಕಿವಿ ಎತ್ತಿ ಹಿಂಗಾಲ್ಗಳಲೊತ್ತೊತ್ಯದೆಯುತಲವ ನಿಂದ ೩

ಹೇಸರಗತ್ತೆಯ ತಾ ಸತ್ವರದಲಿ ಬೀಸಿ ವೃಕ್ಷಾಗ್ರಕೆ ಒಗೆದ
ವಾಸುದೇವ ಪುತ್ರ ಸಂಕರುಷಣ ರಾಸಭಗಳನೆಲ್ಲ ಸಿಗಿದ ೪

ದುರುಳರು ತಮಸಿಗೆ ತೆರಳಲು ದುಂದುಭಿ ಅರಳುಮಲ್ಲಿಗೆಯ ಸೂಸಿದರು
ತರಳ ಮುಕುಂದನ ಸರಳ ವಿಕ್ರಮಗಳ ಮರಳಿ ಮರಳಿ ಸುರರೊಗ್ಗಳಿದರು ೫

ಸುರಭಿ ಸದ್ವೃಕ್ಷದಿಂ ಭರಿತ ಫಲಂಗಳ ಹರಿ ಚಿರಗೋಪರಿಗುಣಿಸಿದನು
ಹರುಷದಿ ಎಲ್ಲರು ಹರಿಯ ಗುಣಂಗಳ ಸ್ಮರಿಸುತ ಗೋಗಳ ಮೇಸಿದರು ೬

ನಳಿನದಳಾಂಬಕ ಬಲಗೋಪಕರಿಂ ಫಲಗಳ ಭುಂಜಿಸಿ ಮುಂಪದಿ
ತಲೆಯಲಿ ಬರ್ಹ ಪೂಗಳ ಮುಡಿದಾಕಳುಗಳ ಕೂಡಿ ಬರುತಿದ ೭

ಸಿಂಗರವಾಗಿರೆ ಮುಂಗುರುಳೋಳಿಗೆ ಮಂಗಳ ಗೋಖುರ ಧೂಳಿ
ಹೆಂಗಳ ಗೋಪೇರ ಕಂಗಳ ಮಧುಕರರಂಗಾಸ್ಯಾಬ್ಜದ ಕೇಳಿ ೮

ಮೃಗಶಾಬಾಕ್ಷೇರ ಬಗೆಗೊಳುತೀಕ್ಷಿಪ ಮುಗುಳ್ನಗೆಯ ಸವಿನೋಟ
ಝಗಝಗಿಪಾಭರಣಗಳಿಗೆ ಭೂಷಣದ್ಯುಗರು ಮೋಹಿಪ ದೈವಾಟ ೯

ಹೆಂಗಳ ವಿಸ್ತರ ಕಂಗಳ ಹಸಿವೆಗೆ ರಂಗನ ವದನವೆ ಆಪ್ಯಾಯನ
ಪೊಂಗೊಳಲು ಶ್ರವಣಂಗಳ ಕ್ಷುಧೆಗೆ ಕ್ಷಣಂಗಳಿಗೆಲ್ಲ ಆಪ್ಯಾಯನ ೧೦

ನಳಿನಾಕ್ಷನ ಮುಖಬೆಳದಿಂಗಳಿನಲಿ ಲಲನೆರ ನಯನಚಕೋರ
ನಲಿದವು ನಾಭಿಯ ಸಲಿಲಾಶಯದಲಿ ಹೊಳೆವಕ್ಷಿಮೀನವಿಹಾರ ೧೧

ಚೆಲುವ ಪಾದಾಂಬುಜಗಳ ರಸಪ್ರಂಬುವ ಅಳಿಗಳ ಸರಿಯಕ್ಷಿಭೃಂಗ
ಕೆಳದಿ ಗೋಪಿಯರ ಸುಲಲಿತ ಮನದಲಿ ಹೊಳೆವುದು ಹರಿಯ ಸರ್ವಾಂಗ ೧೨

ಸವಿ ಹರಿನಾಮಗಳ ಸವಿಯುದಮೃತ ಕಣ ಯುವತೆರ ಜಿಹ್ವೆಗಾನಂದ
ನವಭಕುತಿಯು ರಸ ನವಕದ ಚೆಲುವೆಯರು ಟವಟವಿಪರು ಮುಖದಿಂದ ೧೩

ಶ್ರೀ ಗೋವಿಂದನು ಗೋಗಳ ಸಹ ವ್ರಜಕಾಗಿ ಬರಲು ಜನನಿಯರು
ಬೇಗಪ್ಪಲು ವನದಾಗಿನ ವಾರ್ತೆಯ ಆ ಗೋಪರು ಹೇಳಿದರು ೧೪

ಖಳರ ವಧಿಸಿ ಬಲು ಬಳಲ್ದಿರೆನುತ ಪರಿಮಳಜಲತೈಲದಲೆರೆದು
ಕಲಧೌತಾಂಬರ ಮಲಯಜ ವ್ಯಜನ ಸ್ರಗ್ಗಳ ಮೃಷ್ಟೋದನದಿಂದ ೧೫

ನಿಜಸುಖಪೂರ್ಣನ ಭಜಿಸೆ ಸುಜಪವನು ಸುಜನನಿ ತಾ ಮಾಡಿಸಲೆಂದು
ತ್ರಿಜಗತ್ಪತಿ ಮುಕ್ತಜನವಂದಿತಪದ ರಜನಿಯಲೊಪ್ಪಿದನೆಂದು ೧೬

ಪ್ರಸನ್ನತರ ಚರಿತ ಪ್ರಸನ್ನಯಶೋಂಕಿತ ಪ್ರಸನ್ನಮೂರುತಿ ದೀನಬಂಧು
ಪ್ರಸನ್ನವೆಂಕಟಕೃಷ್ಣ ಪ್ರಸನ್ನಗತಿಪ್ರದ ಪ್ರಸನ್ನನಾಗಲಿ ನಮಗಿಂದು ೧೭

## ೨೮

**ರಾಗ : ಸೌರಾಷ್ಟ್ರ** **ತಾಳ : ಅಟ್ಟ**

ಕಾಳಿಯಫಣಿಮದಹರಣ ಕೃಪಾಳು ಸುಜನರಾಭರಣ
ಶ್ರೀಲಾಲಿತ ಮಂಗಲಚರಣ ಮತ್ತ ಖೂಳದನುಜಸಂಹರಣ ಪ.

ಯಮುನೆಯೊಳೇಕದೇಶದಲಿ ಅಹಿರಮಣ ಕಪಟಿ ಪೊಂದಿರಲಿ
ಅಮಲಜಲವು ವಿಷವಾಗಿ ತೀರ ಕ್ಷಮೆಗೆ ಹತ್ತಿದಂತೆ ಬ್ಯಾಗಿ ೧

ತೀರದ ತೃಣ ವೃಕ್ಷ ಗುಲ್ಮ ಶಕೆ ಸಾರಿ ಸುಟ್ಟರೆ ಅಲ್ಲಿಗೊಮ್ಮೆ
ವೀರ ಗರುಡನಮ್ಮೃತವ ಕುಂಭ ಹೇರಿ ಕದಂಬನುಳುಹಿದ ೨

ಒಂದು ದಿವಸ ಗೋವಿಂದ ಬಲ ಬಾಂಧವನುಳಿದಲ್ಲೊಂದ
ಚಂದದಿ ಗೋವಳರಿಂದ ಗೋವೃಂದವ ಚರಿಸುತ ನಿಂದ ೩

ಆಗಲೆ ನೀರಡಿಸಿದರು ತಾವು ಬೇಗ ಯಮುನೆಗೈದಿದರು
ಗೋಗೋಪರು ವಿಷಜಲವ ಕುಡಿದಾಗಳೆ ನೀಗಿದರಸುವ ೪

ಯೋಗೇಶ್ವರನಾದ ರಂಗ ದಯಾಗುಣ ಕರುಣಾಪಾಂಗ
ಬೇಗನೆಬ್ಬಿಸಲಾಗವರು ಹರಿಗೋವಿಂದನೆಂದೆದ್ದರವರು ೫

ಪಾಹಿ ಪಾಹಿ ಕರುಣಾಳೊ ಪಾಹಿ ಪಾಹಿ ತಪ್ಪುಗಳನ್ನು ತಾಳೊ
ದೈಹಿಕ ಚಿಂತಾಮಣಿಯೆ ಖಿಳದಾಹಕ ಸದ್ಗುಣಖಣಿಯೆ ೬

ಬಹಳ ಸ್ತುತಿಯ ಮಾಡಿದರು ಮಹಾಮಹಿಮನ ಮೊರೆ ಹೋಗಲವರು
ಅಹಿವರಶಯನ ಮುರಾರಿ ಎನಲು ಮಹಿಮೆ ಸಲಹಿದ ಶೌರಿ ೭

ಕಡವಿನಮರ ತುದಿಗೇರಿ ಗಾಢ ನಡುಬಿಗಿದಂಬರ ಹರಿ
ಘುಡುಘುಡಿಸುತ ಧುಮುಕಿದನು ವಿಷಮಡುವನು ಹರಿ ಕದಡಿದನು ೮

ಸಂಕ್ಷೋಭಿಸಿ ಜಲವೃಷ್ಟಿ ಹಾರ್ದ್ಯಾಕ್ಷಣ ಶತಧನು ಹಚ್ಚಿ
ಅಕ್ಷಯವಿಕ್ರಮ ಹರಿಗೆ ಮತ್ತೀಕ್ಷುದ್ರಬಲವೇನವಗೆ ೯

ಭೀಷಣ ತೆರೆಗಳೆದ್ದಾವೆ ಮತ್ತಾಶಿವಿಷನಿದನೋಡೆ
ವಾಸಸ್ಥಾನಕೆ ಇಲ್ಲಿ ಬಂದು ಈ ಕ್ಲೇಶನಿತ್ತವನಾರೆಂದು ೧೦

ರೋಷದಿ ಎದ್ದವನಾಗಾ ವಿಷಶ್ವಾಸವನುಗುಳುತಲಾಗ
ವಾಸುದೇವನ ಕಚ್ಚಬಂದ ಕೊಂದು ಘಾಸಿಸುವೆನೆಂದ ಮುಂದ ೧೧

ಅಹಿಭಕ್ಷಕವಾಹನನ ಈ ಅಹಿ ಕಚ್ಚಿದ ಬಿಗಿದವನ
ದಹಿಸುತ ಮೈಸುತ್ತಿದನು ಹರಿ ಬಹುತಪ್ತನು ತಾಳಿದನು ೧೨

ನೀಲನೀರದಶರೀರ ಶ್ರೀ ಲೋಲ ಸುಂದರ ಸುಕುಮಾರ
ಕಾಲಾಹಿವೇಷ್ಟಿತ ತಾನು ತನ್ನ ಲೀಲೆಯಿಂ ನಿಶ್ಚೇಷ್ಟಿತನು ೧೩

ರಕ್ಕಸಹರಣನ ಕಂಡು ಅತಿ ದುಃಖದಿ ಗೋಗಳ ಹಿಂಡು
ಸಖ್ಯದ ಸಖಿಗೋವಳರು ಚಿತ್ತಖೇದದಿ ರೋದಿಪರು ೧೪

ಶ್ರೀವತ್ಸದ ಲಾಂಛನನು ಹಾ ನಾವ ಲೋಕದ ಚಿನ್ಹಗನು
ಶ್ರೀವಕ್ತ್ರದಿ ತೋರಿದನು ಸರ್ಪಾವೇಷ್ಟಿತನೊಪ್ಪಿದನು ೧೫

ಇತ್ತಲೀ ಗೋಕುಲದೊಳಗೆ ಬಹು ಉತ್ಪಾತವ ಕಾಣುತಾಗೆ
ಹೃತ್ತಾಪದಿ ಬಳಲಿದರು ಬಲನುಕ್ತಿಯ ಕೇಳದಲವರು ೧೬

ಬಂದರು ಹರಿಯಿದ್ದೆಡೆ ಗೋಪಿ ನಂದಾದಿ ಗೋವರು ಬ್ಯಾಗೆ
ಕಂದಕೃಷ್ಣನ ನೋಡಿದರು ಮನನೊಂದು ಶೋಕಾರ್ಣವದಿಹರು ೧೭

ಬಲನಾಶ್ರಯಿಸಿ ಬಂದಿಹರ ಗೋವಳರಾರ್ತವ ಪರಿಹಾರಾ
ಖಳಭಕ್ತ್ರನುಕ್ಕನು ಮುರಿದ ಅವನ ತಲೆಯಲಿ ತಾಂಡವನಾಡಿದ ೧೮

ಚಿತ್ರವಿಚಿತ್ರತಾಂಡವನು ನಕ್ಷತ್ರಕುಲಪನಾಡಿದನು
ಧಾತ್ರಾದ್ಯರು ಸ್ತುತಿಸಿದರು ದೇವಸ್ತ್ರೀಯರು ನಟಿಸಿದರು ೧೯

ಗಂಧರ್ವರು ಪಾಡಿದರು ಸುರದುಂದುಭಿಗಳ ನುಡಿಸಿದರು
ಅಂದದಿ ಪೂಮಳೆಗರೆದರು ಆನಂದಾಬ್ಧಿಯಲಿ ನಲಿದರು ೨೦

ಮುಷ್ಟಾಟಿಯು ಫಣಗಳಲಿ ಶ್ರೀಕೃಷ್ಣನು ನರ್ತಿಸುತಿರಲಿ
ಕಷ್ಟಿಸಿದನು ಕಾಳಿಂಗ ಮದಬಿಟ್ಟನು ನಿರ್ವಿಣ್ಣಾಂಗ ೨೧

ನೆತ್ತರವನು ಕಾರಿದನು ಬಹು ವಕ್ತ್ರದಲಿ ಆಶಿವಿಷನು
ಭಕ್ತನುಳುಹಿ ನಂದಸೂನು ಪದನೃತ್ಯಕುಟ್ಟಣ ನಿಲಿಸಿದನು ೨೨

ಕಾಯದಿ ಬಲು ಕುಂದಿಸಿದ ತಾ ಸಾಯಲು ನಿಶ್ಚಯಿಸಿದ
ಆಯಸದಿಂದ ದುಃಖಿಪಟ್ಟು ನಾರಾಯಣನಲಿ ಚಿತ್ತವಿಟ್ಟು ೨೩

ಕಂಡರು ಅಹಿರಾಜನನು ಬಹು ಹೆಂಡಿರು ನಿರ್ವಿಷನನ್ನು
ಕೊಂಡಾಡಿದರು ಜಗದ್ಗುರುವೆ ಫಣಿ ದಂಡಾರ್ಹನು ಅಹುದೇವ ೨೪

ದಂಡಿಸಿದ್ದುಚಿತ ನಮ್ಮೊಳು ಬುಧಮಂಡಲಕೆಲ್ಲ ದಯಾಳು
ದಂಡನೆ ತಪ್ಪುಗಳ ತಾಳು ನಮ್ಮ ವಂದಪ್ರಣಮತುತಿ ಕೇಳು ೨೫

ನಿನ್ನಿಂದುದುಭವ ಸ್ಥಿತಿಯು ಹರಿ ನಿನ್ನಿಂದ ಜಗಕಪ್ಪುಯವು
ನಿನ್ನಿಂದ ಬಂಧನ ಮೋಕ್ಷ ಹರಿ ನಿನ್ನಿಂದ ಸುರರಪರೋಕ್ಷ ೨೬

ಬಂದ ನಿನ್ನ ದಾಸಿಯರ ನೋಡೊ ನಮಗಿಂದ್ಯೈದೆತನವನು ನೀಡೊ
ಬಂದೆನಲವರ ನೋಡಿದನು ಪದದ್ವಂದ್ವಕುಟ್ಟಣ ನಿಲಿಸಿದನು ೨೭

ದುಷ್ಟನ ಮದವಿಳುಹಿದನು ಶ್ರೀ ಕೃಷ್ಣನವನನುಳುಹಿದನು
ನಷ್ಟೇಂದ್ರಿಯ ಪ್ರಾಣಾದವನು ಒಂದಿಷ್ಟು ಸ್ವಸ್ಥನಾದನವನು ೨೮

ವಂದಿಸಿದನು ವಿನಯದಲಿ ಸಲಹೆಂದರ್ಚನೆಯ ವಿಧಿಯಲಿ
ಅಂದವ ಮಾಡಲು ಕೃಷ್ಣ ಸ್ಥಳ ಸಿಂಧುವಿನಲಿ ಮಾಡಿಟ್ಟ ೨೯

ಗರುಡನ ಭಯ ನೀಗಿಸಿದ ತನ್ನ ಚರಣಾಂಬುಜದಲಿ ಚಿಹ್ನಿಸಿದ
ಉರಗನ ಪೆಡೆಯ ಶೋಭಿಸಿದ ನಿಜಚರಣಶರಣನ ಸಲಹಿದ ೩೦

ಅಭಯವ ಕೊಟ್ಟವನಟ್ಟಿ ಈ ತ್ರಿಭುವನಕೊಬ್ಬನೆ ಜಟ್ಟಿ
ಅಬಲೆ ಯಮುನೆಯಂಬುವನು ಸುಧೆನಿಭ ಮಾಡಿದನು ಮಹಿಮನು ೩೧

ಶುಕಮುನಿ ನೃಪಗ್ಹೇಳಿದನು ನೃಪ ಭಕುತಿಭರಿತ ಕೇಳಿದನು
ಆಕಳಕಾವನ ಚರಿತೆಯನು ಚತುರ್ಮುಖಭವರು ಪೇಳ್ವುದನು ೩೨

ಪರಿಜನಾಪ್ತರ್ಯರ್ ಕ್ಷೇಮಗಳ ಉಚ್ಚರಿಸುತ ಗೋಪರ ಮೇಳ
ಪರುಷವಲಾ ರಾತ್ರಿಯಲಿ ಸುಸ್ಥಿರರಾದರು ಯಮುನೆಯಲಿ ೩೩

ನಂದನಸತಿ ಸುಖಿಸಿದಳು ತನ್ನ ಕಂದನ ಬಿಗಿದಪ್ಪಿದಳು
ನಂದಾದ್ಯಖಿಳ ಗೋಪಕರು ಅಲ್ಲಿಯೊಂದ್ಯಾಮಿನಿಯ ನೂಕಿದರು ೩೪

ಆ ನಿಶಿ ದಾವಾಗ್ನಿಯನು ನುಂಗ್ಯಾನಿಮಿಷರ ಸಲಹಿದನು
ಸ್ಥಾನಕೆ ಸುಖದಿ ಐದಿದರು ದಯಾನಿಧಿ ದಯಾಪೂರಣರು ೩೫

ಇಂತಾಮರಮುನಿಗೇಯ ಅನಂತಾದ್ಭುತ ಶುಭಚರಿಯ
ಸಂತಸವಿಬುಧ ಸಂಪ್ರಿಯ ವಿಶ್ರಾಂತಿರಹಿತ ಗುಣಗೇಯ ೩೬

ಈ ಕಾಳಿಯ ಉದ್ಧರಣ ಪಾಪಾಕರಷಣ ಸುಖಕಾರಣ
ಶ್ರೀಕರ ಪ್ರಸನ್ವೆಂಕಟೇಶ ಸರ್ವದಾ ಕರುಣಿಪನು ಸರ್ವೇಶ ೩೭

## ೨೯

ರಾಗ : ಭೈರವಿ ತಾಳ : ಅಟ್ಟ

ಕಾಲ ಕಾಲ ಮರಿತ ಕೋಲಾಹಲದಿಂ ಪ್ರಜಾ ಜಗತ್
ಪಾಲ ಪಾಲಿಸುತಿದ್ದ ನಂದನಾತ್ಮಜ ಪ.

ಜನಕೆ ತುಷ್ಟಿಯಿಲ್ಲದಿಹ ಗ್ರೀಷ್ಮಋತು ಬರಲ್
ವನಜನಾಭನಾಜ್ಞೆಯಿಂ ವಸಂತಕಾಲದೋಲ್
ದಿನದಿನಕ್ಕೆ ಅಧಿಕ ಸೌಖ್ಯದೋರಿ ಸಕಲರ
ಮನಸಿಗುಲ್ಲಾಸವಾಯ್ತು ಕೃಷ್ಣರಾಮರ ೧

ಒಮ್ಮೆಂದೊಮ್ಮೆ ವಿಷದ ಗಾಳಿಯಲ್ಲಿ ಬೀಸಿತು
ದುಮ್ಮಾನದಿಂದುಪದ್ರ ಜನವಿನಾಶ ಮಾಡಿತು
ಬೊಮ್ಮನಿಂದವಧ್ಯವರವನೈದಿ ಉಗ್ರನು
ಆಮ್ಮಹಿಯಲ್ಲಿ ದೈತ್ಯ ವೃಕ್ಷರೂಪಿಲಿದ್ದನು ೨

ವೃಕ್ಷ ಗಂಧಗಾಳಿ ಸೋಕಿ ಸಕಲ ತರುಗಳು
ಕಕ್ಷದಹನವಾಗಿ ಹೋಗಿ ಕಾಡಕಿಚ್ಚಿನೊಳು

ಪುಷ್ಕಳ ಕರೆವವು ಅವು ಮಹಿಷಿಯರು
ದುಷ್ಕೃತಪರಹರಿ ಸಿರಿಸಹ್ಯ ೨

ಶುಕ ಪಿಕ ಶಿಖಿಹಂಸಗಳ ಕಲೋಚ್ಚರ
ನಿಖಿಳವನ ಸುಸ್ಥಳದಲ್ಲಿ
ಸಕಲ ಕುಸುಮ ಫಲ ಸತತ ಸಂಪೂರ್ಣವು
ಲಕುಮಿಯ ರಮಣನಿದ್ದಲ್ಲಿ ೩

ಕಕ್ಷಾಶನನಾಟವೆ ನಡೆಯದು ಕಮ
ಲಾಕ್ಷನ ಪಾದಸ್ಪರ್ಶದಲಿ
ತೀಕ್ಷ್ಣಕರೇಂದುಕರಗಳೆ ತೋರವು
ಪಕ್ಷಿಗಮನನ ಸುಳಹಿನಲಿ ೪

ನಿರ್ಝರ ಜಲಸಂಕೀರ್ಣವು ಝರಿಗಳ
ಗರ್ಜನೆ ಶ್ರಾವ್ಯವಾಗಿಹವು
ಪರ್ಜನ್ಯಾಪೇಕ್ಷೆಯು ತೋರದು ಶ್ರೀ
ನಿರ್ಜರಪತಿಯು ಸಂಚರವು ೫

ಕಂಜ ಬಕುಳ ಕಲ್ಹಾರೋತ್ಪಲರಜ
ವ್ಯಂಜಕದಾಮೋದದಲಿ
ಮಂಜುಳ ಮಧುಕರ ಝೇಂಕಾರ ಮನೋಹರ
ಕಂಜಾಕ್ಷನ ಆಟಣೆಯಲಿ ೬

ಕುಸುಮಾಮೋದದ ಸಹ ಸಂಚರಿಸುವ
ನಸುಯೆಳೆಯೆಲರಿನ ಸುಳಿವು
ಎಸೆವ ವಿಚಿತ್ರ ಮೃಗಾಳಿಯ ಕ್ರೀಡೆಯು
ಶಶಿಕುಲದರಸನ ನಲಿನಲಿವು ೭

ಓಂಗಿರುತಲ್ಲಿಯ ಶ್ರೀಕರವನದಲಿ
ಗೋಗೋಪರನು ಬೆರಸಿಹನು
ಪೂಗೊಂಚಲವು ಪ್ರವಾಳ ಬರುಹಿಗರಿ
ಶ್ರೀಗೋವಿಂದನು ಮುಡಿದಿಹನು ೮

ಗೋಗಣ ಚರಿಸುತ ಅತಿ ಅತಿ ಪ್ರಮದ
ರಾಗದ ವೇಣುಸ್ವನದಿಂದ
ಯೋಗಿಜನೇಶ್ವರ ಮೋಹಿಪ ಭಾವನ
ಸೌಭಾವ ವಿವಿಧವನಾರಣ್ಯ ೯

ಮೋದವು ದಕ್ಷಿಣ ಪಕ್ಷವು ಗಡ ಪ್ರ
ಮೋದವು ಉತ್ತರಪಕ್ಷ
ಮೋದಾತ್ಮನ ಕಿವಿಯೋಲೊಪ್ಪುತ ವಿ
ನೋದಕೆ ಶ್ರೀಕಾಕಪಕ್ಷ ೧೦

ಶ್ರೀಕಂಠೋಪ್ಪುವ ವಿವರಿಪ ಪುರಹರ
ನಾಕೇಶನ ನಾಟಕನಿಗೆ
ಈ ಕಾನನದಾಟವು ನಟವೇಷವು
ಸಾಕಿನ್ನಿವು ಬೇಕಿನ್ನವಗೆ ೧೧

ಹಾರಾಟವು ಗೋವರ್ತುಳ ಸಂದಿಗೆ
ಸರಾಟವು ಭ್ರಮಣದ ಆಟ
ದಾರವದ್ವಾಸ್ಯವು ಫಲಗಳನೊಗೆಯುತ
ಜೋರಾಟವು ಕಣ್ಮುಸುಕಾಟ ೧೨

ಚಂಡು ಚಿಣ್ಣಿ ಪವಕಳಿ ಬೊಗರಿಗಳು
ಗುಂಡೆತ್ತಾಟವು ಮರದಾಟ
ಹಿಂಡು ಗೋಪಳರ್ದ್ವರಿ ಬಲರಾಮರು ಪೃಥಕ್
ಮಂಡಲ ಮಾಡ್ಯಾಡುವ ಆಟ ೧೩

ಯಮುನೆಯ ತೀರದಿ ಗಿರಿತಪ್ಪಲ ಬದಿ
ರಮಣೀಯ ಕುಂಜ ಪುಳಿನಸ್ಥಳದಿ
ಅಮಿತ ಕ್ರೀಡೆಯನಾಡಲು ನೋಡುವ
ಅಮರರು ತಾವ್ ಸುಖಹೊಂದಿ ೧೪

ಅಲ್ಲಲ್ಲಾಕಳುಗಳ ಕಾಯುತ ಸಖ
ಗೊಲ್ಲರ ವೆರಸಿ ಮುಕುಂದ
ಉಲ್ಲಾಸದಲಿರೆ ದೈತ್ಯ ಪ್ರಲಂಬನು
ಗೊಲ್ಲರ ವೇಷದಿ ತಾ ಬಂದ ೧೫

ಪಾಶಾರ್ಷರ ಕೋಲಹೇಕೆಸುತಲಿ ಖಳ
ದ್ವೇಷದಿ ಗೆಳೆತನವಿಡಿದ
ಶ್ರೀ ಸರ್ವಜ್ಞ ಶಿಖಾಮಣಿಯು ವಸನೊಳು
ತಾ ಸಖ್ಯವನು ಬೆರಸಿದ ೧೬

ಭಾಂಡೀರವನದ ವಟತಳ ಗೋಗಳ
ಹಿಂಡನು ಆಗಲಿರೆ ಮುರಮಥನ
ಮಂಡಲವೆರಡನು ಮಾಡಿದ ದಾಮನ
ತಂಡಕೆ ದಾಮಾ ವೃಷಭರನು ೧೭

ಮೇಳೈಸಿದ ಸೋತವ ವಾಹಕ
ಸೋಲ್ದವನೇ ವಾಹ್ಯನು ಎಂದೆನುತ
ಹೇಳಿದ ಭದ್ರಸೇನಾದಿ ಸಕಲ ಗೋ
ಪಾಲರರಿಗೆ ಜಗತ್ಕರ್ತ ೧೮

ಸೋಲು ಗೆಲುವಿನಲಿ ವಾಹಕವಾಹ್ಯಕೆ
ಸಾಲುಗೋವಳರಾಡ್ಯೆಂದು
ಶ್ರೀಲೋಲನು ತಾ ಅಸುರನ ಸಹ ಗೋ
ಪಾಲಕರೊಡನೆ ಬೇರಿದ್ದ ೧೯

ಪಕ್ಷದ್ವಯವನು ಮಾಡ್ಯಾಡಲು ಖಳ
ರಾಕ್ಷಸ ಕಂಸನ ಭಟನು
ಋಕ್ಷಬಲನ ಎತ್ತ್ಯೊಯ್ದನು ತಾನಂತ
ರಿಕ್ಷಕ್ಕೆ ಒರುತಿರೆ ಬಲನು ೨೦

ಬೆದರುತ ಹರಿಸ್ತುತಿ ಮಾಡಲು ಸಾಸಿರ
ವದನನ ಸಮವ್ರ ಬಲಬಂದು
ವಂದವಂತ್ತವನಿಗೆ ನಿತ್ರಾಣಾಯಿತು
ಕಂಧರನ ಗೌರವವ ಕಂಡು ೨೧

ಕುಟಿಲ ಖಳನ ಅಲಂಕಾರಾಕಾಶದಿ
ತಟಿತ ದ್ಯುಮಣಿಯಂತೆ ಜ್ವಲಿಸೆ
ಪಟುಬಲನೊಪ್ಪಿದ ದುಷ್ಟನ ಪೃಷ್ಠದ
ತಟದಿ ಶಶಿವೋಲ್ ಥಳಥಳಿಸೆ ೨೨

ನೀಲ ನೀರದಾಳಿ ಸಿಡಿಲ್ಗಾಳಿ ಕೆಂಧೂಳಿಗಳ
ಮಳಿಗೆಯು ಕೋಲುಮಿಂಚು ಮೋಳೆ ಮೋಳೆಯು
ಲೋಲೈಸೆ ಸ್ಥೂಲಧಾರೆಜಾಲ ಮುಸುಕಿ ಬಹಳ ವರ್ಷ
ಕಾಲ ಒಪ್ಪೆ ಶ್ರೀಲಲನೆಯು ಲೋಲನಿದ್ದಲ್ಲಿ ೨

ಕೆರೆಬಾವಿಗಳು ತೊರೆಗಳು ಪುಷ್ಕರಣಿಗಳು ಭರಿತ ಜಲದಿ
ಮೊರಚಲ್ಲಿದವಿರದೆ ಯಮುನೆ ಬೆರಸಿ ನಡೆದವು
ತರು ವೀರುಧ ಉರು ಪುಷ್ಪಾಗೆ ವರಜಂಬು ಖರ್ಜೂರ ದ್ರಾಕ್ಷೆ
ಪರಿಪಕ್ವದಿ ಮೆರೆದವಲ್ಲಿ ಹರಿಯು ವನದಲಿ ೩

ಮಾನವರ್ಗೆ ಗೋನಿಕರ ನಾನಾಜಾತಿ ಪ್ರಾಣಿಗಳಿಗೆ
ಪ್ರಾಣ ಕಾಯು ನಯನ ನಂದಸೂನುವಿದ್ದಲ್ಲಿ
ಶ್ರೀನಾಥ ಸಖ ನಿಕಟದಿ ವನದ ನವೀನ ಜಂಬು
ವನು ಖರ್ಜೂರನುಂಡನು ಆನಂದಾತ್ಮನು ೪

ಕೆಚ್ಚಲ ಧಾರದಿ ಚಲಿಪ ಚೊಚ್ಚಲಾವ್ಗಳುಚ್ಚಣಲು
ನಿಚ್ಚ ಕರೆದನಚ್ಚರಿಯ ಉಚ್ಚಾರಂಗಳಿಂ
ಪಚ್ಚವರ್ಣೆ ಸ್ವಚ್ಛರೂಪೆ ಅಚ್ಚನೀಲೆ ಮೆಚ್ಚಿನಮ್ಮ
ಮುಚ್ಚಿನಮ್ಮ ಉಚ್ಚಗುಣೆಯೆ ಹೆಚ್ಚಗಿಣಿಯೆ ಬಾ ೫

ಗಂಗೆಗೌರಿ ತುಂಗಭದ್ರೆ ಮಂಗಳೆ ಧೂಮ್ರಾಂಗೆ ಗೋವೆ
ರಂಗೆ ಭೀಮೆ ಸಿಂಗರೆ ಸುಸಂಗೆ ತ್ರಿವೇಣಿ
ಭೃಂಗೆ ಚಂಚೆ ಪಿಂಗೆ ಹಂಪೆ ಶೃಂಗಿ ಕೃಷ್ಣೆರಂಗು ಮುತ್ತೆ
ಪಿಂಗಳೆ ಹೇಮಾಂಗಿಯೆಂದು ರಂಗ ಕರೆದನು ೬

ವಾರುಣಿ ಕಮೇರಕುವರೆ ನೀರದಾಂಗೆ ನೀರಜಾಕ್ಷಿ
ಸಾರಸ್ವತಿಯೇ ಭೀರುನೇತ್ರೆ ಚಾರುವದನೆ ಬಾ
ಶ್ರೀರಮಣ ಗಭೀರರವದಿ ಸಾರಿ ಕರೆಯೆ ದೂರದಿಂದಂ
ಜಾರವದಿ ತೂರಿಬಂದವು ವೀರವೇಗದಿ ೭

ಬಂದು ಬದಿಯ ಹೊಂದಿ ಹರಿಯ ಸ್ಕಂಧದಲಿ ಸ್ಕಂಧವಿಟ್ಟಾ
ನಂದದಿ ಆನಂದಾತ್ಮನ ಇಂದು ಲೇಹಿಪವು
ಮಂದಹಾಸದಿಂದ ಕೃಷ್ಣ ಒಂದೊಂದಾವ ಸುಂದರ ಕೈ
ಯಿಂದ ತುರಿಸೆ ಅಂದು ಮೋಕ್ಷಾನಂದದೋರಿತು ೮

ಇರಸ್ತ್ರೀಯರುಗಳೆಲ್ಲಜಾಣೆ ಮಾಯಲೋಚನರು ಹೊಕ್ಕು
ಗಿರಿಬದ್ವಿ ಚರವಿಸಿದರು ಕಂದಮೂಲಜಿನ
ಪರಮ ಫಲಗಳ ಪರಮಧ್ಯಾನ್ನ ಚರವ್ಯಂಜನ ಹರಿಯಮೇಲೆ
ವರುಷದಿಂದುಂಬರು ಕೊಡೆ ನಿರುತ ತೃಪ್ತರು ೯

ಎಳೆಯ ಹುಲ್ಲು ಮೇಯುವಾಗ ಕಂಗಳನ್ನು ಮುಚ್ಚಿ ಗೋವು
ನಳಿನಾಕ್ಷನ ಚೆಲುವ ಮೂರುತಿ ಮೊಳೆವ್ವ ನೋಡಿದವು ೧೦

ಶರತ್ಕಾಲ ಬರಲಾಯಿತು ನಿರುಮಲದಿ ಸರಗಳೊಪ್ಪೆ
ವಿರಚಿತಾಭ್ರ ಶಾರ್ವರೀಶ ಸರ್ವರಿಗಿಷ್ಟನು
ಪರಮತಿಗ್ಮಕಿರಣತಾಪ ಸರಿದುಹೋಗೆ ಇರುಳಿನಲ್ಲಿ
ಸ್ಮರನ ಬಾಣ ಸರಸಿಜಾಕ್ಷಿಗೇರಗುತಿದ್ದವು ೧೧

ರಂಗನಂಗಸಂಗಕೆ ಗೋಪಾಂಗನೇರು ಸಂಗಡಿಸಿ
ಸಂಗೀತದಿ ಮಂಗಳ ಗುಣಂಗಳ್ಹೇಳ್ವರು
ಅಂಗನೇರು ಅಂಗಜನ್ನ ಸಂಗರ ಮತ್ತಾಂಗಿಯರು
ಸಿಂಗರ ವನಂಗಳಲ್ಲಿ ಹಿಂಗದಿಪ್ಪರು ೧೨

ಕುಸುಮನಾಭ ಕುಸುಮಿತ ವನಪ್ರಸರದಲ್ಲಿ ಪಶುಕಾಯುತ್ತ
ಮಿಸುನಿಕೊಳಲ ರಸತುಂಬಿ ನಾದಿಸುತಲಿರ್ದನು
ಹೊಸಪ್ರಾಯದ ಅಸಿಯರು ಪರವಶರಾಗುಲ್ಲಸದಿ ರತಿ
ರಸಿಕೆರೆಲ್ಲ ರಸಿಕನ ಇಚ್ಛಿಸುತಲಿರ್ದರು ೧೩

ವರವರ್ಣೇರು ವಿರಹತೆರೆಯ ಶರಧಿಲೀಸುತಿರಲು ಕಂಡು
ಸ್ಮರನಯ್ಯನುದ್ಧರಿಸಿದನು ಕರುಣವಾರಿಧಿ
ಇರುಳು ಹಗಲು ಹರಿಯಲೀಲೆ ಸ್ಮರಿಸುತಿಪ್ಪರರಸಿಯರು
ಪರಮ ಭಕ್ತಿಭರಿತರಾಗಿ ಹರಿಣನೇತ್ರೆರು ೧೪

ಅಹೋರಾತ್ರಿ ಶ್ರೀಹರಿಯ ರೂಪಧ್ಯಾನ ಮೋಹಿತರು
ದೇಹೇಂದ್ರಿಯ ಗೇಹ ಪ್ರಾಣ ಸ್ನೇಹವವನಲ್ಲಿ
ಬಾಹ್ಯವಿಷಯರಹಿತೆಯರು ಆ ಹೆಂಗಳ ಮೋಹರವು
ಮಹಾಪುರುಷರಾ ಹೋಲಿಕೆಯಲಿಹರು ವ್ರಜದಿ ೧೫

ಕಣ್ಣಲಿ ರಂಗನ್ನ ಮೂರ್ತಿ ಕರಣಗಳಿಗೆ ಅವನ ವಾರ್ತೆ
ಮನ್ನವು ಧ್ಯಾನಾನ್ವಿತ ಕೀರ್ತನ್ನೆ ಜಿಹ್ವೆಗೆ
ಕನ್ಯೆಯರು ಧನ್ಯರು ಮಾನ್ಯೆಯರು ಜನ್ಮಯು ಪ್ರ
ಸನ್ನವೆಂಕಟಮಾನ್ಯೆಯರು ಪುಣ್ಯಶಾಲಿರು ೧೬

## ೩೨

## ವೇಣುಲೀಲೆ

ರಾಗ : ಕನ್ನಡಗೌಳ ತಾಳ : ಅಟ್ಟ

ವೇಣುಗೋಪಾಲನ ವೇಣು ವರ್ಣಿಪರು ಜಾಣೆ ಗೋಪೇರೆಲ್ಲ ಗಾನಾಮೃತವುಂಡು
ಬಾಣಪಂಚಕನ ಬಾಣದಟ್ಟು+[1]ಳಿಗೆ ಪ್ರಾಣ ವೆಂಡಣಿಸಿ ಧ್ಯಾನಿಪರು ಪ.

ಎಳೆನೇಸರ್ಗಳ ಬಳಗವಂತಿಪ್ಪ ಹೊಳೆವ ರತುನ ಮೌಳಿ ಕುಂಡಲ್ಗಳ
ಬೆಳಗಿಲಿಪ ಕಪ್ಪೋಲದ ಕಾಂತಿ ಮವಳಮುಟಿಯಲ್ಲಿ ಬಿಂಬಿಸಲು
ನಳಿನದಳವ ಪೋಲುವ ನೇತ್ರ ಭ್ರೂ ವಿಲಾಸಾಪಾಂಗದಿ ಕೊಳಲನಾದಿಪ
ತಳಿರು ಬರುಹ ಮಲ್ಲಿಗೆದಂಡೆ ಗೊಂಚಲುಗಳ ಗುಂಜೆಮೊಂಗಲಿನ ೧

ವಾಮಬಾಹುವಿನಲಿ ವಾಮಗಂಡವಿಟ್ಟು ಹೇಮವೇಣುರಂಧ್ರವ ಮುಟ್ಟಿಅಂಗುಲಿ
ನೇಮದಲಿ ಸರಿಗಮಪದನಿಯಾ ಮಂಜುಳ ಸ್ವರ ನುಡಿಸಲು
ರಾಮೆಯಂಬಾಧರ ಸೋಮರಸವನ್ನು ಪ್ರೇಮದಿ ಸವಿವ ಶ್ರೀಮದ್ವೇಣುವಿಲಿ
ಈ ಮಹಾಭಾಗ್ಯವ ಕಾಮಿನೇರ್ನೋಡಿರೆಂದು ಮಾತನಾಡುವರ್ ರಾಮೆಯರು ೨

ಬ್ರಹ್ಮಗಂಧರ್ವಗಾನವಿಸ್ಮರುವಾ ಗೀತ ಅಪ್ಸರ ಗಂಧರ್ವರಪ್ಸರ ನಾರೇರು
ಉಮ್ಮಯದಿಂ ಕೇಳಿ ಸಮ್ಮೋಹಿಸಿದರು ಈಮ್ಮಹಿಯ ವ್ರಜರಮ್ಯಣೇರು
ಬ್ರಹ್ಮಗಚ್ಛರಿಯ ರಮ್ಯೆಯರನ್ನ ಸನ್ಮಾರ್ಗಿಯಾ ವೇಣುಸುಮ್ಮೂರ್ಛೆಯಿಂ ಕೇಳಿ
ಸುಮೃಗ ಪಕ್ಷಿಗಳ್ ತಾಮ್ಮರುಳಿಟ್ಟಿವ್ವ ರಮ್ಯಾರಣ್ಯದಿ ಕಂತಮ್ಮೆಳು ೩

ಜೊತ ಪ್ರವಾಳ ಬರ್ಹೋತ್ಪಲ ತಾವರೆ ಪ್ರೀತಿಲಿ ಮುಡಿದ ನಾಥಗೋಪಾಲನ
ಗೀತಕೆ ಭೂರುಹವ್ರಾತ ಲತೆಗಳು ಸೋತು ಅಶ್ರುಮೋಕ್ಷವಾತವವು
ಆತನ ನೀಲ ಜೀಮೂತಾಂಗ ವೀಕ್ಷಿಸಿ ಪ್ರೀತ ನವಿಲ್ಗಳ ಯೂಥವು ನರ್ತಿಸೆ
ಶ್ರೋತ್ರಕಮೃತಪಾತ ಮಲ್ಲಿಗಳು ಜಾತಾನಂದದಿಂದ ಕೂತವಂದು ೪

1 + ಗ

ಗೋವಿಂದಾಟವಿದಿ ಗೋವಿಂದಗೆಳೆಯ ಶಾಶ್ವತ ಸ್ವರ್ಣಮಯ ವೇಣುನಾದಿಸೆ
ಆವು ಕಿವಿಗೊಟ್ಟು ಯಮನಮಂ ಕಟ್ಟಿ ತಾ ವತ್ಸವಂ ಬಿಟ್ಟು ಹುಚ್ಚೆನಿಟ್ಟು
ಆ ವೀಕ್ಷಿಸಿ ಕೃಷ್ಣನಾನನಾಬ್ಜ ಸುಧೆಯ ಸೇವಿಸಿ ನೇತ್ರದಿ ತೀವಿದಾನಂದದಿ
ತಾವಶ್ರುಗರೆವವು ಭಾವುಕ ಜನರ ಭಾವದಿ ಲಾಂಗೂಲಗ್ರೀವವೆತ್ತಿ ೫

ದೇವನಾರಿಯರ ನೀವಿ ಸಡಿಲ್ವುವು ಭಾವೋದ ಮುಡಿಯು ಪೂವು ಚೆಲ್ಲಿದವು
ಭಾವಜನಂಬಿಗೆ ಅವೆಂಗಳ್ದೃಷ್ಟಿಟ್ಟು ಶ್ರೀ ವೇಣುವಿನ ರಸವನುಂಡು
ಗೋವೇರ ಸುಕೃತ ವಾಪ್ಪದೊ ರಂಗನ್ನ ಸೇವೆಗೆ ಸನ್ನದ್ಧಳಾದೇಳೆ ಕಾಳಿಂದಿ
ತಾ ವೇಗ ಬಿಟ್ಟು ಪಿರ್ ಬಾಹ್ವಂಬಲಿಪ್ಪುದಕ್ ದೇವನಂಘ್ರಿವನಜವನಂದು ೬

ಶ್ರೀವರ ಶ್ರೀಕೃಷ್ಣಾಟವಿಯು ಸಂಚರಿಸುವಾಗ ಪಾದರಾಜೀವದ ಗಂಧವು
ಭೂವಿಯ ತೃಣದಿ ಸವ್ಯಾಪಿಸಿರಲು ದೇವಪುಳಿಂದೆಯರ್ತಾವದನು
ಗ್ರೀವ ಕುಚವಲಿಟ್ಟು ವಾಸುದೇವನ ಪಾವನ ಚರಿತ್ರ ಭಾವಭರಿತರಾ
ಗಾವಳಿ ವಾರ್ಗದಿ ಕೋವಿದರ್ಗೀವರ್ ದೇವಗಂಧರ್ವರ ರೀತಿಯಲಿ ೭

ಮೇಘಶ್ಯಾಮಲನ ರಾಗರಸಾಮೃತ ಭೋಗಗಾನ ತುಂಬಲಾಗ ದೇವರ್ಕಳು
ಆಗಸದಿಂ ಪೂವಾ(ಮ?)ಳೆಗರೆದರರ್ಥಿಯಾಗಿರೆ ಸಾಧುಗಳೌಘ ಕಂಡು
ಮೇಘಾಳಿ ರಂಗನ ಮೇಗಾತಪತ್ರಂಗಳಾಗಿರ್ದವಲ್ಲಿಯ ಗೋಗೋಪ ಗೋಪೇರು
ಆ ಗೋವರ್ಧನಾದ್ರಿ ಭಾಗದೇಯಕೆ ತಲೆದೂಗಿದರು ಸ್ವರ್ಗಾಗಾರೆಂದು ೮

ಅನಂತ ಬ್ರಹ್ಮಾಂಡವನ್ನಾಳ್ವ ದೇವ ಗೋ ಕಾನನದಟಣೆ ಗೋನೀಕ ರಕ್ಷಣೆ
ಮಾನವ ಲೀಲೆಗಳೇನು ಭೂಷಣವೊ ತಾನಣ್ಣನೊಡನೆ ವಿನೋದಕೆ
ಆ ನಂದ್ಯಶೋದೆಯ ಸೂನುವೆನಿಸಿದ ಆನಂದ ಶತಕನನಾದಿ ಜನಕ
ಶ್ರೀನಾಥ ಗೋಪಕಾಮಿನೆಯರಾಳ್ವ ದಯಾನಿಧೆ ಪ್ರಸನ್ವೆಂಕಟ ಕೃಷ್ಣ ೯

## ೩೩

## ವಸ್ತ್ರಾಪಹರಣ

**ರಾಗ : ರಾಮಕ್ರಿಯಾ** **ತಾಳ : ಅಟ್ಟ**

ಹೈಮಂತದ ಪ್ರಥಮಮಾಸದಿ ಶ್ರೀ ಸೋಮಶೇಖರನರ್ಧಾಂಗಿಯ ಹೊಂದಿ
ಸೀಮಂತಿನಿಯರರ್ಚಿಸಿದರಂದು ನಿತ್ಯ ಯಮುನೆಯ ವಾರಿಲಿ ಮಿಂದು- ೧

ಮಳಲಗೌರಿಯ ಮಾಡಿ ನೋಂತರು ಮಂಗಳ ಹವ್ಯಾನ್ನವನುಂಡು ಕಾಂತೇರು
ಫಲಪುಷ್ಪ ಗಂಧಮಾಲಿಗೆಳಿಂದ ಕೆಂದಳಿರು ಧೂಪದೀಪ ಬಲಿಯಿಂದ ೨

ನಂದನಾತ್ಮಜ ತಮ್ಮ ಪತಿಯಾಗಬೇಕೆಂದುಮೆಯನು ಬೇಡಿದರಾಗ
ಸುಂದರ ಕಾತ್ಯಾಯನಿಯರ್ಚನೆ ಭಕ್ತಿಯಿಂದ ಪ್ರದಕ್ಷಿಣೆ ವಂದನೆ ೩

ಉಚ್ಚ ಪಾಡಿ ಹರಿಗುಣಕೀರ್ತನ್ನ ಮತ್ತೆ ನಿಚ್ಚ ನಿಚ್ಚಂಬಿಕೆಯಳ ಪ್ರಾರ್ಥನ್ನ
ಅತ್ಯಂತ ಯಾಚ್ಞೆಯ ತಿಳಿದನು ಈ ಅಚ್ಯುತನಲ್ಲಿಗೆ ಬಂದನು ೪

ಯೋಗಿಜನೇಶ್ವರ ಕಂಡನು ಅವರ್ ನೀಗಿದಂಬರವೆತ್ತಿಕೊಂಡನು
ಭಾಗ್ಯೆಯರ್ ಮಿಂದು ಬಾಹನ್ನಕ ಕೃಷ್ಣ ವೇಗದಿ ನೀಪವಡರಿ ನಕ್ಕ ೫

ಪೋಗುವ ಬಾಲೆರ ನೋಡಿ ನಗುತಿದ್ದ ಬಲು ಸುಗುಣೇರು ಬನ್ನಿರಿಲ್ಲಿಗೆಯೆಂದ
ತೆಗೆದುಕೊಳ್ಳಿರಿ ನಿಮ್ಮಾಂಬರವೆಂದ ನರ್ಮಂಗಳ ಮಾತಿಲಿ ಶ್ರೀ ಗೋವಿಂದ ೬

ನಿಮ್ಮ ನಿಮ್ಮುಡಿಗಯನು ನಿಮಗೀವೆ ಬನ್ನಿ ಶ್ರಮವೇಕೆ ನೀರೊಳಗೆ ನೀವೆ
ಹಿಮವು ವ್ರತಸ್ಥೆಯರಿಗೆ ಕಷ್ಟ ಅಕ್ರಮವಿನ್ನು ಅಕಟಾಯೆಂದನು ಕೃಷ್ಣ ೭

ಕಾಮಜನಕನ ನರ್ಮಕೆ ನಾಚಿ ಆ ಕಾಮಿನಿಯರಿಗೆ ಕಾಮವು ಹೆಚ್ಚಿ
ಶಾಮಸುಂದರ ನಿನ್ನ ದಾಸೇರು ಎಲೆ ಸ್ವಾಮಿ ನಾವು ವಿವಸ್ತ್ರೆಯರು ೮

ಅಚ್ಯುತ ನಮ್ಮುಡುಗೆಯ ನೀಡೈ ನಿಮ್ಮಿಚ್ಛಾನುಗೆಯರು ಕನ್ನೆರು ನೋಡೈ
ಸಚ್ಚಿದಾನಂದ ನಂದಜ ಸಾಕು ಶ್ರೀ ವತ್ಸಲಾಂಛನ ಬಿನ್ನಹ ಪರಾಕು ೯

ಕೋಮಲೆಯರು ಬಲು ತೋದೆವು ಧರ್ಮಧಾಮ ಚಳಿಗೆ ಮುಟ್ಟಿಗಾದೆವು
ಸ್ವಾಮಿ ನಂದಗೆ ಹೇಳ್ವೆವು ಕೇಳೈ ನಿಮ್ಮ ಕಾಮಿಸುವೆವು ವಸ್ತ್ರವ ನೀಡೈ ೧೦

ದಾಶಾರ್ಹ ಕನ್ನೆರಿಗೆಂದನು ವ್ರಜೇಶಗೆ ಹೇಳಿ ಮಾಡುವುದೇನು
ದಾಸೇರಾದರೆ ಬನ್ನಿ ಬಳಿಗೀಗೆ ನಿಮ್ಮ ವಾಸಂಗಳನು ಕೊಡುವೆನು ಬ್ಯಾಗೆ ೧೧

ಶೀತದಿಂದೆರಡು ಅಂಗೈ ಹಚ್ಚಿ ರತಿನಾಥನ ಸದನದ ಕದಮುಚ್ಚಿ
ಸೋತು ಲಜ್ಜೆಯನೀಗಿ ಮುಖದಲಿ ಕಾಳಿಂದಿತೀರ್ಥ ಉಳಿದು ಹರಿಯಿದ್ದಲ್ಲಿ ೧೨

ಬಂದು ಭೂರುಹದೆಡೆ ನಿಂತಿಹ ಬಂದ ಸುಂದರಿಯರ ಭಾವ ತಿಳಿದಿಹ
ಇಂದುಮುಖಿಯರ ದಿವ್ಯಾಂಬರ ತನ್ನ ಸ್ಕಂದದಲಿಟ್ಟ ವಿಶ್ವೇಶ್ವರ ೧೩

ಸ್ನೇಹಾವಲೋಕದಿ ನೋಡಿವಾ ವಸ್ತ್ರದೋಚಿಕರೊಳು ಮಾತನಾಡಿದ
ಹೇ ಪರಿಜಾಕ್ಷೇರೇ ಕೇಳಿರೆ ಅಂಬಿಕಾವ್ರತವ ಮಾಳ್ಪ ಚೆಲುವೆಯರೆ ೧೪

ನಗ್ನ ವಿಂದಪರಾಧ ಕ್ಷಮಿಸೆಂದು ಕರಯುಗ್ಮವ ಮುಗಿದು ಬೇಡಿರಿ ಬಂದು
ವಿಘ್ನೇಶನಮ್ಮಗೆ ಬೇಡಲು ನಿಮ್ಮ ನಿಘ್ನಾಂಬರವೀವೆ ಈಗಲು ೧೫

ಕೇಳಿ ಕೆಲದೆರೊಂದು ಕರದಲಿ ಇಂದು ಮೌಳಿಯರ್ಧಾಂಗಿಗೆ ನಮಿಸಲಿ
ಶ್ರೀಲೋಲನವಹಿತಾರಸ್ಕರಿಸಿದ ಎರಡು ತೋಳೆತ್ತಿ ನಮಿಸಿ ಪ್ರಾಂಜಲಿಲೆಂದ ೧೬

ಎಂದ ಮಾತಿಗೆ ಲಜ್ಜಿಸಿದರು ಬಾಹು ದ್ವಂದ್ವವೆತ್ತ್ಯಭಿವಂದಿಸಿದರು
ಇಂದಿರೇಶಗೆ ವಸ್ತ್ರ ಬೇಡಲು ಪ್ರೀತಿಯಿಂದಿತ್ತ ಬೇರೆ ಬೇರೆ ದಯಾಳು ೧೭

ತಮತಮ್ಮಾಂಬರವನು ಉಟ್ಟರು ಶ್ರೀ ಕಮಲಾಕ್ಷನಲಿ ದೃಷ್ಟಿಯಿಟ್ಟರು
ಸುಮುಖಿವ ಲಜ್ಜೆಯಿಂದೀಕ್ಷಿಸಿ ಶ್ರೀರಮಣನ ಸಂಗವಪೇಕ್ಷಿಸಿ ೧೮

ನವಸಂಗಮದೋರೆ ನೋಟದಿ ಅಂಘ್ರಿವನಜ ಸ್ಪರ್ಶೇಚ್ಛೆಯನು ಹೊಂದಿ
ದ್ಯುಪತೆ ವ್ರತಸ್ಥರ ನೋಡಿದ ಸಂನವರಸವಾರ್ಧಿಲಿ ರಮಿಸಿದ ೧೯

ವೇದೋಕ್ತಿಯಂತೆ ಕಾಮಿನಿಯರ್ಗಾವಿತ್ತ ವೇದೇಶ್ವರನು ಪೂರಣಕಾಮ
ಬೋಧಿಸಿದನು ತನ್ನರ್ಚನೆ ಫಲ ಪ್ರಾಪ್ತವಾದುದು ನಡೆಯಿರೆಂದ ಶ್ರೀಲೋಲ ೨೦

ನಂದಜನಾಜ್ಞದಿ ಬಂದರು ತಮ್ಮ ಮಂದಿರಕೆ ಚಂದ್ರಮುಖಿಯರು
ಸುಂದರ ಪ್ರಸನ್ವೆಂಕಟೇಶನ ನಂಬಿ ನಂದಿಸಿದರು ಕನ್ಯೆರನುದಿನ ೨೦

## ೩೪

**ರಾಗ : ರಾಮಕ್ರಿಯಾ** **ತಾಳ : ಅಟ್ಟ**

ವರ್ಣಿಪ ಕವಿಗಳಿಂದ ಉಘೇ ಸುಖಾರ್ಣವ ಮುಂದೋರುವ್ರದುಘೇ ಪ.

ಇಂದಿರೆಯರಸನು ವೃಂದಾವನ ಉಳಿದೊಂದಿ(ದುದಿ?)ನ ದೂರ್ಯೆದಿದನು ಗಡ
ಸಂದಣಿಸಿದ ತರುವೃಂದವು ಛತ್ರಗಳೆಂದಾಗಲಿ ಹರಿ ತುತಿಪ ಗಡ ೧

ಕೇಳೈ ಸುಬಲ ವಿಶಾಲ ಸ್ತೋಕಬಾಲ ಶ್ರೀದಾಮ ಗೋಪಾಲ ರುಕ್ಷಾ
ಕೇಳೈ ಸುರಪ್ರಸ್ಥಾಲತೆ ತರುಗಳು ಕಾಲಕಾಲಕತಿ ಉಪಕರಿಸುತಿವೆ ೨

ಧಾಳಿ ಬಿಸಿಲು ಬಿರುಗಾಳಿ ಸಿಡಿಲು ಮಳೆ ಕಾಳಗಿಚ್ಚು ಚಳಿಗಾಲವನು
ತಾಳಿ ಮನುಷ್ಯರ ಜಾಲಕಾಶ್ರಯವಾಗಿ ಮೇಲೆ ಸಮ್ಯಾಪ್ತರಂತಿಹವಹುದೆ ೩

ಫಲ ಕುಸುಮಂಪ್ರ ಎಳೆದಳಿಲಿಂ ಘನಗಂಧ ಸಲೆ ಕಂದಮೂಲತ್ವಚೆಗಳಿಂದ
ಬಲು ಪ್ರಾಣಿಗಳನು ಸಲಹುತಲಿಪ್ಪ ಓಗಳೆಯಲಿ ಗೃಹಮೇಧಿಗಳಾಗಿ ೪

ಔಚಿತ ಕರ್ಮಾದಿ ಯಾಚಿಸಿವರ್ಥಾದಿ ಯಾಚಕರ ಕರೆದು ಅರ್ಚಿಸುವ
ಆಚಾರಾನ್ವಿತರೆ ಚತುರ್ವಿಧ ಮುಕ್ತಿಗೋಚರರೆ ಪ್ರಿಯ[1][ರು][1] ನಮಗೆ ೫

ಶ್ರುತಿಬಳಿಗೆಳೆವರು ಅತಿಥಿಗಳ್ ಭಜಕರು ಕ್ಷಿತಿಭೂಷಣರ್ ಭಗವಜ್ಜನರು:
ಸ್ಮೃತಿಗರ್ಹರು ಪರಸತಿಧನವಿರತರು ಸತತ ಸತ್ಪಥಗರು ಸತ್ಕ್ರಿಯರು ೬

ಮತ್ಕಥಾಶ್ರವಣ ಸಂಕೀರ್ತನೆ ಸ್ಮರಣೆ ಮತ್ಪದಸೇವನೆ ನಿತ್ಯಾರ್ಚನೆ
ಮತ್ತಭಿವಂದನೆ ದಾಸ್ಯಸಖಿತ್ವವು ಆತ್ಮನಿವೇದನೆ ಭಕ್ತಿ ಮುಕ್ತಿ ೭

ಎನಗೆ ಪ್ರಕೃತಿ ಸ್ತ್ರೀ ವನಜೋದ್ಭವಸುತ ತ್ರಿನಯನ ವಿವಾಹಿಪ ತನುಜಜರು
ಅನಿಮಿಷಪತಿ ನಕ್ಷತ್ರ ಸುರಋಷಿ ನೃಪ ಜನಸೇವಕರೆಂಬುವ ಮುಕುತ ೮

ಸೃಷ್ಟ್ಯಾದಿಕಾರಣ ಶಿಷ್ಟಸಂರಕ್ಷಕ ದುಷ್ಟಹರಣನಾ ತುಷ್ಟಿತನು
ಸೃಷ್ಟ ಮಹಿಮ ಯಥೇಷ್ಟ ನಿಗಮವೇದ್ಯ ವಿಷ್ಣು ಕೃಷ್ಣನೆಂಬುವ ವೃಷ್ಣಿಜನು ೯

ಈ ಲಸದ್ಧರ್ಮ ಪ್ರತಿಕೂಲರೆ ಅಧಮರು ಭೂತಲನೆಗೆ ಭಾರಕರವರು
ಹೇಳಲೇನವರ ಜನ್ಮಾಳಿಗಳ್ ತರುಲತೆಗಳಿಲು ನಿರಯದ ಪಾಲವರು ೧೦

ಫಲ ಪೂ ಗೊಂಚಲಿಂ ತಲೆಬಾಗಿಹ ತರುಗಳ ಮಧ್ಯ ಯಮುನಾ ಜಲವೀಂಟಿ
ತಳಿತುಪವನದಲಿ ಗೆಳೆಯರು ಹಸಿದು ಶ್ರೀ ಬಲಪ್ರಸನ್ವೆಂಕಟಗೆ ಪೇಳಿದರು ೧೧

## ೩೫
## ಸತ್ರದಡಿಗೆಯ ಊಟ

**ರಾಗ : ಸೌರಾಷ್ಟ್ರ** **ತಾಳ : ಏಕತಾಳ**

ಮಹಾ ಬಾಹುಶಾಲಿ ಕೇಳು ರಾಮಾ ರಾಮ ದುಷ್ಟ
ವಾಹಕ ಶ್ರೀಕೃಷ್ಣ ಕೇಳ್ ಪೂರ್ಣಕಾಮಾ
ಬಹಳ ಬಾಧಿತರಾದೆವು ಕ್ಷುಧೆಯಲೀಗ ನಿರು
ವಾಹ ನಿಮ್ಮಿಂದಲೆಂವರ್ ಗೋಪರಾಗ ೧

1 ರೇ

ಹೀಗೆಂಬ ವಿಜ್ಞಾಪನೆಯ ಕೇಳಿ ಶೌರಿ ಪಯಃ
ಸಾಗರ ನಿರೂಪಿಸಿದ ದುಃಖಹಾರಿ
ಯಾಗಶಾಲೆಯಲ್ಲಿ ಸತ್ರವೆಂದು ನೀವು ಪೋಗಿ
ಯಾಗಿಗಳಿಗನ್ನ ಬೇಡಿ ಪೇಳ್ದನಾಪ್ತ ೨

ಯಜ್ಞಪತಿಯಾಜ್ಞೆಯಿಂದ ಯಜ್ಞಕೈದಿ ಗೋಪತ್ರ
ಜರ್ನೆ ಅನ್ನವ ಬೇಡಿದರ್ ಸುವಿನಯದಿ
ಸ್ವರ್ಗಕಾಮಕರ್ಮಠರವರು ಮತ್ತರಾಗಿ ಬಾಲ
ಕರ್ಗೆ ಗರ್ಜಿಸಿದರು ವಿನಯವ ನೀಗಿ ೩

ಕಾಲವಲ್ಲವೆಂದು ನಾಸ್ತಿಕರು ನುಡಿಯಲು ಗೋ
ಪಾಲಕರು ತಿರುಗಿ ಬಂದು ಹರಿಗೆ ಪೇಳಲು
ಬಾಲೆಯರಿಗೆ ಬೇಡಿ ಪುರುಷರನ್ನು ಬೇಡದೆ ಯಾಗ
ಶಾಲೆಗೈದಿ ಪುನರಪಿ ಅನ್ನ ಬೇಡಿದರಂದೆ ೪

ಕೃಷ್ಣನಾಜ್ಞೆ ಕೇಳಿ ಬಾಲೆರು ಹೃಷ್ಟ ಮನದಲಿ ಶ್ರೀ
ಕೃಷ್ಣನ್ನ ಸಂದರ್ಶನಾಶೆ ಮಾಳ್ಪಭರದಲಿ
ಮೃಷ್ಟೋದನ ಭಕ್ಷ್ಯಪಾಯಸಾಜ್ಯಕ್ಷೀರವು ಯ
ಥೇಷ್ಟ ಶಾಕ ಪಪ್ಪಡ ಪಳಿದ್ಯ ದಧಿ ವ್ಯಂಜನವು ೫

ತಂಡ ತಂಡದ್ದುರಿವಾಣಗಳ ಚಷಕದೊಳಗೆ ತುಂಬಿ
ಕೊಂಡು ಬಂದರಿಂದುವದನೇರ್ಹರಿಯಿದ್ದೆಡೆಗೆ
ಗಂಡರ ಮಕ್ಕಳ ಆಪ್ತರೆಲ್ಲರ ಬಿಟ್ಟು ಶ್ರೀ
ಪುಂಡರೀಕನಯನನಂಘ್ರಿಯಲ್ಲಿ ಚಿತ್ತಿಟ್ಟು ೬

ಬ್ರಾಹ್ಮಣೆಯರು ಷಡ್ರಸದನ್ನ ತಂದು ನಮಿಸಲು ಪರ
ಬ್ರಹ್ಮನುಂಡ ಗೋಪಾಲಕರ ಕೂಡಿ ದಯಾಳು
ಬ್ರಹ್ಮಜ್ಞ ನಾರಿಯರ ಬಕ್ತಿರಸವನುಂಡನು ಅವರ್ಗೆ
ಬ್ರಹ್ಮ ನಿರ್ವಾಣವನಿತ್ತ ಪುರುಷಶೌಂಡನು ೭

ಮತ್ತೊಬ್ಬಳು ಬಾಪನ್ನಕ ಗಂಡ ತರುಬಲು ಆಕೆ
ಮುಕ್ತಿಪತಿಯ ನೆನೆದು ತನ್ನ ಪ್ರಾಣಬಿಟ್ಟಳು
ಇತ್ತ ಯಜ್ಞಪತ್ನಿಯರನ್ನವಿತ್ತು ಕೃಷ್ಣನ ಗುಣ
ಕೀರ್ತನೆ ಪಾಡಿ ಪರವಶದಲ್ಲಿದ್ದರಾದಿನ ೮

ಗೋಗೋಪರ ಜರಿಸಿ ಕೃಷ್ಣ ಪ್ರಜಕೆ ತೆರಳಲು ಈ
ನಾಗಗಮನೆಯರ್ದ್ವಿಜೈ ಮುಂದಕ್ಕೋಳದಿರಲು
ಯೋಗಿಧ್ಯೇಯ ವಿಶ್ವನಾಥನವರ ಮನ್ನಿಸಿ ಪೋಗ
ಲಾಗ ನಾರಿಯರ್ ತಮ್ಮತಮ್ಮ ವಾಟಿ ಹೋಪಲು ೯

ಯಜ್ಞ ದೀಕ್ಷ ಮುನಿಗಳವರ ಭಾವವರಿತರು ತಮ್ಮ
ಅಜ್ಞ ವೃತ್ತಿಯನ್ನ ನೆನೆದು ಖಿನ್ನರಾದರು
ಯಜ್ಞೇಶ್ವರರಿಗೀಶ್ವರನವಜ್ಞ ಮಾಡಿದ ಅಸ
ಭಿಜ್ಞರಾವು ನಮ್ಮ ಕರ್ಮ ಧಿಗಧಿಗೆಂದರು ೧೦

ತಮ್ಮ ಹೆಂಗಳ ಸುಕೃತಕ್ಕೆ ಒಪ್ಪಿಕೊಂಡರು ಇನ್ನು
ನಮ್ಮ ಜ್ಞಾನಯೋಗ ತಪವು ಸುಡುಸುಡೆಂದರು
ಬ್ರಾಹ್ಮಣರು ಪಶ್ಚಾತ್ತಾಪರಾಗಿ ನುಡಿದರು ಪೂರ್ಣ
ಬ್ರಹ್ಮ ಪ್ರಸನ್ವೆಂಕಟಕೃಷ್ಣನ ಒಲಿಸಿಕೊಂಡರು ೧೧

## ೩೬

## ಗೋವರ್ಧನೋದ್ಧಾರ

ರಾಗ : ಘಂಟಾರವ ತಾಳ : ಅಟ್ಟ

ನಿತ್ಯೋತ್ಸವ ಪುಣ್ಯಸಂಕುಲ ನಂದಗೋಕುಲ ನಂದಪುತ್ರನ ಲೀಲಾ
ಸ್ತೋತ್ರವ ಪಾಳ್ವರ್ಗೆ ಕಡೆಯಿಲ್ಲ ಶೇಷಗಳವಲ್ಲ ದುಷ್ಟದೈತ್ಯಹೃತ್ಶೂಲ
ಭೃತ್ಯದೇವಾನ್ವಯಪ್ರತಿಪಾಲ ವೇಣುಗೋಪಾಲ ವಿಕ್ರಮತ್ರಯಶೀಲ
ಮುಕ್ತಾಮುಕ್ತಾಮರಜನಧ್ಯೇಯ ಮುನಿಕುಲಗೇಯ ೧

ಗೋಷ್ಪದ ಜನರೆಲ್ಲ ಒಂದಿನ ದೇವೇಂದ್ರನ ಅಬ್ದತುಷ್ಟಿಗುತ್ಸವದಿ
ಮೃಷ್ಟಾನ್ನಪಾನ ಸಿದ್ಧವ ಮಾಡೆ ಇತ್ತತ್ತೋಡ್ಯಾಡೆ ಶ್ರೀಕೃಷ್ಣ ನಿಂದಿಸಿದ
ಇಷ್ಟಾರ್ಥವೀವ ಗೋವರ್ಧನ.ಗಿರಿವೃದ್ಧನು ಈತಗಿಷ್ಟು ಪೂಜೆಯನು
ಶಿಷ್ಟರು ಮಾಡ್ಯೆಂದಾಜ್ಞಾಪಿಸಿದ ಬುದ್ಧಿಗಲಿಸಿದ ಗಿರಿಗಿಟ್ಟು ಉಣಿಸಿದ ೨

ಬಹುಗುಣೋಪೇತಾನ್ನವುಂಡನು ಗೂಢಲಿಂಗನು ಆ ಮಹೀಧ್ರ ಪೊಕ್ಕನು
ಮ.ಹಾವಿಶ್ವತತ್ವವ ತೋರ್ದನಾ ಜನಾರ್ದನ ಕಂಡ ಸಹಸ್ರಾಕ್ಷ ಇದನು
ಬಹುಕೋಪ ತಾಳ್ವನು ಘನಮೊತ್ತಕಾಜ್ಞೆಯನಿತ್ತ ಸಪ್ತಾಹ ಮಳೆಗರೆದ
ಶ್ರೀಹರಿಯ ಕೃಷ್ಣನೆಂಬುದು ಮರೆತ್ಯೈಶ್ವರ್ಯೋನ್ಮತ್ತ ಪ್ರಳಯದಹನಿಯಿಂದ ೩

ಆಕ್ರಂದಿಸಿದ ಪ್ರಾಣಿಗಳನ್ನೆಲ್ಲ ನೋಡಿ ಸಿರಿನಲ್ಲ ಪರಾಕ್ರಮಶೀಲ
ನಕ್ಕು ಸತ್ವರಪಲ್ಲವದಿಂದ ಗಿರಿಯೆತ್ತಿದ ಚಿಕ್ಕ ಮಕ್ಕಳಾಟ್ಕೆಲೀಂದ್ರ
ನಕ್ಕತ್ತಾಡುವಂತೇಳ್ದಿನ ಮತ್ತಸೂದನ ತನ್ನ ಒಕ್ಕಲುಳುಹಿದ
ಅಕ್ಕರದಿ ದೀನವತ್ಸಲ ಜಿತಖಳಜಾಲ ಇಂದ್ರನುಕ್ಕನು ಮುರಿದ ೪

ಆರೋದಿನಿಂದ್ರ ಘೋರ್ಮಳೆಗರೆದ ಹರಿಯೆಲ್ಲರ ಹೊರೆದ ನಿತ್ಯಭೂರ್ಯನ್ನಪಾನ
ಚಾರುಶಯ್ಯಾಸನಪತ್ರನು ವಿಶ್ವಕರ್ತನು ಶ್ರೀನಾರಾಯಣನು
ಸಾರಿದ ಸಜ್ಜನರನು ಕಾವ ಯೋಷಾದ್ವರ ದೇವ ಸಾಸಿರನಯನನು
ಶ್ರೀರಮಣನ ಮಹಿಮೆ ನೋಡಿದ ಪ್ರಯಾಣಮಾಡಿದ ಇಳೆಯಸಾರಿ ಸ್ತುತಿಸಿದ ೫

ಪ್ರಿಯೋಕ್ತಿಗಳ ರಚನೆಯಿಂದ ಉಪನಿಷದಿಂದ ಸಾಧುಪ್ರಿಯಗೋವಿಂದ
ನಾಯೀನನರಿಯೆ ನಿನ್ನವನೆಂದ ತನ್ನ ಸಲಹೆಂದ ವಿಧಿವಾಯು ಭವಾದ್ಯಮರ
ನಾಯಕ ಜನಕೆಲ್ಲ ಗುರು ನೀನು ಬಾಲಕ ನಾನು ಜಗನ್ನಿಯಾಮಕನು
ನೀಯಾಕಳ ಕಾವ ಬಗೆ ಹೇಳೊ ಮಹಾದಯಾಳೊ ಎನ್ನಯ ತಪ್ಪುತಾಳೊ ೬

ವೇದಕ್ಕೆ ನಿಲುಕದ ಗುಣವಾರಿಧಿ ವಿಶ್ವಕ್ಕೇಕಾದಿ ವೇದೋದರಜನಕ
ಆಧಾರ ಪೋಷಕ ಶಿಕ್ಷಕ ಮೋಕ್ಷದಾಯಕ ನಿನ್ನ ಸದೃಶರಾರಿಲ್ಲ
ಅಧಿಕರ್ಕಾಲತ್ರಯದಲಿಲ್ಲ ಲಕುಮಿಯ ನಲ್ಲ ನಿನ್ನ ಹೊರತಾರಿಲ್ಲ
ಈ ದತ್ತ ಸಿರಿಯಿಂದ ಉಕ್ಕಿದೆ ಮದಸೊಕ್ಕಿದೆ ಬಂದು ಪಾದಕೆರಗಿದೆ ೭

ಕ್ಷಮಿಸೆನ್ನವಗುಣ ದಯಮಾಡೈ ಕೃಪೆಯಲಿ ನೋಡೈ ಪಾದಕಮಲವಾಶ್ರೈಸಿದೆ
ಕುಮತಿ ನಿನ್ನ ಪರನು ಕೆಡಿಸಿದೆ ಕೇಡನೆಣಿಸಿದೆನೆಂದು ಅಮರೇಂದ್ರ ತುತಿಸಿ
ನಮಿಸಿ ನಮಿಸಿ ತಾ ನುಡಿಯಲು ಕೃಷ್ಣ ದಯಾಳು ತಾ ಕ್ಷಮಿಸಿ ನುಡಿದನು
ಅಮರೇಶ ನಿನ್ನರ್ಚನೆ ಕೆಡಿಸಿದೆ ಮದವಿಳಿಸಿದೆ ಇನ್ನು ಭ್ರಮೆ ಬೇಡೆಚ್ಚರವು ೮

ಸುರಭಿ ಪಯೋಧರ ತೊರೆದಳು ಮಳೆಗರೆದಳು ಶ್ರೀಹರಿಗಭಿಷೇಕ
ಪರಮ ಭಕುತಿಯಿಂದೆರೆದಳು ಸ್ತುತಿ ಮಾಡ್ದಳು ನಮಿಸಿ ಸುರಪತಿಯೊಡನೆ
ಸುರಲೋಕಕ್ಕೈದಿದಳ್ ಮಾನಿಯು ಹವಿರ್ದಾನಿಯು ಈ ಹರುಷವಾರಿಧಿಯು
ವರಗೋಕುಲಸ್ಥರ ಸುಖಿಸಿತು ನಿತ್ಯ ನಲಿಸಿತು ಶ್ರೀಪರಸನ್ವೆಂಕಟದಯದಿ ೯

## ೩೭

## ವರುಣಪಾಶ ಬಂಧಮೋಚನ

**ರಾಗ : ತೋಡಿ** **ತಾಳ : ಏಕತಾಳ**

ಹರಿಪ್ರವಣರು ಗೋಪಾಲಕರು ಶ್ರೀ
ಹರಿಕಥಾಮೃತ ವ್ರತಸ್ತುತಿರತರು ಪ.

ಕಾಯುವು ಕೇಳ್ವವು ಕೊಯುವು ಕೊಡುವವು
ಸಂಭಾಷಣ ಪ್ರಾಣ ನಡೆ ಶ್ವಾಸ
ಸಂಸ್ಪರ್ಶ ಮನೋರಥೇಷ್ಟ ವಸ್ತ್ವಾತ್ರಯ
ಅಂಬುಜನಾಭಗರ್ಪಿಪರು ೧

ಕರಣತ್ರಯವು ಸುಕೃತ ದುಷ್ಕೃತ ಬಂಧಕವು
ಪರಮಪದವು ಸತ್ಪಾತ್ರಯವು
ಹರಿಯಧೀನವು ಸಿರಿಸರಸಿಜಭವ
ಪರಸುರರ್ ಹರಿದಾಸರೆನುತಿಹರು ೨

ಗೋದೋಹನ ರಥ್ಯದಯ ದಧಿಮಂಥನ
ಮೋದಗೃಹದ ಕೃತ್ಯಾದಿಯಲಿ
ಶ್ರೀಧರ ಬಲಭದ್ರರೌದಾರ್ಯ ವಿಕ್ರಮ
ಆದರದಲಿ ನಿತ್ಯ ಪಾಡುವರು ೩

ಮರಿದಿನ ನಿರಶನ ನಿರ್ಜಲವ್ರತದಲಿ
ಹರಿಜಾಗರ ಮಾಡಿ ವ್ರಜನಾಥ
ವರ ಯಮುನಾಸ್ನಾನವ ಮಾಡುತಿರಲು
ವರುಣದೂತರು ಕಟ್ಟಿಕೊಂಡೊಯ್ಯಲು ೪

ಹೇ ಕೃಷ್ಣ ರಾಮ ಎನುತ ಕೂಗಿದರು ಅ
ನೇಕಾರ್ತಸ್ವರದಲಿ ಗೋವಳರು
ಶ್ರೀಕೃಷ್ಣ ಕೇಳಿ ವರುಣಾಲಯಕೈದಲು
ಶ್ರೀಕಾಂತನ ಕಂಡು ಪ್ರಣಮಿಸಿದ ೫

ತವ ಪಿತನ್ನರಿಯದೆ ದೂತರು ತಂದರು
ಭವಹರ ತ್ರಾಹಿ ತ್ರಾಹಿ ಪಾಹಿಯೆನುತ
ಸ್ತವಿಸಿದ ಈ ಘನ ಸವೆಯದ ತಪ್ಪು ಕ್ಷಮಿ
ಸ್ಯವಲೋಕಿಸು ನಿನ್ನ ಭಟನೆಂದ ೬

ಇಂದೆನ್ನ ಜನ್ಮ ಸಫಲವು ಸರ್ವಸಿದ್ಧಿ
ಇಂದಿಗೆ ನಿನ್ನ ಪದವಾರಿಜವ
ಹೊಂದಿದೆ ನಮಿಸಿದೆ ಮಹಿಮೆಯನರಿಯದೆ
ತಂದರು ತಂದೆಯ ತಂದೆ ನಮೋ ೭

ಬಲು ಅಪರಾಧವ ಕ್ಷಮಿಸು ದಯಾನಿಧೆ
ಸಲೆ ನಿನ್ನಯ್ಯನ ಗ್ರಹಿಸು ಪರೆ
ಸಲಹೆನ್ನನು ಎಂದು ಬಹಳ ಭಕುತಿಯಿಂದ
ನಳಿನಭವೇಶನ ಪೂಜಿಸಿದ ೮

ಎನ್ನ ಸಂಶಯವೆಲ್ಲ ದೂರವು ಯದುಪತೆ
ಧನ್ಯನಾಗಿಹೆ ತವಾರ್ಚನೆಯಿಂ
ಎನ್ನುತ ಪುನಃ ಪುನಃ ಪ್ರಣಮಿಸಿ ರಮೆಯರ
ಸನ್ನನ ಪ್ರಸನ್ನೀಕರಿಸಿದನು ೯

ಅಷ್ಟಂಗೆ ತಾನಭಯವನಿತ್ತು ಶ್ರೀಪತಿ
ತುಷ್ಟನಿಗಾಶ್ಚರ್ಯ ತೋರ್ದ ಹರಿ
ಒಪ್ಪುವ ಬಂಧು ಬಳಗಕೆಲ್ಲ ಹೇಳಿದ
ತಪ್ಪದೆ ನಂದವ್ರಜಕೆ ಬಂದು ೧೦

ಅತ್ಯಾನಂದದಿ ನುಡಿದರು ನಿನ್ನ ಮಗ
ಮುಕ್ತಾಮುಕ್ತವಂದಿತಚರಣ
ನಿತ್ಯಾನಂದನ ಈಶ್ವರತ್ವವ ನಾವ್
ಪ್ರತ್ಯಕ್ಷ ನೋಡಿದೆವೆಂದರವರು ೧೧

ತನ್ನೀಶ್ವರತ್ವದ ಬಗೆಯನು ತಿಳಿಯದೇ
ಕೆನ್ನುವ ನಿಜಭಕ್ತ ಗೋವಳರ
ಬಿನ್ನಹವಾಲಿಸಿ ಬ್ರಹ್ಮ ಹ್ರದದೊಳು
ಚೆನ್ನಾಗಿ ಮುಳಗಿಸಿ ತೋರಿದನು ೧೨

ಅವಿದ್ಯಾಕಾಮ್ಯ ಕರ್ಮವ ಮಾಡಿ ಬಲು ಬಲು
ಹೇವದಿಂ ಸ್ವರ್ಗಭವಕ್ಕೈದುತಿಹ
ಪ್ರಾವೃತರ್ದ್ಧಳಿಯುವ ವೌನಿಜನಸ್ಥಳ
ದೇವ ತೋರಿದ ಅಪವರ್ಗವನು ೧೩

ಅನಂತ ಛಂದಸ್ಸುಗಳಿಂದ ಸ್ತುತ್ಯನನು
ಆನಂದ ಜ್ಞಾನಮಯ ರೂಪನನು
ಆ ನಂದಗೋವರಾನಂದದಿ ಕಂಡರು
ಆನಂದ ಯೋಗಮಯನಾಶ್ರಿತರು ೧೪

ಅತ್ಯದ್ಭುತ ಮಹಿಮಾತಿಶಯನ ಕೃಷ್ಣ
ಸತ್ಯೇಶ ಭವ ವಿಪಾಟಿಪರಿಂ ಸುತನು
ನಿತ್ಯಾನಂದ ಪ್ರಸನ್ವೆಂಕಟಕೃಷ್ಣ
ಭಕ್ತರು ಜೀವನ್ಮುಕ್ತರವರು ೧೫

## ೩೮

## ರಾಸಕ್ರೀಡೆ

**ರಾಗ : ಕೇದಾರಗೌಳ** **ತಾಳ : ಜಕ್ಕಣಿ (?) [ಏಕತಾಳ]**

ಕಾಮನಯ್ಯನ ಕಾಮಿನಿಯರ ಕಾಮುಕ ಭಕ್ತಿಯೆ ಮುಕ್ತಿ
ಸೋಮಕುಲಾಬ್ಧಿಸೋಮ ನೀರದಶ್ಯಾಮನ ಪ್ರೇಮಪಾತ್ರರು ಪ.

ಮುಗ್ಧಾಂಗಿಯಳ ಮುಖವನು ಪ್ರಿಯನು ಸ್ನಿಗ್ಧ ಸುಹಾಸದಲಿ ಚುಂಬಿಸುವಂತೆ
ದುಗ್ಧಾಬ್ಧಿಯ ಜಾತನುದಯವಲಿ ಪ್ರಾಕ್‌ದಿಗ್ವಧು ಸಂಗವ ಮೆರೆಯಲು
ಸುಗ್ಗಿಯಾಯಿತು ಗೋಪಾಲಕರ ವಧುವರ್ಗಕೆಯೆಲ್ಲ ಕಬ್ಬುಬಿಲ್ಲಿನವನ ಸು
ವರ್ಗಣಕ್ಕೆ ಮರುಳಾಗೋಂಡರಾಗವರ್ ಉಗ್ಗಡ ವೇಣುನಾದಕ್ಕೆ ೧

ಕುಸುಮ ತರುಲತಾಖ್ಯ ಶಿಶುಗಳೆಸೆವ ಕರಸ್ಪರ್ಶದಿಂದಲಿ
ಶಶಿಯು ಪರಾಮೃಶವ ಮಾಡಿ ಸುಸುಖವೀವ ತೆರದಲಿ
ಪಸರಿಸಿದನು ಶೀತಕಿರಣಗಳ್ ಬಿಸಜಸಖನ ತಾಪವಡಗೆ
ಶಿಶಿರರುತುವಿನ ಯಶಸು ವನದಿ ಶಶಿಮುಖಿಯರೆದೆಗೆ ಇಳಿತು ೨

ಶ್ರೀಕರನ ವಾ(ಅ?)ರುಣ ಕುಂಕುಮದಿಂದ ಲಕುಮಿ ಮುಖವು ಒಪ್ಪುವ ತೆರದಿ
ಸಂಕಲಾನಿಧಿಯ ಬಿಂಬವ ವನದಿ ಶ್ರೀಕೃಷ್ಣ ಕಂಡು ವೇಣುವನು
ಬೇಕಾದ ವಾಮದೃಶೆಯರಿಗೋಸುಗನೇಕ ಮಂಜುಳ ರಾಗಂಗಳ ನುಡಿಸಿದ
ಆ ಕಾಂತೆಯರಾಗ ಕೇಳಿದರು ಮಾರಸಾಯಕದಿ ಉರುಚಿತ್ತವೇಗದಿ ೩

ನೂಕಿ ಲಜ್ಜೆಯನು ನಡೆದರೆಲ್ಲರು ಶ್ರೀಕಾಂತನನ್ನೊಡಗೂಡಲಾಗಿ ಮನೆ
ಯ ಕೆಲಸವನು ಬಿಟ್ಟು ಮೋಹಿಸಿದರ್ ಮಕ್ಕಳು ಸ್ವಕೀಯ ಪುರುಷರ
ಆಕಳ ಕರೆಸಿ ವೃಷಕೆ ಮೇರುವ ಹಾಕಿ ಶಿಶುಗಳಾಕ್ರೋಶವ ಕೇಳದೆ
ತೋಕರೆಂದಳತೀ ಮಾನವೆತ್ತಿಕೊಂಡು ರಾಕಾಚಂದ್ರಾಸ್ಯೆಯರು ನಡೆದರು ೪

ಕರೆದ ಹಾಲ ಬಿಸುಟು ತಮ್ಮಯ ತರಳರ್ಗೆ ಸ್ತನ ಪೂರ್ಣ ಕೊಡದೆ
ಪರಿವೇಷಣವ ಮಾಡುತ ಬಿಟ್ಟರು ಹರಿಯ ಕೊಳಲ ಧ್ವನಿಕೇಳಿ ೫

ಕರವಲಯವ ಕಾಲಿಗಿಟ್ಟುಕೊಂಡು ಚರಣಭೂಷಣ ಕೈಗೆ ಸಿಕ್ಕಿಸಿ
ಕರಣಕುಂಡಲ ನಾಸದಲಿಟ್ಟು ಬರಿಯ ಮೂಗುತಿ ಕಿವಿಗಿಟ್ಟು
ಕೊರಳ ಮಾಲೆಯನೆ ಕಟಿಗೆ ಸುತ್ತಿ ಕೊರಳಿಗೆ ಕಾಂಚೀದಾಮವ ಹಾಕಿ
ನೆರೆ ನಿವಾರಿಸುವರನು ನೂಕಿ ಪರಮಪುರುಷನೈದಿದರು ೬

ಭವನ ಧವನ ಬಿಟ್ಟು ಸಿರಿಮಾಧವನ ಭಕುತಿಯಿಟ್ಟು ವಿರಹದಾ
ಹವದಿ ನೊಂದು ವಿಷ್ಣು ಭಾವುಕರವರು ಪೂರ್ಣರವರಸ
ಸವಿದು ಪ್ರಿಯವಿಯೋಗ ದುಸ್ಸಹ ಲವಯುಗವೆಂದು ಗುಣತ್ರಯಂಗಳ
ಹವಣ ಮುರಿದು ಜಾರ ಭಕುತಿ ಭಾವದಿ ಅಚ್ಯುತನ ನೆನೆದರು ೭

ಅವ್ಯಕ್ತಪ್ರಮೇಯ ಗುಣಗಣಾಬ್ಧಿಯು ಸುವ್ಯಕ್ತವಾಡಿದ ಕಾಮಿನಿಯರ್ಗೆ ಸ್ನೇಹ
ನವ್ಯ ನವ್ಯ ಸುಖವನಿತ್ತ ನಿರ್ಲಿಪ್ತ ಭಾವ್ಯಜ್ಞಾನಾತ್ಮ ಮೂರುತಿದೇವ
ದಿವ್ಯಜ್ಞಾನವು ಭಕ್ತಿಭರಿತಗೋಪರ್ಗೆ ದಿವ್ಯ ಜ್ಞಾನೋಪದೇಶವನು ಮಾಡಿದ
ದಿವ್ಯಜನಗುರು ಮೋಹಿಸಿದನು ಕಾಮವ್ಯಥೆ ಉದ್ರೇಕವಾಗುವಂತೆ ೮

ಆ ಗೋಪ್ಯ ನಾರಿಯರ ನೋಡಿ ಮುಕುಂದ ಈಗಾಗಮನವೇಕೆಂದ ನಿಮಗೆ ಭೀಕರಾ
ವಾ ಘೋರ ರಾತ್ರಿಲಿ ದುಷ್ಟವಿಹಾರವು ನಾಗಾರಿಮಧ್ಯೆಯರ್ಗುಚಿತವಲ್ಲ
ವೇಗದಿ ನಿಮ್ಮಾಪ್ತರು ಅರಸಿ ಕಾಣದಾಗಿದ್ದು ವೇದ ಮಾಳ್ಪದೆ ಅಧರ್ಮವು
ಸಾಗಿ ಬಂದುದಕೆ ಕಂಡಿರಿ ನಮ್ಮನು ಪೂಗೊಂಚಲು ತರುಲತೆಗಳ ೯

ರಮ್ಯವನವು ಪಲ್ಲವ ಶಾಖೆ ಕುಂಜ ಯಮುನಾನುಜಾವೇಗ ಸೌಂದರ್ಯ ನೋಡಿ
ನಿಮ್ಮ ಮುಖ ಬಾಲಕಾರ್ಕ ದೀಪದಲಿಯೆ ನಿಮ್ಮಾಳ್ವತ್ತೆ ಮಾವ ಪುರುಷರ
ಸಮ್ಮತವಲ್ಲ ಉಪೇಕ್ಷೆಯು ಸ್ತ್ರೀಯರ ಜನ್ಮಕ್ಕೆ ಪರ್ಯಾರ ಸೇವೆಯೇ ಮುಖ್ಯವು
ಧರ್ಮವಲ್ಲನ್ಯಪುರುಷರ ಸೇವೆಯು ಸಖ್ಯ ಸಂಭಾಷಣ ಸಹವಾಸವು ೧೦

ನನ್ನೀಕ್ಷಣ ಶ್ರವಣ ಕೀರ್ತನೆ ಧ್ಯಾನದ ಪುಣ್ಯವೇ ಅಧಿಕವಾ ಮತ್ಸೇವೆಗೆ
ಸನ್ನಿಕರಷಣ ಫಲವಧಿಕವಲ್ಲ ಇನ್ನೈದಿರೆಂದ್ಹರಿ ನುಡಿದರೆ
ಕನ್ಯೆಯರಿಗೆ ಹೃತ್ತಾಪವಡರಿತು ಇನ್ನೇಕೀ ಜನ್ಮವೆನುತಾರ್ತಸ್ವನದಿ
ಚಿನ್ಮಯ ಹರೆ ವ್ಯರ್ಥವಾಯಿತು ಎಂದು ವಾಕ್ ಸನ್ನಿರೋಧರಾಗಿ ತಲೆಬಾಗಿ ೧೧

ಕಣ್ಣಲಿ ಅಶ್ರು ತುಂಬಿ ಬಂದು ಧಾರಿಟ್ಟುವು ಪೊನ್ಗೊಡಮೊಲೆಯ ಗಂಧಾನು
ಲೇಪದ
ಹೊನ್ನ ಕುಪ್ಪಸವ ತೋಯಿಸಿದವಿಳೆಯ ಕನ್ಯೆರಂಗುಟದಿ ಲೇಖಿಸುತ್ತ

ಚಂದಾದ ಪ್ರಿಯಾಂಕಿ ಕೊರಳಿಂದ ಗೋಪೀರ ವೃಂದದಿ ರಾಜೀವ ನೀಲೋತ್ಪಲ ಕುಸುಮ
ಗಂಧ ಮಾರುತನಿಂ ಗಾನಕೇಳಿ ಕುಂದರನಾದಿಯರು ನಂದದಿಂದ ೧೮

ಕಾಳಿಂದಿಕೂಲ ಭ್ರಾಜದ್ವ್ಯಾಸಂಗಳಲಿ ಆ ಲೋಲನೇತ್ರೇರ ಕ್ರೀಡಿಸಿ ಅಲ್ಲಲ್ಲಿ
ಮುಕ್ತಿಮಾರ್ಗದ ಕೋಳಿಲಿ ಕೋಳಿಟ್ಟು ಭಾಳ ನರ್ಮೋಕ್ತಿಯಿಂದಲೊಪ್ಪಿ
ಪ್ರೀಳೋಲ ವಾಸೋಕ್ತಿಗಳಿಂದ ಕೂಡಿ ಕರಾಳ ಕ್ರೀಡೆಯಿಂದ ವಾಸವ ಜಗುಳಿಸಿ
ಮೇಲಿಟ್ಟಿನ ಮೊಲೆಯಲ್ಲಿ ಲೇಪಿಸಿದ ನಾಲು ಕರಜಾಗ್ರಗಳಿಂದಲಿ ೧೯

ಕಾಮಾಗ್ನಿಯಿಂ ತಪ್ತರಾದಯುವತಿಗೆ ಪೂರ್ಣಕಾಮ ಮನ್ನಿಸಿದರೆ ಮತ್ತರಾದರು
ಪ್ರೇಮಾವಲೋಕನ ಭಾಗ್ಯವುದಿಸಿತು ಸೋಮಪೂರ್ಣ ಸುಮುಖಿಯರಿಗೆ
ಶ್ರೀ ಮಾಧವ ತಮ್ಮ ವಶ್ಯನೆಂದರಿತು ವಾಮಭ್ರುಕಿಯರು ತಿಳಿದರಾಕ್ಷಣ
ಈ ಮಾನದಭಾವ ಕಂಡು ನೀರೇರ ತಾ ಮತ್ತೆ ಅಪ್ರತ್ಯಕ್ಷನಾದನು ೨೦

ಶ್ರೀ ಭೂದುರ್ಗಾಲೋಲ ವಿಧಾತಪಿತನು ತ್ರಿಭುವನೇಶ್ವರ ತ್ರಿಭುವನಾಧಿಪ
ಭೂಭೃತ ಸಂಭೃತ ಸನ್ನುತ ಪ್ರೀಪದ್ಮನಾಭನಂತಾನಂತ ಭಾನುಭಾ
ಭೂಭಾರಸಂಹಾರವಾರಕ್ಕೆ ಸಾಕಾರ ಸ್ವಭಾವ ಪ್ರಭವ ಜ್ಞಾನಾನಂದಭರ
ಶ್ರೀಭೃತ್ ಪ್ರಸನ್ನವೆಂಕಟಕೃಷ್ಣ ಸರ್ವೇಷ್ಟ ಶೋಭಿಸಿದನು ಪ್ರಜದಿ ೨೧

## ೩೯

**ರಾಗ : ಬೇಗಡಾ** **ತಾಳ : ಅಟ್ಟ**

ಶ್ರೀಕೃಷ್ಣ ಒಮ್ಮಿಂದೊಮ್ಮಿರುಳೆ ತನ್ನ ಕೃತಿಯಡಗಿಸಿ ಮರಳೆ
ಗೋಕುಲದರಸೇರ್ಗೆ ವ್ಯಾಕುಲಚಿತ್ತವು ಶೋಕಸಮುದ್ರವು ಮುಂದೋರೆ ಪ.

ಪ್ರೇಷ್ಠಾನುಪ್ರೇಷ್ಠನಂತಾಗೆ ಗುಣೋತ್ಕೃಷ್ಟವ ಪಾಡಿದರಾಗೆ
ಕಷ್ಟ ಭ್ರಾಂತಿಯಲಿ ತರುಲತೆ ನದಿಯೊಳ್ಕೈಥೇಷ್ಟ ನುಡಿಯ ನುಡಿದರಾಗೆ ೧

ಸೃಷ್ಟಿಯೊಳ್ ಪರಿಪೂರ್ಣ ಪರಿಯ ಕಂಗೆಟ್ಟು ಕೇಳುವದಾಶ್ಚರ್ಯ
ವೃಷ್ಣಿಕುಲೇಶನು ಬಿಟ್ಟನು ನಮಗೇನಂ ಬಟ್ಟೆ ಹೇಳಿದ ಹೇಳಿ ತ್ವರಿಯ ೨

ಪಿಪ್ಪಲ ನ್ಯಗ್ರೋಧ ಬದರಿ ನೀಪ ಸಂಪಿಗೌದುಂಬರ ಹವರಿ
ಅಪ್ಪುತಪ್ಪುತ ಪೋದ ನಾರೇರ ನಂದಪ ತಪ್ಪಿಸೈದಿದನು ಕಂಡಿಹಿರೆ ೩

ಕುರವಕಶೋಕೆ ಕಿಂಶುಕವೇ ಶ್ರೀ ಹರಿಪ್ರಿಯ ತುಲಸಿಯೂಥಿಕವೆ
ಸುರಹೊನ್ನೆ ನಾಗ ಪುನ್ನಾಗವೆ ಬಲ್ಲಾನೀರವಲ್ಲಿ ಕಂಡಿಲ್ಲವೆ ೪

ಮರುಗ ಮಲ್ಲಿಗೆ ಮಾಲತಿಯೆ ಬಕ್ಕೆ ವರಜಾಯಿ ಜಾತಿ ಸಂತತಿಯೆ
ಸುರಗಿ ಶಾವಂತಿಗೆ ಬಕುಲ ಕೋವಿದಾರ ಪರಮಪುರುಷನಿಲ್ಲಿ ಎಲ್ಲೆ ೫

ಕುಂದಿರಾ ಮಾಧವನಿಂದೆ ನದಿ ತಂದ ತಂಡದ ಮಾರದ ಮಾಂದೆ
ಪುಂಡರೀಕಾಕ್ಷನ ಕರಲವಾಮೃತವನುಂಡುಂಡ ಸ್ವಾಬಳ್ಳಿಯೆ ವೃಂದೇ ೬

ಹರಿಪಾದ ಸ್ಪರ್ಶ ಪುಣ್ಯಧಾತ್ರೆ ಶ್ರೀ ಹರಿಯಶಸ್ತ್ರೀ ಪಾರಿಜಾತೆ
ನರೆ ನಮ್ಮ ಕುಲಸ್ವಾಮಿ ಬರಲಿಲ್ಲವೇ ಇಲ್ಲಿ ಪರಮಪುರುಷ ಕುಂದಜಾತೆ ೭

ಇಂತು ತರುಲತೆ ಭ್ರಮರಗಳ ಕೇಳಿ ಕಾಂತೇರು ವಿರಹಾಗ್ನಿದಿಗಿಲ
ಶಾಂತಿಲ್ಲದೆ ಕಂಡರು ಭುವಿಯೊಳು ಶ್ರೀಕಾಂತನ್ಹೆಜ್ಜೆ ಪೊಂದಿದವಳ ೮

ಪತಿಯ ಕೂಡೈದಿದವಳ ಕಂಡು ರತಿಪತಿಯ ಮಾರ್ಗಣೆ ತಾಕಿದ್ದಂಡು
ಪತಿ ತನ್ನಂಗನೆಯಳ ರತಿಯಿಂದಪ್ಪುವಂತೆ ಸಖಿಯ ತೋಳಿಲಿ ತೋಳಿಟ್ಟಿಹನೆಂದು ೯

ಪರಮ ಸುಕೃತಿಯವಳೆಂದು ದುಃಖಭರಿತರಾಗಿ ನಡೆತಂದು
ಧರೆಯ ಮೇಲವಳ್ಹೆಜ್ಜೆ ಅಡಗಿದ್ದವಲ್ಲಿ ಶ್ರೀ ಹರಿ ಹೆಜ್ಜೆ ಕಂಡೆಂದು ನೊಂದು ೧೦

ನುಡಿದರು ಹೃತ್ತಾಪದಿಂದ ತನ್ನ ಮಡದಿ ಬಳಲಿದಳು ಹಾ ಹಾಯೆಂದು
ಹೆಡಕನೇರಿಸಿಕೊಂಡು ನಳಿನನಯನ ನಿಂತ ಅಡಿಗಳು ಜಡಿದವು ಇಳೆಯಲ್ಲಿಂದು ೧೧

ಲಲನೇರೆ ನೋಡಬನ್ನಿ ವನಿತ ಚಂಚಲದಿಂದ ಸುಯಿಲಿಡಿ ಇಡುತ
ನಳಿನಜ ಸುರರಿಗೆ ಹರಿಯಂಘ್ರಿ ರಜಾಮೋಘ ಈ ಕೆಳದಿಗೆ ಹೆಗಲಿತ್ತ ನಾಥ ೧೨

ಹೆಗಲನೇರಿದವಳ ಕೈಯಿಂದ ಹೂವ ತೆಗೆಸಿದನಿಲ್ಲಿ ಗೋವಿಂದ
ಜಗತೀಲವನ ಪಾದಪದ್ಮ ಒಪ್ಪುತಿವೆ ಮಿಗೆ ಧ್ವಜ ಚಕ್ರಾಬ್ಜದಿಂದ ೧೩

ಕೇಶ ಪ್ರಸರಣವ ಮಾಡಿ ಹೂವ ಕೇಶಕ್ಕೀಶ ಮುಡಿಸಿದ ನೋಡೆ
ಕೇಶವನು ಬಳಿಗಭೀಷ್ಟ ಪೂರೈಸಿದ ಈ ಸೌಖ್ಯ ನಮಗಿಲ್ಲ ಪ್ರಾರ್ಥೆ ೧೪

ಹೀಂಗೆ ಪ್ರಲಾಪಿಸುವುದನು ದಯದಿ ಶ್ರೀ ಗೋಪಿನಾಥ ತಿಳಿದನು
ಹೀಂಗವಳ ಮೇಲೆ ತಾ ಸ್ನೇಹ ಮಾಡಲ್ಕೆ ಬೇಗ ಸೊಕ್ಕಿದಳವಿವೇಕೆ ೧೫

ಎಳೆಯರಿನಿಯರ ಇಷ್ಟರಾಪ್ತರ ಬಳಿಪ ಮೀರುತ ಬಂದೆವಚ್ಯುತ
ಲಲಿತ ಗೀತದಾಲಾಪ ಮೋಹನಾಬಲೆರ ಸ್ವೈರಕೆ ಬಿಟ್ಟ ಕುಹಕ ೧೬

ಮುಗುಳ್ನಗೆ ಮೊಗದ ಮೋಹ ನೋಟವು ಮುಗುಳಗಾಣೆಯನು ಮೀಟುವ ಘನ
ಮುಗಿಲು ನಿಮ್ಮೆದೆ ಮಾಟ ಕಂಡದೆ ಬಗಿದು ಅಪ್ಪುವೆಂಬೆಸೆವ ಮೋಹವು ೧೭

ಆಕಳ ಕಾವರಾಪುಂಗವಾಹರ ಪ್ರಕಟ ನಿನ್ನವಂ ಪಾಪ ಪೋಪುದು
ಸ್ವಕೀಯರಾರ್ತಿಹ ಸರ್ವರೋಗಹ ನಿಖಿಳರಾಶೆಯ ನೀ ಪೂರೈಸಯ್ಯ ೧೮

ಪ್ರಸನ್ನವೆಂಕಟಾ ಪಶುಪ್ರಪಾಲಕಾ ಅಕಿಂಚನಗೀತವ ಅರಿತು ಮಾಧವ
ಪ್ರಸನ್ನನಾಗುವಾಪತ್ತು ಹರಿಸುವ ಲಲನಾಮಣಿಯರೊಳು ಸ್ನೇಹತಪ್ತರಾ ೧೯

ಇತಿ ಗೋಪ್ಯಃ ಪ್ರಗಾಯಂತ್ಯಃ ಪ್ರಲಪಂತ್ಯಶ್ಚ ಚಿತ್ರಧಾ
ರುರುದುಃ ಸುಸ್ವರಂ ರಾಜನ್ ಕೃಷ್ಣದರ್ಶನ ಲಾಲಸಾಃ ೨೦

ತಾಸಾಮಾವಿರಭೂಚ್ಛೌರಿಃ ಸ್ಮಯಮಾನ ಮುಖಾಂಬುಜಃ
ಪೀತಾಂಬರಧರ : ಸ್ರಗ್ವೀ ಸಾಕ್ಷಾನ್ಮನ್ಮಥ ಮನ್ಮಥಃ ೨೧

## ೪೧

**ರಾಗ : ಸಾವೇರಿ** **ಚೂರ್ಣಿಕಾವೃತ್ತ**

ಈ ಪರಿ ಗೋಪಿಜನರಾಪರಲಾಪಿಸೆ ತಾಪಿಸೆ
ಶ್ರೀಪತಿ ಭೂಪತಿ ಗೋಪತಿ ತಾ ಪರಾತ್ಪರನೈಸೆ
ಆಪದ್ಧಾರಕ ವ್ಯಾಪಕ ರೂಪಕ ತಾ ಪುನರಪ್ಯುದಿಸೆ
ಭೂಪತಿವಂಶಪ್ರದೀಪಕ ಗೋಪಿ ಸಮೀಪಕೆ ಬರೆ ಥಳಥಳಿಸೆ ೧

ದಿನಮಣಿ ಗಣಮಣಿ ಮೌಳಿಮಕರಕುಂಡಲಮಂಡಿತ ಗಂಡ
ವನಜನಯನ ತಣ್ಣಗಿರಸಂತಿರುವ ತುಂಡ
ಘನನೀಲನಿಭತನು ಕರಿಕರಾಭ ದೋರ್ದಂಡ
ಮನೋಜಜನಕ ಸಿರಿವನಿತಾನನನವೀನ ನೀರಜ ಚಂಡ ೨

ಮಿನುಗುವೆಳೆನಗೆ ಮೋಹನ ಭ್ರೂ ನಟನವಿಲಾಸದ ಶೌಂಡ
ವನಸ್ರಗ್ವೈಜಯಂತಿಧರ ಘನ ಕೌಸ್ತುಭಕೇಯೂರ ಚಿರರುಚಿರಾಂಬರೋದ್ದಂಡ

ಕ್ವಣತ್ ಕಿಂಕಿಣಿ ಕಂಕಣನಾದ ಸುನೂಪುರ ಮಂಜುಳ ಮಂಡಿತ ಗಂಡುಗಲಿ ಪುಂಡರ
ಹಿಂಡಿನ ಗಂಡ
ಎನುತಲಿ ವನಿತೇರು ಪ್ರಸನ್ವೆಂಕಟನ ಕಣ್ಣಾರೆಯು ಕಂಡರು ತಂಡ ತಂಡ ೩

## ೪೨

ರಾಗ : ಕೇದಾರ ತಾಳ : ಅಟ್ಟ

ತೋರಿದಾ ತನ್ನ ತೋರಿದಾ ತನ್ನ ಸಾರಿದ ನಾರೇರ ಪೋರೆ ಇದುರಿನಲ್ಲಿ ಪ.

ಶ್ರೀಕೃಷ್ಣ ನಂದನೆಂದೆನುತ ಗೋಪಿಯರು ಅನೇಕ ಪ್ರಕಾರದಿ ರೋದಿಸುತಿಹರು
ಪಿಕ ಸುಸ್ವರದಿ ಹಾಡುವ ನಿಷ್ಠೆಯ ನೋಡಿ ತಾ ಕರುಣಾಂಬುಧಿ ಉದಯವಾದ ೧

ಮಂದಸ್ಮಿತಾನನ ಮಕರಕುಂಡಲದಿ ಕಂದರ್ಪ ಚಂದಿರಕೋಟಿಗಳ ತೆರದಿ
ಸೌಂದರ್ಯಸಾರಮೂರ್ತಿ ಮನೋಹರ ಕಂಬದ ಪೀತಾಂಬರ ವನಸ್ರಗ್ಧರ ೨

ಪ್ರಸನ್ನವದನ ಪ್ರಸನ್ನಾಂಬುಜನಯನ ಪ್ರಸನ್ನಭೂಷಣ ಪ್ರಸನ್ನಮಯಲೋಚನ
ಪ್ರಸನ್ನಚರಿತ್ರ ಪ್ರಸನ್ನಾಬ್ಜಗಾತ್ರ ಪ್ರಸನ್ವೆಂಕಟಕೃಷ್ಣ ಪ್ರಸನ್ನವರಿಷ್ಠ ೩

## ೪೩

ರಾಗ : ಕೇದಾರ ಗೌಳ ತಾಳ : ಅಟ್ಟ

ನೆರೆದರು ಹರಿಯ ಗೆಳತಿಯರು ಸ್ಮರನ ಶರದಟ್ಟುಳಿಗೆ ನೊಂದ ಸುಂದರಿಯರು ಪ.

ಮಂಗಳ ಮೂರ್ತಿಯ ಕಂಡು ಗೊಲ್ಲವೆಂಗಳೆಯರ ಹಿಂಡು ಹಿಂಡು
ಕಂಗಳ ಹಬ್ಬವನುಂಡು ಅಂತರಂಗರಸ ಬದನೆಂದುಕೊಂಡು ೧

ಉದುರುವ ನಯನಾಶ್ರುಗಳಿಂ ಗದ್ಗದ ವಾಕ್ಯದ ಬಾಯಿಗಳಿಂ
ಯದುವರನಂಘ್ರಿಗೆರಗಿದರು ವಿಧುವದನೆಯರ್ಶೋಕ ಹರುಷಪೂರ್ಣರು ೨

ಗತಪ್ರಾಣಾಗತರಂತೆ ಸಾವಿರತರಿಗೆ ಪದವೊರೆದಂತೆ
ಅತಿದಾರಿದ್ರ್ಯರಿಗಾಗ ಶ್ರೀಪತಿ ಪ್ರಸನ್ವೆಂಕಟನಿಧಿ ಬರಲಾಗ ೩

ಮಂದಗಮನೆ ಕಾಳಿಂದಿಯು ಕೂಡಿದ ಸುಂದರ ವೃಕ್ಷಿನ್ನಕಿಪ್ಪ
ಅಂದೊಪ್ಪುವ ಶಾರದೇಂದು ಬೆಳಗಿನಲಿ ನಂದಸುತಗೆ ನಲಿಪ್ಪ ೬

ಚಿರ ದ್ಯೋತಕರಿಪ ಷಟ್ಸ್ವರಣಮಂಜುಳಘೋಷ ಹರಿಣಾಕ್ಷಿಯರ ಕಿವಿಗಳಿಗೆ
ಹರಿಯು ಸಂದರುಶನ ಸ್ವರೂಪಸೋಲ್ಲಾಸದಿ ಸ್ಮರಶರದುಪಟಳ ತಾಗೆ
ಪರ ಶಾಸ್ತ್ರಾರ್ಥವಪ್ಪ ಪರಶ್ರುತಿ ಮೊರೆದಿವ ಪರಿ ಯುವತಿಯರೊಲ್ಲದಳಾಗೆ
ಪರಕೆ ಪರಾತ್ಪರ ಸಿರಿವರ ಸುಂದರ ನೆರೆದನವರನು ತಾ ಬ್ಯಾಗೆ ೭

ಇಂದೀವರಾಕ್ಷಿಯು ಕಂದರ್ಪನಯ್ಯನೆ ಮುಂದಕೆಳೆದುಕೊಂಡು ತವ್ಮ
ದ್ವಂದ್ವನಿಬಿಡಕುಚ ಪೊಂದಿದ ಉತ್ತರೀಯಮಡಿಗೆಯರು ಸಂಭ್ರಮ್ಮ
ಚಂದನ ಕುಂಕುಮ ಗಂಧ ಕಸ್ತೂರಿ ಪೂರ್ಣಾಂದಾತ್ಮಪ್ಪ ಮನೋರಮ್ಮ
ಚಂದಮಾಸನವಿತ್ತು ಕುಂದರದನೆಯರ ವೃಂದದೊಪ್ಪಿದ ಪರಬ್ರಹ್ಮ ೮

ರಮೆಯಾತ್ಮಕವಾದ ಅಮೃತ ಕ್ಷೀರಾಬ್ಧಿಯ ವಿಮಲಾಸನದ ಮುಕುಂದ
ಅಮಮ ಗೋಪೀರ ಕುಚಯಿವರೊಪ್ಪಿದ ಗಂಧ ರಮಣೀಯಾಂಬರ ಸಾಕೆಂದ
ಭ್ರಮತ್ರಯ ನೀಗಿದ ಸುಮುನಿವರರ ಹೃತ್ ಕಮಲಾಲಯ ಗೋವಿಂದ
ಯಮುನೆಯ ಪುಳಿನದಿ ಸುಮೃಗಶಾವಾಕ್ಷಿರ ಕಾಮುಕಭಕುತಿ ಬೇಕೆಂದ ೯

ಯೋಗೇಶೇಶ್ವರ ಪಿಗಾದ್ವಯದ ಸಾಗರಲೀಲೆಯ ತೋರ್ದ
ಆ ಗೋಪಿಯರಿಗೆ ಪ್ರಾಣೇಶನ ಗಣೆ ಪೀಗದ ತಾ ಪ್ರೇರಿಸಿದ
ಆಗ ಅವರು ತಮಯೋಗಾಲಿಂಗನೆ ಶ್ರೀಗೋಪತಿ ನಲವಿಂದ
ಬ್ಯಾಗವರಿಗೆ ಸಂಯೋಗದ ಬಯಕೆಯ ಶ್ರೀಗೋಪ್ತನು ನಿಯಮಿಸಿದ ೧೦

ಭುಭ್ರ ಭ್ರಮಣೇಕ್ಷಣ ಶೋಭಿಪ ನಖಸ್ಪರ್ಶಲೋಭದ ವಚನಗಳಿಂದ
ತ್ರಿಭುವನೇಶ್ವರ ತಾ ಬ್ಯಾಗನೆ ರತಿಲೋಭದ ಸುಖವೈದಿಸಿದ
ಸಿಬಿಲ್ಲನ ಗಣೆಗೆಂಬಾದವು ಪುಷ್ಪನಾಭನ ಬಲು ಬಲುವಿಂದ
ಶ್ರೀಭೃತ ಉಡುಪಗೆ ಭಾಮೆಯರೆಂದರು ಸ್ವೋಭ ಪ್ರಣಯಕೋಪದಿಂದ ೧೧

ಎಲೆ ವಿಭುವೆ ಒಬ್ಬೊಲಿಸಿವರೊಲಿವನು ಒಲಿಯೆನು ಒಬ್ಬೊಲಿಸಿದರೆ
...ಸದೆ ಒಲಿವನು ಇಳೆಯೊಳು ಎರಡನು ತಿಳಿಯೆನು ಕೇಳು ಮುರಾರೆ
ತ್ರಿಳಂದ್ವೈ ಈ ನಾಲ್ವರೊಳದಾವನು ಭವ ಎಲೆ ದಯಾನಿಧೆ ಶ್ರೀಹರೆ
ಸಲೆ ನಿಮ್ಮಂಘ್ರಿಯನಳಿನಕೆರಗುವೆವು ಲಲಿತಚರಿತ್ರ ಅಘಾರೆ ೧೨

ಇಂತು ಮುರಳಿಯುಕ್ತಿಗೆ ಗೋಪಿಯರೆ ನುಡಿದನು ಮಂದರಧರ ಸಿರಿನಲ್ಲ
ಹೋದವ ಬಯಕೆಯು ಮಂದಮತಿಗಳ ಕೂಡಿಂದು ಸೌಹೃದ ಧರ್ಮವಲ್ಲ
ಒಂದಿನಿತಾರ್ಥವ ಎಂದು ಇಚ್ಛಿಸದಿಹ ಮಂದಿಗೊಲಿವೆ ಹುಸಿಯಲ್ಲ
ತಂದೆಗೆ ತನ್ನಯ ಕಂದಗಳಲಿ ಸ್ನೇಹ ಬಂದಂತಿರೆ ಕೈವಲ್ಯ ೧೩

ನಿತ್ಯಚಿತ್ತದಿ ಸರ್ವಾತ್ಮರಾಮಗೆ ಮನವಿತ್ತಿದ್ದ ಧೀರರಿಗೊಲಿವೆ
ಪುತ್ರಕಲತ್ರಸ್ವಕ್ಷೇತ್ರವಿತ್ತಾಧಿಕ ಮಿತ್ರಪ್ರಿಯಹರಿಯೆಂಬರ್ಗೊಲಿವೆ
ಮತ್ತೊಂದು ಬಾಧಕೆ ಚಿತ್ತಕ್ಕೆಳಸದ ಮುಕ್ತಬೋಧಕರಿಗೊಲಿವೆ
ಭಕ್ತರ ಸುರಭಿ ವಿರಕ್ತರ ಸುರತರು ಚಿತ್ತಯುತನ ಹೊಂದಿರುವೆ ೧೪

ಗೋವರ್ಧನದಲಿ ಧನಾಧಿಪನ ಚಿತ್ತಕೋಪವ ಬಳಲಿಸಿದಂತೆ
ರೋದಿಸಿ ಪಾವನ ಶೋಧಿಸಿದಿರಿ ಪರಮಾದರದಲಿ ನೀವಿಂತೆ
ಮೇದಿನಿಲಿ ನಿಮ್ಮ ಖೇದವಾದಂದು ಸಾರಿತು ನಾ ದಾಪ ಪರಿ ತಿದ್ದಲ್ಕತ್ತೆ
ಐದೆರಿಗೆಂದನು ಮಾಧವ ಮೋಕ್ಷದ ಹಾದಿಯ ಮಾತುಗಳಂತೆ ೧೫

ಹರಿಮುಖ ನಿಸ್ಸೃತೋತ್ತರದ ಸುಧಾರಸ ಕರ್ಣಪುಟಗಳಿಂದ ಸವಿದು
ವಿರಹದಿ ಜನಿಸಿದ ಜ್ವರವಡಗಿರೆ ಸುಂದರನಂಗಸಂಗಿಯರ್ಗಂದು
ಪರಮಪುರುಷಹರಿ ಸ್ವರಮಣ ಗೋವೇರೊಳ್ ವರರಾಸಕ್ರೀಡೆಗೆ ಬಂದು
ಹರಿಣಕುಣಕನೇತ್ರೆಯರ ಕರೆದನು ಸತ್ ಸರಸಮಂಡಲದಲಿ ನಿಂದು ೧೬

ಯೋಗೇಶ್ವರ ನಾಗವೇಣಿಯರ ಯೋಗಮಂಡಲದ ಮಧ್ಯದಲಿ
ಬೇಗಿಬ್ಬಿಬ್ಬರಿಗಾಗೊಂದು ರೂಪ ತಾನಾಗೊಪ್ಪುವ ಸ್ವಸುಖದಲಿ
ನಾಗವೇಣಿಯರ ಬಾಹುಗಳಲ್ಲಿ ಬಾಹ್ವಿಟ್ಟು ಕೈಗಳಿಗಿಂಬು ಕಂಠದಲಿ
ಭೋಗಿಸಿದನು ಚೆನ್ನಾಗಿ ಗುಣತ್ರಯ ನೀಗಿದಗೊಲಿವಂದದಲಿ ೧೭

ಸ್ತ್ರೀರತ್ನಂಗಳೊಳು ರಾಜಿಪ ನೀಲನೀರದಗಾತ್ರ ದ್ಯುಮಣಿ
ಹಾರದ ಮಧ್ಯದಿ ಚಾರು ನೀಲದ ಮಣಿ ತೋರುವ ತೆರದಿ ಗುಣಮಣಿ
ಭಾರಿ ನೂಪುರ ಝಣತ್ಕಾರದ ವಲಯದ ನೀರೆಯರ ಕಂಠಮಣಿ
ಮೇರೆಯಿಲ್ಲದ ಸುಖವಾರಿಧಿ ನಂದಕಿಶೋರ ಚಿದ್ಗುಣಗಣದ ಖಣಿ ೧೮

ಹೊಳೆವ ಶಂಕುಮಂಡಲ ಮಧ್ಯ ಸ್ಥಾಪಿಸಿ ಗೆಳತಿಯರನು ಹೊಂದಿ ಶೌರಿ
ವಲಯಾಕಾರದಿ ನಿಲಿಸಿದ ಗೋಪೇರ ಬಳಗವನಾಗ ಮುರಾರಿ
ಕೆಳದೇರ ಗಾತ್ರಮಂಜುಳಮಧುರ ಸ್ವರಗಳ ಕೇಳಿದನು ಉದಾರಿ
ಚಲಿತ ಪದನ್ಯಾಸಗಳ ವರಣೆಗಳ ಕಲಿಸಿದನಭಿನಯ ತೋರಿ ೧೯

ಕಾಮ ಕ್ರೋಧವ ಗೆದ್ದು ನೇಮದಲಿದ್ದು ಸೋಮಕುಲಕೆ ದುರ್ಲಭವು
ಹೋಮವ ಮಾಡ್ಯತ್ಯಂತ ಸೋಮಪಾನಸವನುಂಡು ಸ್ತೋತ್ರಮುಕ್ತ್ಯಂತ ದುರ್ಲಭವು
ಭೂಮಂಡಲ ಸುತ್ತಿ ಹೈಮಪರ್ವತವಾಸ ತಾ ಮಾಡಿದರ್ಗೆ ದುರ್ಲಭವು
ಶ್ರೀ ಮಹಾಲಕ್ಷ್ಮೀಯ ಸ್ವಾಮಿ ಶ್ರೀಕೃಷ್ಣನ ಕಾಮಿನೇರ್ಗೀ ಭಾಗ್ಯ ಸುಲಭವು ೨೦

ರಂಗನ ಮಂಗಳ ಅಂಘ್ರಿಯುಗಗಳ ಸಂಗತಿಯು ಗುರುತಿಟ್ಟು
ಹಿಂಗದಪಾಂಗದ ಕಂಗಳ ಸಿಂಗರ ಅಂಗನೆರಿಂಗಿತವಷ್ಟು
ಅಂಗಜನಂ ಗೆಲ್ವನ ಗುಣ ಸಂಗೀತ ಸಂಗಿಸೆ ಹಂಗಳಿರಷ್ಟು
ತುಂಗ ವಿಹಂಗ ತುರಂಗ ಪ್ರಸನ್ವೇಂಕಟ ಸಂಗಿಯರ್ಗೀ ಸುಲಭವಿಷ್ಟು ೨೧

## ೪೫
## ಸ್ರಗ್ಧರಾ ವೃತ್ತ

ಪಾದನ್ಯಾಸಂಗಳಿಂದಾ ಭುಜಗಳ ಒಲುಮು ಭ್ರೂವಿಲಾಸಂಗಳಿಂದಾ
ಮೋದ ಸ್ಮಿತೇಕ್ಷಣದಿಂದಾ ಮಣಿಪ ನಟನವಿನಿಂ ನರ್ತಿಪಾ ಜವ್ವನೇರು
ದೇದೀಪ್ಯತ್ಪ್ರೌಢವಾಲೇ ಕದಪಿಲಿ ಹೊಳೆಯಲ್ ಸೋಮರ್ಗಡಿಬಿಟ್ಟಿಲೇಯಲ್
ಸ್ವೇದಾಸ್ಯಾಳೇಯರಿಂದಾ ಹರಿವಧು ತಟಿತವು ಮಿಂಚೆ ಮೇಘಾಂಗದಲ್ಲಿ ೧

**ವೃತ್ತ ಪಂಚಚಾಮರ** **ತಾಳ : ಮತ್ಯ**

ಸ್ವರವನೆತ್ತಿ ಪಾಡಿದರ್ ಸುಕಂಠೆಯರ್ ಮನಾನ್ವಿತೇರ್
ಪರಿಸ್ಪರ್ಶೋತ್ಸವಾಗಿರಲ್ ಸುಗಾಯಕೇರ್ ಹರಿಪ್ರಿಯರ್ ೨

ಮುಕುಂದಗಾನಕೆ ಸಮ ಸುಕಂಪವಂತಿನಿಯೋರ್ವಳು
ಸ್ವಕೌಶಲವ ತೋರ್ದಳು ಸುಸಾಧು ಸಾಧು ಎನ್ನಲು ೩

ಸ್ವರಂಗಳ ಸುಜಾತಿಗೆ ಹರಿಯು ಮೆಚ್ಚಿದಾಕೆಗೆ
ಪರಮ್ಮ ಮಾನವಿತ್ತನು ಪರಾತ್ಪರ ಸ್ವಪ್ರಿಯನು ೪

ಬಳಲಿದ ನಾರಿಯೊಬ್ಬಳ ಅಲರ್ಮುಡಿಯು ಚೆಲ್ಲಲು
ಬಳಿಯಲಿರಲು ಗದಾಧರನು ಅವಳ್ಗೆ ಸ್ಕಂಧವಿತ್ತನು ೫

ಸುಚಂದನೋತ್ಪಲಂಗಳಿಂ ಸುಚಿನ್ಹಿತಾ ಸುಬಾಹುಗಳಿಂ
ಚುಂಬಿಸ್ಯಾಘ್ರಾಣಿಸಿದಳು ಶುಚಿವ್ರತೆಯು ಒಬ್ಬಳು ೬

ಬೆಮರ್ದ ಶ್ರಾಂತಗೋಪಕೀರಮರ್ದ ಅಪ್ಪಿ ತೋಳ್ಗಳಿಂ
ಸುಮೃಷ್ಟ ತಾಯಿಲಿಪ್ಪಿಸಲ್ ಸುಪಾರಸಿಯ್ನ ನೀಡಲು ೭

ಕಪೋಲದೊಳ್ ಕಪೋಲವಂ ಸುಪ್ರಿಯಳೊಬ್ಬಳಿಟ್ಟಳು
ಗೋಪಾಲಕೇಶವೋಷ್ಠದೊಳ್ ನಿಜೋಷ್ಠ ಒಬ್ಬಳಿಟ್ಟಳು ೮

ಸುಗಂಧವೆತ್ತ ತಂಬುಲವ ಸ್ವನಾಥ ನೀಡೆ ಮೆದ್ದಳು
ಸುಗೀತವೆತ್ತಿ ಪಾಡಿದಳ್ ಸುನೃತ್ಯ ಒಬ್ಬಳಾಡಿದಳ್ ೯

ಝಣತ್ಕರಿಪ ಅಂದುಗೆ ಕಿಣಿಕ್ಕಿಣಿಪ್ಪ ಕಿಂಕಿಣಿ
ಮಣಿಯ ಕಾಂಚಿದಾಮದಿಂ ಮೆಣೆವ ಮಧ್ಯೆಯೊಬ್ಬಳು ೧೦

ಕುಣಿದು ದಣಿದು ಒಬ್ಬಳು ಮನೋಜನಯ್ಯನಪ್ಪಲು
ಸ್ತನದ್ವಯಂಗಳೊಳ್ದರಿಯ ಪಾಣಿಯನೊತ್ತಿಕೊಂಡಳು ೧೧

ಏಕಾಂತಪ್ರಿಯನಂಸದೊಳು ಸ್ವಕಂಧರೊಬ್ಬಳಿಟ್ಟಳು
ಸುಪಿಗಳಗ್ರಣಿಯೊಬ್ಬಳು ಮುಖಂ ಮುಖಕ್ಕೆ ನೀಡಲು ೧೨

ಪ್ರಸನ್ನಕೃಷ್ಣನಂಗನೇಪ್ರಸನ್ನತೆಯೊಳಿದ್ದನು
ಪ್ರಸನ್ನವಾದ ಶುಕಮುನಿ ಪ್ರಸನ್ನ ವಾಕ್ಯಕೀರ್ತನೆ ೧೩

ಪ್ರಸನ್ನ ವೆಂಕಟೇಶನ ಪ್ರಸನ್ನವಾರ್ತೆ ಕೇಳ್ದನು
ಪ್ರಸನ್ನಚಿತ್ತ ಭೂಪತಿ ಪ್ರಸನ್ನ ಭಾಗವತವನು ೧೪

## ೪೩

ರಾಗ : ಮೋಹನಕಲ್ಯಾಣಿ    ತಾಳ : ಜಕ್ಕಣಿ ?

ರಾಸ ಕ್ರೀಡೆಯುಲಾಸಖರ್ಗೆ ವಾಸುದೇವನ
ಲೇಸಿನಾಟ ಲೇಶ ತೋರ್ದು ತೋಷಿಸಿ ಮನ ಪ.

ತುರುಬು ಸಡಲಿ ಪೋರೆಯ ಮರೆಯ ಕುರುಳಿನಸಿಯರು
ಕರದ ಕಂಕಣ ನೂಪುರ ಝಣತ್ಕರಿಪ ಅಬಲೇರು ೧

ನೆರೆ ಬೆಮರ್ದು ಮೆರೆವ ವದನ ಕಿರಿಯನಗೆಯರು
ಹರಿಣಾಂಕನ್ನ ಭರಿತ ಕಾಂತಿಲಿ ವರಿಸುತಿದ್ದರು ೨

ಸುರನಾರಿಯರು ಹರಿಯಕ್ರೀಡೆಗೆ ಬೆರೆತು ಸಂಭ್ರಮಿಸಿ
ನೆರೆವರ್ ತಮ್ಮ ತಮ್ಮರಸರ ಸ್ಮರಶರಕೆ ಮೋಹಿಸಿ ೧೫

ಪ್ರಿಯಸಖಿತನ ನಿಜಸುರತಿಗಾಂಡಿ ಬಾಡಿದ ತನ್ನಯ
ಮಡದಿಯರನು ಮೆಚ್ಚಿಸಿ ಬೇಗದಿ ಕೂಡಿದ ನೋಡಿರಯ್ಯ ೧೬

ಭಾವಕೆ ಮೆಚ್ಚಿದ ಶ್ರೀವತ್ಸಲಾಂಛನ ಗೋಪೇರನಪ್ಪಿದನು
ದೇವಿಯಾನಂದ ತೀವಿದ ಪಾರ್ಥಿಗೆ ಶ್ರೀವರ ಜಂಭ್ರಮನು ೧೭

ಗೋಪೇರ ಸಂಖ್ಯೆಗೆ ಶ್ರೀಪತಿ ಸ್ವಕೀಯ ರೂಪಗಳ ತೋರಿದ
ಅಪಸ್ಮರಭೀಷ್ಟ ತಾ ಪೂರ್ಣಮಾಡಿದ ಪ್ರೇಮದಿ ಮುಕುಂದ ೧೮

ಸತಿಯರೆಲ್ಲರು ರತಿವಿಹಾರದಿ ಅತುಳ ಶ್ರಾಂತರಾಗೆ
ರತಿಪತಿಪಿತಾಚ್ಯುತ ಹೆಂಗಳ್ಗಳಾ ಪ್ರತತಿ ಹೊಂದಿ ಆಗೆ ೧೯

ಕಮಲಾಕ್ಷಿಯರ ಶ್ರಮಯ ಬೆಮರ ರಮೇಶ ತೆಗೆದರೆ
ಅಮರನಾರೇರು ಭ್ರಮಿಸಿ ಲೀಲೆಗೆ ಅಮಮ ಎನುತಿರೆ ೨೦

ಕಬ್ಬುಬಿಲ್ಲನ ಕೊಬ್ಬು ಮುರಿದಿಹ ಹಬ್ಬನುಂಡಸಿಯರು
ಹುಬ್ಬೋರೆಗಣ್ಣಲಿ ಉಬ್ಬುಬ್ಬಿ ನೋಡಿದರಬ್ಧೀಶನಂಗನೇರು ೨೧

ಹೊಳೆವಕುಂಡಲ ಉಲಿವ ಕುಂತಳ ಎಳೆನಗೆಕಾಂತಿಯ
ಬೆಳಗಿಲೊಪ್ಪುವ ನಲ್ಲನ ನೋಡಿ ಕಂಗಳವು ದಣಿಯವ್ವೆ ೨೨

ಈಶನ ಸುರತಹಾಸ ವಿಲೋಕನಕೆ ಸತಿಯರು ಮೆಚ್ಚಿ
ಶ್ರೀಶುಭಗುಣವ ತೋಷದಿ ಪಾಡಿದರು ಸುಖಾಂಬುಧಿ ಹೆಚ್ಚಿ ೨೩

ತನ್ನಂಗಸಂಗದಿ ಬಿನ್ನಾಣ್ಯ ಬಳಲಿದ ಕನ್ಯೇರ ಕುಚದಲಿ
ಬಿನ್ನ ಕುಂಕುಮ ಗಂಧಾನುಲೇಪಾಂಗವ ನೋಡಿದ ದಯೆಯಲಿ ೨೪

ಪೀನ ಪಯೋಧರದಾ ನಾರಿಯರಿಂದ ಜ್ಞಾನಾನಂದವಾರಿಧಿ
ತಾ ನೀರ ಪೊಕ್ಕ ಹೆಣ್ಣಾನೆಗಳ ಕೂಡಿ ಮದ್ದಾನೆಯಂತೆ ಭರದಿ ೨೫

ಕಾಳಿಂದಿ ಮಧ್ಯದಿ ಕಾಕಾಹಿವೇಣೇರ ಮ್ಯಾಳದಿ ಸ್ನೇಹದಲಿ
ಶ್ರೀಲೋಲ ಕ್ರೀಡಿಸೆ ಬಾಲೇರು ರಂಗಂಗೆ ಮೇಲೆ ನೀರು ಚೆಲ್ಲಲಿ ೨೬

ಶ್ರೀದೇವಿಯಾತನ ಪಾದಾಂಗುಲಿ ನಖ ಅವರಿಂ ನೋಡುತ
ಮೋದದಿಂದೊಂದು ಗುಣಾನ್ಯಂತ ಕಾಣಲು ಮಹೋತ್ಸಾಹಾತ್ಮಗಾಥಾ ೬೯

ಸೃಷ್ಟ್ಯಾದಿಕಾರಣ ವಿಷ್ಣು ಸಂರಕ್ಷಣ ದುಷ್ಟನಾಶಕ ಮೋಹನ
ಗೋಷ್ಠದ ನಾರೀಯರಿಷ್ಟಾನುಸಾರ ಫಲೇಷ್ಟದಾಭಾಷಣ ೭೦

ಆಪನ್ನ ಜನರ ತಾಪಹಾಪಹರ ಶ್ರೀ ಪರಬ್ರಹ್ಮ ಕೃಷ್ಣ
ಈ ಪರಿ ಪೊರೆವನು ಶ್ರೀಕೃಷ್ಣವೆಂಕಟಾಧಿಪ ವೃಂದಾರಕೇಷ್ಟ ೭೧

## ೪೭

ರಾಗ : ಮ್ಲೇಚ್ಛಗೌಳಿ ತಾಳ : ಅಟ್ಟ

ಗೋಷ್ಠದ ಜನಕೆಲ್ಲ ಸೃಷ್ಟಿಕೋಟಿಗೆಲ್ಲ ಕೃಷ್ಣನೆ ಪೋಷಕನು
ಪ್ರಾಪ್ತಾನ್ನದಾನದ ತುಷ್ಟಿದ ಮುಕ್ತಿದ ದುಷ್ಟಜನಾರ್ದನನು ಪ.

ಒಂದಿನಂಬಿಕೆಯ ಜಾತ್ರೆ ನೆರೆಯಲೆಂದು ಬಂದು ನಂದಗೋಪನು
ಬಂದಾ ವಿಪ್ರಾನೀಕ ಕೂಟಂಬ ಸಹವಾಗಿ ಮಿಂದು ಸರಸ್ವತಿಯನು
ಸ್ಕಂದನಮ್ಮನಿಗೆ ವಂದಿಸಿ ಪೂಜಿಸ್ಯಾನಂದದಿ ಭೋಜನವ
ಬಂದ ಇಷ್ಟಜನರಿಂದ ಮಾಡಿದನು ಚಂದದಿಂದ ದಾನವ ೧

ವ್ರಜಪತಿಯನು ನುಂಗಿತು ಒಂದು ಅದ್ಭುತ ಅಜಗರವಲ್ಲಿ ಬಂದು
ಸುಜನ ಗೋವರು ರಾಮಕೃಷ್ಣ ಹರೆ ಹರೆ ಭಜಕರಕ್ಷ ನೀನೆಂದು
ರಜನಿಯಲ್ಲಿ ಕೊಳ್ಳಿಯವಿಡಿದಂಜುತ ಅಜಗರನ್ನ ಕೊಂದರೆಂದು
ಭುಜಗವಂಜದೆ ಗ್ರಸಿಸೆ ಕಂಡನಚ್ಯುತ ಅಜನ್ಮರರಯ್ಯನಂದು ೨

ತಂದೆಯ ನುಂಗುವ ಅಹಿಯನ್ನು ಪಾದಾಬ್ಜ ಹೊಂದಿಸಿ ಉದ್ಧರಿಸಿದನು
ದಂದಶೂಕಗೆ ದಿವ್ಯಶರೀರವಾಕ್ಷಣ ತಂದಿತ್ತ ಸರ್ವೇಶನು
ಹಿಂದೆ ವಿದ್ಯಾಧರ ತಾನು ಮುನಿಯ ಶಾಪದಿಂದಹಿಯಾಗಿರಲು
ಇಂದಿರೆಯರಸನ ಅಂಘ್ರಿಯ ಸೋಂಕೆ ಒಂದೀ ಸ್ತೋತ್ರವ ಮಾಡಲು ೩

ವಾಣಿಗಳೆಲ್ಲ ನಿನ್ನಾನಂದಮಯ ಗುಣವನು ಪೊಗಳ್ವಂತೆ ಮಾಡು
ಶ್ರೀನಯ ನಿನ್ನ ಕಥಾಮೃತ ಶ್ರವಣಕೆ ಪಾನದ ಲಾಘವ ನೀಡು
ಪಾಣಿಗಳಿಂ ನಿನ್ನ ಸತ್ಕರ್ಮ ವ್ಯಾಸಂಗವು ನಿನ್ನ ಶ್ರೀಪಾದಕೆ
ದೀನವತ್ಸಲ ನನ್ನ ತಲೆ ವಂದನೆಗೆ ಮಾಡು ಧ್ಯಾನಕೆ ಮನವಮಾಡಂ ೪

ನಿನ್ನ ಮೂರ್ತಿಗಳೆನ್ನ ನೇತ್ರ ಚಿತ್ತದಲಿಟ್ಟು ನಿನ್ನ ದಾಸರ ಸಂಗವು
ಅನಂತ ಜನ್ಮಕೆ ದೊರಕಲೆಂದೆನುತ ವಿಮಾನ ಹತ್ತಿ ನಡೆದ
ಈ ನಾಟ್ಯವ ನೋಡಿ ಸಂವಾದಿ ಗೋಪರು ಆನಂದಭರಿತರಾಗಿ
ಮಹಾತ್ಮ್ಯವೆಂದಾನಂದಮಯ ಪ್ರಸನ್ವೆಂಕಟನ ಪೊಗಳಿದರು ೫

## ೪೮

ರಾಗ : ಸೌರಾಷ್ಟ್ರ ತಾಳ : ಏಕ್ಕಣಿ?

ಅವರೇ ಸುಕೃತಿಗಳು ಅವರೇ ಧನ್ಯರು ಗೋವಿಂದನಾಶ್ರಿತರು
ನವವಿಧ ಭಕ್ತಿ ಸ್ತವನಗಳಿಂದ ಭವವ ಗೆದ್ದವರು ಪ.

ಆ ವಿದ್ಯಾಧರನು ವಿಮಾನವೈದಿದ ವಿವರವರಿತನು
ಗೋವರಿಗೊಡೆಯನ ಮಗನ ಮಹಿಮೆಯ ಸ್ತವಿಸಿ ನಲಿದನು
ನವವಿಧಾಶ್ಚರ್ಯ ಕರ್ಮವ ಮನುಜ ದಿವಿಜರ್ಪೊಗಳಲು
ಗೋಪ ಗೋಪೇರಿಂದ ವ್ರಜ ಶೋಭಿಸೆ ಭುವನದೊಡೆಯನು ೧

ಶ್ರೀಮನೋಹರ ಸಖಿಯರ ಬೆರಸಿ ರಾಮನಸಹ ನಿಶದಿ
ಕಾಮನೋತ್ಸವದಿ ವನವನ ತಿರುಗೆ ಕಾಮಿನೇರ್ ಸುಸ್ವರದಿ
ಪ್ರೇಮ ಸುಹೃದ್ಗಾನ ಲಾಲಿಸುತಿರಲು ಕೌಮುದಿಯು ಕಾಶದಿ
ಕ್ಷೌಮಾಂಬರನುಟ್ಟು ಸ್ರಗ್ಗಂಧಲೇಪನದಿ ಮತ್ತಳಿಗಳ ತೆರದಿ ೨

ವಿಶ್ವಾನಂದಕರು ರಾಗವ ಮಾಡಲು ವಿಶ್ವಗೋಪಿ ಜನರು
ಸುಸ್ವರ ಮೂರ್ಛೆಯೊಳು ವಸ್ತ್ರಾಭರಣ ಸ್ವಕೀಯವೆಂದರು
ಸುಶ್ವಾಸೋಚ್ಛ್ವಾಸವ ಬಿಡುತ ಮುಕುಂದ ಶಶ್ವದೇಕೇಶನೆಂದು
ಸುಸ್ವಭಾವ ಹೊಂದಿ ಪೂತಾಂಗೇರು ತಾವು ಅಸ್ವತಂತ್ರೆಯರಾದರಂದು ೩

ಪೂಗೋಲನುಚ್ಚರ ನಿಚ್ಚರವಾಗಿದೆ ಶ್ರೀಗೋವಿಂದ ಕಾಯಿದನು
ಆಗೊಬ್ಬ ಖಳನು ಶಂಖಚೂಡನು ಈ ಗೋಪೆರೊಯ್ಯೆ ಬಂದನು
ನಾಗಗಮನೇರು ಹರೆ ಕೃಷ್ಣರಾಮ ನೀ ಗತಿ ಕಾಯೆಂದರು
ಈಗಂಜಬೇಡ್ಯೆಂದು ಅಗ್ರಜನ ಸಹ ಬೇಗದಿ ಬೆಂಬತ್ತಿದನು ೪

ರಾಮಾಧೋಕ್ಷಜರು ಚೋರನ ಬೆನ್ನಟ್ಟಿ ಶ್ರೀಮತ್ತಾಳ ಹಸ್ತದಿ
ಆಮತ್ತದೈತ್ಯನ ಮಸ್ತಕವಿಳುಹಿ ಸುಮೌಳಿರತ್ನವ ಕಿತ್ತಿ

ರಾಮಂಗೆ ಕೊಟ್ಟನು ದಾಮಾಕ್ಷೇರ ಬಿಡಿಸಿದ ಮನೋಹರ ಹರಿ
ಕಾಮುನಯ್ಯನ ತಾಪ್ ಮೊರೆದೊಕ್ಕರು ಸ್ವಾಮಿ ದುಷ್ಟಕುಲಹರೆ ೫

ಹೇ ಕೃಷ್ಣ ಅಚ್ಯುತಾ ದುಃಖಹರ್ತಾ ಭಕ್ತರಕಾಮಧೇನು ಮುಕುಂದ
ಹೇ ಕೇಶಿಸೂದನ ಪೂತನಾಂತಕ ದೇವ ಚಕ್ರವಾತಘ್ನಾನಂದ
ಹೇ ಕಂಜಲೋಚನ ಗೋಪಿಕಾಮನೋಹರ ಹೇ ಕಾಳಿಂದಿವಿಹಾರ
ನಾಕೇಶಮದಹರ ಗೋವರ್ಧನೋದ್ಧಾರ ಲೋಕೈಕ ಸತ್ಸುಂದರ ೬

ಕಾಲಿಯಮದಹಾಹಿಕಾಮಿನೀಸ್ತುತಿಪ್ರಿಯ ಭೂಲಲನಾ ಭಯಘ್ನ
ಬಾಲಕ ಲೀಲಾವಿಶಾಲ ಶ್ರೀಲೋಲ ಭೂಲೋಲ ದುರ್ಗಾಂಗನೇಶಾ
ಮಾಲಾಲಿತಾಂಘ್ರಿ ತ್ರಿಯಾಲಯ ಸುರಮುನಿಲಾಲಿತಚರಣಾಂಬುಜ
ತ್ರಿಲೋಕಸೃಷ್ಟ್ಯಾದಿಮೂಲಕಾರಣ ಗುಣಜಾಲ ಶ್ರೀ ನಾರಾಯಣ ೭

ಶೋಕ ಶಂಖಚೂಡ ಬಂದೆಮ್ಮನೊಯ್ಯಲು ನೀ ಕಾಯಿದೆಯೆ ದಯಾಳು
ಸಾಕು ನಮೊ ನಮೊ ನಮೊ ನಮೊಯೆಂದು ಅನೇಕ ಸ್ತೋತ್ರವ ಮಾಡಲು
ಆ ಕನ್ಯೆರ ಭಕ್ತಿಭಾವಕೆ ಮೆಚ್ಚಿದ ಗೋಕುಲದವರಿಗೆಲ್ಲ
ವೈಕುಂಠವೇ ಫಲ ಮಾಡಿಟ್ಟ ಶ್ರೀಕೃಷ್ಣ ಆಕಳಕಾವ ಚೆಲ್ವ ೮

ಈ ಕೃಷ್ಣಚರಿತ್ರೆ ಏಕಾಂತ ಭಕ್ತಿಲಿ ಲೋಕೇಶ ಪರೀಕ್ಷಿತ
ತಾ ಕೇಳಿದ ಗುರು ಶುಕಮುನೀಶನ ವಾಕ್ಯಾಮೃತ ತತ್ವತ:
ಆ ಕರ್ಣಪುಟದಿಂದುಂಡು ತೇಗಲು ಲೋಕವೆಲ್ಲ ಪಾವನ
ಶ್ರೀಕಾಂತ ಪ್ರಸನ್ವೆಂಕಟೇಶನ ಲೀಲೆಯನೇ ಕೇಳಿದವ ಜಾಣ ೯

## ೪೯

ರಾಗ :ದೇಸ್ ತಾಳ : ಅಟ್ಟ

## ವೇಣುಗೀತ

ಜಾಣೆ ಗೋಪೇರೊಂದುಗೂಡಿ ವೇಣುಗೋಪತಿಯ ದಿವ್ಯ
ವೇಣುಗೀತೆಯ ಹೇಳಿದರೆ ಗಾನರಸದಲಿ ಪ.

ಜ್ಞಾನಚರ್ಯನಂದನ್ನ ರಾಣಿ ಕೇಳಿದಳೆಂದು ವ್ಯಾಸ
ಸೂನು ಪೇಳ್ದ ಭೂಪತಿಗೆ ಆನಂದದಲಿ ಅ.ಪ.

ನಂದನೋದ್ಯಾನಕಧಿಕಾನಂದವಿದ್ದ ವನಗಳಲ್ಲಿ
ಬಂದು ಕೃಷ್ಣ ಚರಿಸುವ ಗೋವೃಂದದಿ ನಿತ್ಯ
ಇಂದುಮುಖಿಯರು ಪ್ರಿಯನ ನೋಡಿ ಕಂದರ್ಪನ ಸಾಯಕಕ್ಕೆ
ನೊಂದು ವೇಣುವೈಚಿತ್ರ್ಯದ ಚಂದ ಪೊಗಳುತ ೧

ವಾಮ ಬಾಹ್ವಲಿಟ್ಟು ಗೋಣು ವಾಮಕಪೋಲವು ಭ್ರೂ
ಭ್ರಮಣ ವಿಲಾಸಾರ್ಪಿತ ಹೇಮವೇಣುವ
ಕೋಮಲಾಂಗುಲಿಲಿ ರಾಗ ನೇಮಿಸೆ ಮುರುಳಿಸ್ವನಾ
ಕಾಮಿನೇರು ಕೇಳುತಲಿ ಕಾಮಬಾಣದಿ ೨

ವ್ಯಾಮೋಹಿಸುತೆ ಮಾಡಿದ ಶ್ರೀ ಮುಕುಂದಾಂಬರಪಥ
ವೈಮಾನಿಕ ಸಿದ್ಧಪತ್ನೇರ್ ಭ್ರಮೆಗೊಂಡರು
ಕಾಮಬಾಣನಟ್ಟಿ ಲಜ್ಜೆಯ ಮರೆದು ಜಗುಳಿ ಬಿದ್ದ
ಹೇಮಾಂಬರಾಭರಣಗಳ ನೇಮಗಾಣರು ೩

ಕೇಳಿರಿ ಸ್ತ್ರೀಜನರುಗಳಿರಾ ಮಾಲೆ ಮಿಂಚಿನ ಚೆಲುವ
ನೀಲನೀರದ ಶಾಮಲನ ಲೀಲೆ ವೇಣುವಿನ
ಮೇಲು ನಾದ ಕೇಳಿ ಮಾತ್ರ ಬಾಲೇರಿಗೆ ಮೋಕ್ಷಾನಂದ
ಕಾಲ ಕಾಲ ಕುಣಿಸುವ ಗೋಪಾಲನಂದನ ೪

ಆವ ವಿಚಿತ್ರ ರಾಗವೋ ಆವ ಮೋಹನ ಕರವೋ
ದೇವ ಗಾಯಕಿಯರೆಲ್ಲ ಕೋವಿದರಾಗಿ
ಗೋವು ಮೃಗಾಳಿಗಳೆಲ್ಲ ಭಾವಶುದ್ಧಿಯಿಂದ ಕೇಳಿ
ದೇವೇಶನ ಪದದಿ ತಮ್ಮ ಜೀವ ನೀಡಲು ೫

ಹಿಂಡು ಗೋವು ಹರಿಯ ಕೃತಿಯ ಕಂಡು ಧ್ಯಾನದಲ್ಲಿ ತಂದು
ತುಂಡ ನೆಗಹಿ ಬಾಲವೆತ್ತಿಕೊಂಡು ನಿಂತವು
ತಂಡ ತಂಡ ಒಟ್ಟಿದವು ಹಂಡೆ ಹವಳೆ ಹುಲ್ಲುಗಚ್ಚಿ
ಕೊಂಡು ನಿಂತವಲ್ಲಿಗಲ್ಲಿ ಮಂಡೆಲಿದ್ದವು ೬

ಕರ್ಣನಿಲ್ಲಿಸಿ ಎವೆಯನಿಡದೆ ಸ್ವರ್ಣವೇಣುವಿನ ರವ
ವರ್ಣಿಸಿ ಮುಕುಂದನಲ್ಲಿ ಮನವನಿಟ್ಟವು
ಘನ್ನ ನಿದ್ರೆಯಾಯ್ತು ಬದಿಯ ತನ್ನ ಕರುವ ನೋಡಲಿಲ್ಲ
ಬಣ್ಣವಿಟ್ಟು ಬರೆದ ಚಿತ್ರವನ್ನು ಹೋಲ್ವವು ೭

ಪೂಗೊಂಚಲು ಬರುಹಿ ಬರ್ಹ ಗೋಗೋಪರ್ಗೆ ಕೊಟ್ಟು ಮುಡಿದು
ತಾ ಗೈರಿಕ ಲೇಪಿಸಿಕೊಂಡಾಗ ಎಲ್ಲರು
ಸೋಗನಾಂತು ಒಪ್ಪಿದರು ಪೂರ್ಣಾನಂತತೇಜ
ಯೋಗಿಜನಹೃದಯನಿಲಯಾಮೋಘ ಸುಂದರ ೮

ಪ್ರೇಮದಿಂದ ಕರೆವನಾವ ಗೋವುಕ್ಕಳ ಸಂದೋಹದಿ
ರಾಮನೊಡನೆ ವೇಣುಸ್ವರದಿ ಸ್ವಾಮಿ ಅಚ್ಯುತ
ಪ್ರೇಮವಂಶನಾದಸುಧೆಗೆ ಆ ಮಹಾನದಿಗಳೆಲ್ಲ
ತಾ ಮುಂದಕ್ಕೆ ಪ್ರವಹದೋರವು ವ್ಯಾಮೋಹಿಸುತ ೯

ತಾ ಮತ್ತೆ ಹಿಂದಕ್ಕೆ ಬಂದು ಸೋಮಕುಲಪನಂಘ್ರಿಗಳನು
ಆ ಮಹಾ ಭುಜೋರ್ಮಿಗಳಲಿ ಕಾಮಿಸ್ಯೊಪ್ಪಿದುವು
ಆ ಮಹಿಮೆ ನೋಡಿ ಸುರರಸ್ತೋಮ ಸಿದ್ಧಗಂಧರ್ವರು
ವ್ಯೋಮ ಮಂಡಲದಿ ನಮೊ ನಮೊ ಎಂದರು ೧೦

ಆದಿಪುರುಷ ಸ್ಥಿರೈಶ್ವರ್ಯನಾದ ದೇವವನಗಿರಿಯಲಿ
ಊದಿದ ಷಡ್ರಸದ ವೇಣು ಗೋಧನದ ರಕ್ಷ
ವೇದಾನಂತಾವೇದ್ಯ ಕೃಷ್ಣ ಮಾಧವ ಮುಕ್ತಾರ್ಥಿ ತಾ ಶ್ರೀ
ಪಾದಪದ್ಮಾಮೋದ ಪ್ರಮೋದ ಸುಪಕ್ಷ ೧೧

ಅಪವರ್ಗ್ಯರಿಂದ ಸ್ತೋತ್ರ ಶ್ರೀಪತಿ ಮಾಡಿಸಿಕೊಂಬ
ಗೋಪರ ಸ್ತೋತ್ರಕೊಪ್ಪಿದ ಶ್ರೀಪರಬ್ರಹ್ಮ
ಶ್ರೀಪ್ರಕೃತಿ ಇವನ ಗುಣ ರೂಪಲಾವಣ್ಯಕ್ಕೆ ಸೋತ
ಈ ಪೆಣ್ಗಳಿಗೆ ವಶವಿಡಂಬನ ತೋರ್ಪನಮ್ಮಮ್ಮ ೧೨

ಈ ವನದ ತರುಲತೆಯು ಶ್ರೀವಿಷ್ಣುವಶವಾದವೆಂಬ
ಭಾವತೋರಿ ನಮಿಸಿದವು ಪೂವು ಫಲದಿಂದ
ತೀವಿದ ತೋಷದಿ ವೇಣುರಾವರಸವನುಂಡು ಕೊಬ್ಬಿ
ದಾವು ತಲೆದೂಗಿದವು ಕೋವಿದರಂತೆ ೧೩

ಪ್ರೇಮ ಹರುಷದಶ್ರುಧಾರ ಆ ಮರಂಗಳ್ವಿಟಪಸಾರ
ಭೂಮಿಗಿಳಿವಾಶ್ಚರ್ಯ ನೋಡಿ ಕಾಮಿನೇರೆಲ್ಲ
ಶ್ರೀಮನೋಹರನ್ನ ಕೀರ್ತಿ ಧೀಮಂತ ಜನರೆ ಸ್ಫೂರ್ತಿ
ಪಾಮರರೇನು ಬಲ್ಲರು ಈ ಮಹಾಲೀಲೆ ೧೪

ಕೆಳದಿ ಕೇಳೆ ಗಂಧ ನೀಲೋತ್ಪಲವಾಮೋದಮಯದ ವಕ್ಷಾ
ನಿಲವನುಂಡು ಸೊಕ್ಕಿ ಚರಿಪ ಅಳಿವಿಂಡುಗಳು
ಅಲಘುಗಾನ ಕೇಳಿ ಮುಕುಂದ ತಲೆದೂಗಲು ರಂಹಸದಿ
ನಳಿನಾಕ್ಷನ ಬಳಿಗೆ ಬರಲು ಸಾರಸಹಂಸಗಳು ೧೫

ಲಲಿತವೇಣುಸುಧೆಯನುಂಡು ಕಲವೇರಿ ಕೂಲದೆ ಮೌನದಿ
ಬಳಿಯಲ್ಲಿರೆಗಣ್ಣು ಮುಚ್ಚಿ ನಳಿನನಯನನ
ಚೆಲುವಿಕೆ ಧ್ಯಾನೋಪಾಸನೆಗಳಲಿ ಪರಮಹಂಸರಂತೆ
ನಲಿವ ಸಾರಸ ಹಂಸಗಳ ಬಳಗವನುದಿನ ೧೬

ಅಣ್ಣಗೋವರಿಂದ ಕೂಡಿ ಚೆನ್ನ್ಯಯಾಧರದಿ ವೇಣು
ವನ್ಯಾದುವ ಹೆಸರುಗೊಂಡು ಕನ್ಯೆ ಗೋಪಿಯರ
ತನ್ನಾನಂದದಿ ತಾ ಪೂರ್ಣ ಜನರ ವಿಡಂಬ ನಟನೆ
ಯನ್ನು ತೋರ್ವ ಅಜ್ಞರ ಮೋಹನ್ನ ಸುಂದರ ೧೭

ಘನ ಮಂಜುಳ ರವದಿ ಗೋವರ್ಧನ ಗಿರಿಯು ಶಬ್ದಿಸಲು
ಘನಗಂಜಿ ಮೆಲ್ಲ ಮೆಲ್ಲನೆ ಸ್ತನಿವಾಸ್ಯದಿದವು
ಘನಶ್ಯಾಮಲ ನಮಗೆ ಬಂಧು ತನುಮನದಿ ಅವಗೆ ಸ್ತೋತ್ರ
ವನು ಮಾಡುವೆವೆಂಬ ಭಯದಿ ಹೆಣಗಿ ನಿಂದುವು ೧೮

ಮಹದತಿಕ್ರಮಣಕಂಜಿ ಮಹಪೂಜೆಯಲಿ ಒಲಿಸುವಂದದಿ
ಅಹಸ್ಸಿನಲ್ಲಿ ಪುಷ್ಪವೃಷ್ಟಿ ಬಹಳಗರೆದುವು
ಮಹಿಯೊಳಗೆ ಹರಿಯ ಆಜ್ಞೆ ವಹಿಸಿದವನಿಗೇವೆ ಮುಕ್ತಿ
ವಹಿಸದವನೆ ದ್ರೋಹಿಯುವಗೆ ಸಹಜಾಂಧತಮವು ೧೯

ಶಶಿವದನೆ ನಿನ್ನ ಸೂನು ಕುಶಲವರ್ಯ ಗೋವರೊಳು
ಅಸಮವೇಣುವಿಂದ ಸದ್ರಸದಿ ಗಾಯನವ
ಹೊಸ ಹೊಸ ಸುಮಧುರ ಗೀತ ಎಸೆವ ಬಿಂಬಾಧರದಿ ಇಟ್ಟು
ಶಿಶುಗೆಳೆಯರ ಶಿಕ್ಷಿಪ ವಂಶಗಾಯನವ ೨೦

ದಿವಿಯಲಿ ನೆರೆದ ಸರಸಿಜೋದ್ಭವ ಭವೇಂದ್ರ ಮುಖ್ಯರಾದ
ಕವಿಗಳಾನತ ಕಂಧರದಿ ಕಿವಿಯುಗೊಟ್ಟರು
ಕವಿದು ಮೋಹವಿಸ್ಮಿತದಲಿ ಸವಿಯದ ಶ್ರೀಹರಿಯಲೀಲೆ
ಸವಿರಸವ ಸವಿದಾನಂದ ಭವನವಿಡಿದರು ೨೧

ಗೋಖುರಾದಿತ ಗೋಷ್ಠಭೂಮಿ ಶ್ರೀಕಂಜಾಂಕುಶವಜ್ರಧ್ವಜ
ರೇಖಾಂಕಿತ ಶ್ರೀ ಪಾದಪದ್ಮ ಸೋಂಕಿ ಒಪ್ಪಲು
ನಾಕದವರು ವ್ರಜವಾಸ ಬೇಕೆಂದು ಬಯಸಿದರಲ್ಲಿ
ಶ್ರೀಕೃಷ್ಣಾಂಘ್ರಿಯಾಶ್ರಿತರ್ಗೆ ವೈಕುಂಠವ್ಯಾಕೆ ೨೨

ಶ್ರೀರಮಣ ಸೌಂದರ್ಯಸಾರನ್ನ ಮಾರ್ಗದಿ ಕಂಡು
ಸಾರಂಗಾಕ್ಷೇರ ವಿಲಾಸಕೆ ಮರೆದೋರದು
ಸ್ವರ ವೇಣುರಸಾಯನಕ್ಕೆ ನಾರೇರಿಚ್ಛೆ ಹಬ್ಬಲಾಗೆ
ಮಾರನ ಮಾರ್ಗಣರಾಶಿ ತೂರುತಿದ್ದುವು ೨೩

ತನು ಮನೆಯ ಮರೆವರವರು ಕನಕಭಾವಂಬರ ಜಗುಳಿರೆ
ಇನಿತು ವಿಚ್ಛರಿಲ್ಲವರ್ಗೆ ಮುನಿಗಳೆಂದವಲಿ
ಮಣಿಧರ ಗೋಪ್ರ ಮೇಸುತೊಮ್ಮೆ ಗೆಳೆಯರಂಸದಿ ಸ್ಕಂಧವಿಟ್ಟು
ಕ್ವಣಿತ ವೇಣು ನುಡಿಸಿ ಮೋಹಿಪ ವನದಿ ವನಮಾಲಿ ೨೪

ಕೃಷ್ಣಸಾರಸತಿಯರ್ತಮ್ಮ ಪುಟ್ಟ ಮರಿಗಳ ಮನೆಯ ಬಿಟ್ಟು
ಕೊಟ್ಟಚ್ಯುತನ ರೂಪವನ್ನು ದಿಟ್ಟಿಸಿದವು
ಕೃಷ್ಣನ್ನ ಲಾವಣ್ಯಾಮೃತವ ಗುಟುಕರಿಸಿ ಕಂಗಳಿಂದ
ಗೋಷ್ಠನಾರಿಯರನ್ನು ಪ್ರೇಲ್ದು ತುಷ್ಟಿಸಿದವು ೨೫

ಕುಂದ ಕುಸುಮಮಾಲೆ ತುಳಸಿಗಂಧ ನೀಲೋತ್ಪಲಗಾತ್ರ
ವೃಂದ ಗೋಧನರಕ್ಷಕ ನಂದ ನಿನ್ನ ಪುತ್ರ
ಅಂದು ಮಲಯಜಾನಿಲವ ಹೊಂದಿದ ಯಮುನಾ ತೀರದಲ್ಲಿ
ಮಂದಮಂದಗತಿಯು ಮಾಳ್ಪ ಸುಂದರ ನೇತ್ರ ೨೬

ಮಲಯಜ ಮಾರುತನ ಗಂಧ ಸುಳಿವಲ್ಲಿ ಪಾಠಕರು ಬಂದು
ಲಲಿತಗಾತ್ರದ ಗಾಯಕರು ಚೆಲುವ ನಿಂತಿದ್ದ
ಬಳಿಯಲಿ ನಿಂತು ಭಕ್ತಿಯಿಂದ ಬಲುಸ್ತೋತ್ರವ ಮಾಡುತಿರಲು
ಬಲನ ತಮ್ಮ ಭಜಕರಘವ ಕಳೆದ ಮುಕ್ತಿದಾ ೨೭

ಭಜಕಾಗಾಧ ಪುರುಷಸಾರ ವ್ರಜಕೆ ಬಾಹ ಸಮಯದಲ್ಲಿ
ಸುಜನರಿಂದ ಸೇವಿತನಾದ ನಿಜಸುಖಾಂಬುಧಿ
ಸ್ವಜನಗೋವಿಪ್ರವತ್ಸಲಾಂಬುಜಸಖನ್ನ ಅಸ್ತಮಯದ್ಯ
೧೭ ಗ್ರಜನ ಕೂಡಿ ಬಹನು ಗೋರಜದ ಲಗ್ನದಿ ೨೮

ಗೋಮಯದೊಪ್ಪವವ ಧೂಳಿ ಶ್ರೀರಂಗವಲ್ಲಿ ತಾಳಿ
ಶ್ರೀಕೃಷ್ಣ ಕೊಳಲನೂದುತ ಆಕಳೊಡನೆ
ಗೋಕುಲವ ಪೊಂದಲಾಗೆ ನಾಕಜನರು ಸುಹೃಜ್ಜನಾ
ನೇಕ ಸ್ತೋತ್ರ ಮಾಡುವರು ನಾಕಿನ್ನದರೆ ೨೯

ಗೋವು ಗೋಪರ ತಾಪವ ನಿವಾರಿಸುತಿಹ ಜವದಿ
ದೇವಕೀಜಠರಾಬ್ಧಿಚಂದ್ರ ದೇವಗಣೇಂದ್ರ
ಭೂವಿಲಾಸಪಾಂಗದಿಂದ ಗೋಪಳೇರಿಗಮಿತಾನಂದ
ವೀಕ್ಷತಿಪ್ಪ ನಿರುತದಲ್ಲಿ ಪಾವನಗುಣಸಾಂದ್ರ ೩೦

ಬದರಪಾಂಡುರಬಿಂಬವದನ ಕುಂಡಲಕಪೋಲ
ಪದುಮರಾಗ ವಜ್ರನೀಲ ನವರತ್ನಾಭರಣ
ಯದುಪತಿ ಯಾಮಿನಿಯಲ್ಲಿ ವಿಧುವಿನ ಬೆಳದಿಂಗಳಲ್ಲಿ
ಸುದತಿಯರ ಕ್ರೀಡೆಯಲಿಪ್ಪ ಮದಗಜಾಭನು ೩೧

ಗೋಪಾಂತಿ ಗೋಪಳೆರು ದಿವದಿ ಪ್ರೇಮಕ್ರಾಂತರ ತಾಪಹೊಂದೆ
ಸೋಮಕುಲಜ ಪರಿಹರಿಸಿದ ಶ್ಯಾಮಸುಂದರ
ಕಾಮಿನೇರ ಸನ್ಮುಖದಿ ಸ್ವಾಮಿ ತೋರುತಿಹ ಸತತ
ಭಾಮೆಯರ ಭಕ್ತಿಭಾವಕೆ ಮನೋಹರ ೩೨

ವ್ರಜದ ಗೋಪೇರು ಕೃಷ್ಣನ್ನ ತ್ರಿಜಗಾಶ್ಚರ್ಯದ ಲೀಲೆ
ನಿಜಭಕ್ತಿಯಲಿ ಪಾಡಿ ಸುಖಿಸಿ ಭಜಿಸುತ್ತಿದ್ದರು
ಸುಜನರು ತನ್ಮನಸ್ಕೆಯರು ಗಜರಾಜಗಾಮಿನಿಯರು
ದ್ವಿಜರಾಜವದನೆಯರು ದ್ವಿಜದೇವಪ್ರಿಯರು ೩೩

ಈ ವೇಣುಗೀತಾಮೃತವ ದಾವ ಪ್ರಾಣಿಗಳ್ಕೇಳುವರು
ಭಾವಶುದ್ಧಿಲಿ ಕೇಳುವರು ಕೋವಿದರವರು
ಪಾವನ ಕೃಷ್ಣಚರಿತ್ರೆ ಶ್ರೀವ್ಯಾಸ ಮುನೀಂದ್ರತನಯ
ಶ್ರೀವಿಷ್ಣುರಾತಂಗ್ಹೇಳಿ ಸೇವಿಸಿದನು ೩೪

ಶ್ರೀವರ ಪ್ರಸನ್ನವೆಂಕಟ್ಕೃಷ್ಣದೇವದೇವನು ನಮಗಿಷ್ಟವ
ನೀವನು ಸಂದೇಹವಿಲ್ಲ ದೇವಸುರತರು
ಆವ ಕಾಲಕಾಲದಲ್ಲಿ ಸತ್ಸೇವಕವತ್ಸಲ ಸತ್ಯ
ಭಾವುಕರು ಹರಿವ್ಯಾಸಂಗದ ಜೀವನ್ಮುಕ್ತರು ೩೫

## ೫೦

ರಾಗ : [ಜಂಜೂಟಿ] ತಾಳ : [ಆದಿತಾಳ]

ಕೃಷ್ಣನಾಶ್ರಿತ ಶಿಷ್ಟರೆಲ್ಲರು ತುಷ್ಟಿಯಿರಲು ಅರಿಷ್ಟನೆಂಬುವ
ದುಷ್ಟಕಂಸನ ಇಷ್ಟಕಾರ್ಯಕೆ ಗೋಷ್ಠಕೈತಂದ
ಪಾರ್ಷ್ಣಿಬಲದಿಂ ನಷ್ಟ ಮಾಡುವ ಧೃಷ್ಟವೃಷಭನು ಕಷ್ಟಬಡಿಸಿದ
ಪೃಷ್ಠಕಕುದಿಯು ಕಂಪಿಸಿದನು ಮಹಿಯನತಿಘೋರ ೧

ಕಾಲ ಕೆದರುತ ಬಾಲ ನಿಗುರಿಸಿ ಸೀಳಿದನು ಮೇಘಗಳ ಕೋಡಿಲಿ
ಮೇಲೆ ಮೇಲ್ ಮಲಮೂತ್ರ ಬಿಡುತಲಿ ಆಲಿ ಕೆಂಪಡರೆ
ಬಾಲಕರ ಬಾಲೆಯರ ಗೋಗಳ ಮೇಳವಂಜಿಸಿ ಡುರುಕಿಹಾಕುತ
ಸ್ಥೂಲ ಭೀಕರ ಗರ್ಭಿಣಿಯರ ಬಸಿರ ಕೆಡಹಿದನು ೨

ಖೂಳನುಪಟಳ ತಾಳಲಾರದೆ ಗೋಳಿಡುತ ಓಡಿದರು ಸಕಲರು
ಪಾಲಿಸೈ ಗೋವಿಂದ ರಾಮಾಯೆನುತ ಮೊರೆಯಿಡುವ
ಬಾಲೆಯರ ಆರ್ತಸ್ವರಂಗಳ ಕೇಳಿ ಅಂಜದಿರೆನುತ ಅಭಯವ
ಪೇಳಿ ಖಳನೊಳು ಮಾತನಾಡಿದ ಶ್ರೀಲಲನೆಯರಸ ೩

ಎಲೆ ದುರಾತ್ಮಾರಿಷ್ಟವೃಷಭನೆ ಎಳೆಯರನು ಗೋವತ್ಸಗೋವರ
ಲಲನೆಯರನಂಜಿಸುವ ವೀರನೆ ಬಾರೊ ನೀ ನಮ್ಮ
ಬಳಿಯೆ ಶೀಘ್ರದಿ ಫಲವನೀವೆವು ಇಳೆಗೆ ಭಾರಕ ದುಷ್ಟಹರ್ತರು
ಬಲಮುರಾರ್ದರು ತಿಳಿಯಲಿಲ್ಲವೆ ಮೃತ್ಯು ನಿನಗೆಂದು ೪

ವೀರಧ್ವನಿಯಿಂ ಕರೆದನಚ್ಯುತ ಕ್ಷೂರಶೃಂಗನು ಗೋಣತಗ್ಗಿಸಿ
ಧಾರುಣಿಯ ಕೆದರುತ್ತ ಸುರಪನ ಕರದ ವಜ್ರದೊಲು
ವೀರವೇಗದಿ ಬಂದು ತಗುಲಿದ ಶೌರಿ ಗೆಳೆಯರ ಪೆಗಲಿನಲಿ ನಳಿ
ತೋಳ ಪೇರಿಯೆ ನಗುತ ನೋಡಿದ ದುಷ್ಟಚೇಷ್ಟೆಯನು ೫

ಸಖರನುಳಿದಚ್ಯುತನು ಬರುತಿಹ ಕಕುದಿಯನು ಕೆಡಹಿದನು ಧರೆಯಲಿ
ಪ್ರಖರ ಪುನರಪಿ ಎದ್ದು ಕೋಪದಿ ಕೆಣಕಿದನು ಹರಿಯು
ನಿಖಿಳರೊಡೆಯನವನವಿಷಾಣ[1][ವ][1] ಸುಕರಪಲ್ಲವದ್ಹಿಡಿದುಂಕೆಡವಿದ
ಕುಖಳನ್ಹಿಂಗಾಲ್ಪಿಡಿದು ತಿರುಗಿಸಿ ಅಪ್ಪಳಿಸಿದಿಳೆಗೆ ೬

ಮರ್ದಿಸಿದ ಮುಂಗಾಲಿನಿಂದಲಿ ಆರ್ದ್ರವಸ್ತ್ರವ ಹಿಂಡಿದೊಲ್ ಖಳ
ಮರ್ದಕೆತ್ತಿದ ಕೋಡೆರಡರಲಿ ಚೂರ್ಣಿಸಿದ ಬಳಿಕ

---

1 ದ

ಕಾರ್ಯ ರಕ್ಷಣ ಕಂಗಳೆರಡು ಉದಿಸುವಂತ ಪ್ರೀತನಾದ ಯದುಪ್ರವರ
ಸಾರ್ವ ಸುರರಿಂದಲಿ ತುತಿಸಿದಪ್ಪಣೆಯಕೊಡುನಾದನು ೬

ಸುರಮುನಿಗಳೊಗ್ಗಿನಿ ತುತಿಸಿದರ್ ಪರಮಪದಿ ಅಗ್ರಜನೊಳೆಯುದರಿಂ
ವರಗೋಪಾತಿಗಳ ಹಿಂದಿನಿಂ ಮುರಹರ ವ್ರಜವ ಪ್ರೀಗಲು
ಚಿರಮಹಿಮನದ್ಭುತ ಸುಕರ್ಮದ ಪರಮಮೂರ್ತಿ ಗೋಪಕರು ತುತಿಸಲು
ಕರುಣಾಪೀಯೂಷ ಕರುಣಾದೃಷ್ಟ್ಯಾನಂದದಲಿ ನೋಡಿದ ೭

ತನ್ನ ನಂಬಿದ ಜೀವರಿಗೆ ಮತ್ತನ್ಯರಿಂ ಬಾಧೆಯು ಬಾರದೆ
ತನ್ನ ಬಿರುದಿಗೆ ಹಾನಿಗಾಣದ ದೀನವತ್ಸಲನು
ಧನ್ಯರನು ಮಾಡಿದನು ವ್ರಜ ಮಾನವ್ಯರನು ಮಾಡಿದನು ಯಶೋದೆ ನಂ
ದನ್ನ ಪುಣ್ಯದ ಫಲವು ಶಿರಿಪ್ರಸನ್ನವೆಂಕಟೇಶ ೮

## ೫೧

ರಾಗ : ಕನ್ನಡ ಕಾಂಬೋಧಿ ತಾಳ : ಏಕತಾಳ

ಕೃಷ್ಣನಾಶ್ರಿತರಿಗ್ಯಥೇಷ್ಟ ಜಯವು ಶ್ರೀ ವಿಷ್ಣು ವೈಷ್ಣವದ್ರೋಹಿಗಳಿಗೆ
ಕಷ್ಟದ ತಮಸು ವಿಶಿಷ್ಟ ಮಹಾಲಯ ದುಷ್ಟರಿಗಪಜಯವಾಗೆ ಪ.

ಜಾತಃ ಕಂಸವಧಾರ್ಥನು ಹರಿಯೆಂದು ನೀತಜ್ಞನು ಮುನಿಪ್ರಹ್ವ
ರಾತನು ಶ್ರೀತರಣಿ ಪ್ರೀತಿಗೆ ಬಂದನು ಆತುರದಲ್ಲಿ ಸಂಭ್ರಮ್ಯ
ಪಾತಕಿ ಕಂಸಗೆ ಪಾತಕ ರೀತಿಯ ಬೋಧಿಸಿದ್ದೀಗೆ
ತಾತನಂ ನಂದನು ಮಾತೆ ಯಶೋದೆಯು ಘಾತಿಸಿಕೊಳದ ಕನ್ನೆಳಿಗೆ ೧

ದೇವಕಿಜಠರಜನಾ ವಾಸುದೇವನು ದೇವಿ ರೋಹಿಣಿಸುತ ಬಲನು
ದೇವಿ ಯಮುನೆ ದಾಟಿ ಗೋಪಪಳ್ಳಿ ವಸುದೇವನಿಟ್ಟ ಕನ್ಯೆಯಳನು
ದೇವಕಿಗಿತ್ತನು ಈ ವಿಧ ಕಾರ್ಯ ನೃದೇವ ಎಚ್ಚರವ ಹೇಳುವೆನು
ಆ ವೀರರಿಬ್ಬರು ಬೆಳೆವರು ವ್ರಜದಲಿ ಕಾವರು ದೇವಕ್ಕಳನ್ನು ೨

ನಂದನು ಶೌರಿಗೆ ಬಂಧು ಸ್ನೇಹಿತ ಬಲು ಕಂದ ವೀರರು ಉಭಯುತರು
ಕೊಂದರು ನಿನ್ನ ಮಂದಿಯ ಭೋಜಪ ಸಂದೇಹವಿಲ್ಲವಹಿತರು
ಎಂದನೆ ಉಗ್ರದಿ ಬೆಂದನಂ ಸಾಣೆಯ ಹೊಂದಿದ್ದ ಕತ್ತಿಯುವಿಡಿದ
ಇಂದೇ ಆನಕದುಂದುಭಿ ಸ್ತ್ರೀಸಹ ಕೊಂದೆನೆನುತ ಖಳನುಡಿದ ೩

ನಾರದ ಮುನಿಯು ನಿವಾರಿಸಿದನು ಮುಂದೆ ಕಾರಣ ಉಂಟುಳುಹೆನಲು
ವಿಾರದೆ ಆಜ್ಞೆಯು ಶೌರಿಯು ಸತಿ ಸಹ ಕಾರಾಗೃಹದಿ ಬಂಧಿಸಲು
ಕ್ರೂರನು ಲೋಹದ ಕಾಡುಕಟಿಗೆ ಹೇಳಿ ನಾರಾಯಣ ಸ್ಮರಣೆಯಿಂದ
ಹಾರಿದ ಗಗನಕೆ ಮಾರಕ ಕೇಶಿಗೆ ಧಾರುಣಿಪತಿ ನೇಮಿಸಿದ ೪

ಎಲೆ ಕೇಶಿಯೆ ಗೋವಳರ ಪಳ್ಳಿಗೆ ಪೋಗು ತಲಸದೆ ಕೃಷ್ಣಬಲರನು
ಕೊಲು ಗಹನರವರ್ ಪೇಳಿದನು ನಂದನ ನಿಲಯದಿ ಮತ್ತವರನ್ನು
ಸಲೆ ಚಾಣೂರ ಕೌಸಲ ಮುಷ್ಟಿಕಾಮಾತ್ಯ ಹಲಹಸ್ತಿಪರನು ಕರೆಸಿದ
ಬಲವಾಸುದೇವರ ಕೊಲುವ ಉಪಾಯವ ಕಲಿಕಂಸನು ನೇಮಿಸಿದ ೫

ಕೇಳಿರೋ ನಮ್ಮಾಪ್ತಾಳುಗಳಿರಾ ನೀವ್ ಕೇಳಿ ಬಲ್ಲಿರಿ ನಂದವ್ರಜದಿ
ಕಾಲರೂಪರು ಶೌರಿ ಬಾಲಕರಿಬ್ಬರು ಬಾಲ ಅಚ್ಯುತ ಬಲರಿಹರು
ಹೇಳಲೇನಿಮ್ಮಯ ಮೇಲಾಳುಗಳ ಗೋಪಾಲಕರು ಸವರಿದರು
ನಾಳಿಗೆ ಕರೆಸುವೆ ಮೇಲವರರ್ಥವ ಆಲೋಕಿಸಲ್ಯಾದವರು ೬

ರಾಮ ಕೃಷ್ಣರು ಬಲು ಕೋಮಲರೆನ್ನದೆ ನೇಮಿಸಿ ಮಲ್ಲಲೀಲೆಯಲಿ
ಆ ಮಹಾಖಳರ ನಿರ್ನಾಮವ ಮಾಡಿರಿ ಸ್ವಾಮಿದ್ರೋಹಿಗಳ ಶೀಘ್ರದಲಿ
ಹೇಮಮಂಚಗಳ ಮಹಾಮಲ್ಲರ ರಂಗ ಗ್ರಾಮದವರು ನೋಡುವಲಿ
ಹೇ ಮಹಾಮಾತ್ಯನೆ ಧೀಮಂತನು ನೀ ನೇಮಿತ ಕಾರ್ಯ ಮಾಡುವಲಿ ೭

ಕುವಲಯಪೀಡನ ಕವಾಟದಿ ನಿಲಿಸಿರಿ ಅವರಿಬ್ಬರು ಬರಲಾಗೆ
ತವಕದಿ ಕೊಲಿಸುವ ಹವಣದಲಿರಿ ನಿಮ್ಮವರೆಲ್ಲರು ಒಂದಾಗಿ
ಅವನಿಪ ಹೀಗೆನಲವರೆಂದರು ಹೇ ಪ್ರಭೊ ತವ ಭಗಿನೀಸುತರವರು
ಕುವರರ ಕೊಂದರೆ ಭುವಿಯಲಿ ಅಪವಾದವು ಬಹುದೆಂದು ನುಡಿದರು ೮

ಈ ಪರಿ ನುಡಿಯಲು ಭೂಪತಿಯೆಂದನು ನಾ ಪುತ್ರನಲ್ಲುಗ್ರಸೇನಗೆ
ನಾ ಪುಟ್ಟಿದೆ ಗಂಧರ್ವಗೆ ರಾಜನ ರೂಪದಿ ತೋರಿದ ತಾಯ್ಗೆ
ಆ ಪತಿವ್ರತೆ ಋತುರೂಪ್ಯಾಗಿದ್ದಳು ಭೂಪತಿಯೆಂದು ಕೂಡಿದಳು
ಕಾಪಟ್ಯವರಿಯದೆ ತಾ ಪಶ್ಚಾತ್ ಸಂತಾಪದಿ ಬಲು ಬಳಲಿದಳು ೯

ದ್ರುಮಿಳ ಗಂಧರ್ವನ ಕುವರನು ನಾ ಭೋಜ ಚಮು ಸಂಬಂಧವಿನ್ನೇನು
ಕುಮತಿ ದುರಾತ್ಮನೆ ಮಮಕ್ಷೇತ್ರದಿ ನೀ ಪ್ರಮತ್ತ ಬೀಜಾರೋಪಿಸಿದೆ
ರಮಿಸಿದ ಪಾಪಕೆ ಸುರಮುಣಿ ಪ್ರಾಯಶ್ಚಿತ್ತ ಆಮಲಕಾಯವ ದೋಷಿಸಿದೆ ೧೦

ಎನೆ ನುಡಿದನು ನಾರದಮುನಿ ನೀ ಮಹಾತ್ಮಳು ನಿಮ್ಮ ಭಾಗ್ಯಕ್ಕೆಣೆಯೆ
ಎನಲು ಕೋಪಿಸಿದಳವನಿಜಲಾನಿಲವಾಯು ಭಾನು ದಿಕ್ಪತಿಗಳು ಹೋಣೆಯೆ
ಜನಶಿಗಳೆ ಮಾಡಿಸಿತು ಪಾಪವ ನಾ ಮಹಾಸ್ಥಾನಕೆ ಮಾಡಿದರೆ
ಜನಪನು ಶಿಕ್ಷಿಸಲೆನಗಿಂದಳು ನಮ್ಮ ಜನಾ ರೋದಿಸಿದಳು ಹೆದರೆ ೧೧

ಮದಕರಿ ನಳಿನಿಯ ಕದಡಿ ಕೆಡಿಸಿದಂದದಿ ಕಶ್ಮಲ ನಿನ್ನ ಸ್ವರೂಪ
ಪದಕಿನ್ನು ಪಾತಿವ್ರತ್ಯ ಕದಲಿತು ನಿನ್ನನು ಮಧುಹರ ಸಮ ಸರ್ವೋತ್ತ
ಹೆದರಿದನವ ಶಾಪದ ಭಯದಿಂದಿದನು ಮದಿಸಿದ ಬಲವಿನಿಯಿದರಿ
ಪದಿಯ ಬೀಜದಿ ಸುತನುದಿಸುವ ಬಲವಾರಿಧಿ ಬಲು ಘೋರನೆನುತಲಿ ೧೨

ಅನೃತ ನುಡಿಯೆ ನಾ ಮನಜನಯನೆ ಕೇಳೆನಲು ಜನಾ ಸಂತೈಸಿ
ನಿನ ಬೀಜ ದುಷ್ಟನು ಅನಿಮಿಷಜನರಿಪು ಭಿನ್ನವ್ರತವು ಹರಿದ್ವೇಷಿ
ಇನಿತು ಕರುಣಾಶೂನ್ಯನ ನಿಷ್ಠುರನೆ ಕ್ರೂರ ಘನಗುರುಜನದ್ವಿಜದ್ರೋಹಿ
ಅನುದಿನ ಉನ್ಮಾರ್ಗನು ಕಂಟಕನು ಸ್ವಜನಜನರಿಗೆ ಕಾಳಾಹಿ ೧೩

ಜನನಿಯ ನುಡಿಗೇಳ್ದನು ಗಂಧರ್ವನು ಘನಶಾಪಕಂಜ್ಯೋಡಿದನು
ನನಗೆ ಸ್ವಜನವಿಲ್ಲ ಜನನಿ ಬಸಿರಹೊಂದಿ ಜನಿಸಿದ ಮೊದಲಾಗಿನ್ನು ೧೪

ಅನಿಮಿಷಮುನಿ ಪೇಳಿದನು ಉಪದೇಶವ ಘನಗುರುಸುತ ಪ್ರಸಿಯಲ್ಲಿ
ಎನಗಾಪ್ತರು ನೀವು ಮನಸಿನ ಕಾರ್ಯವ ಅನುಮಾನಿಲ್ಲದೆ ಮಾಡಿಯೆಲ್ಲಿ
ಜನಕುಗ್ರಸೇನನು ಘನದುರ್ಬುದ್ಧ ದೇವಕನು ನನಗಾಪ್ತ ವಿರುದ್ಧ
ಆನಕದುಂದುಭಿ ಕಿತವನು ಮಾತ್ರೇನು ನನ್ನ ಪಿತ ಗಂಧರ್ವ ಸಿದ್ಧ ೧೫

ಬಲಭದ್ರ ಅಚ್ಯುತರಬ್ಬರೆ ಕೊಲ್ಲಿರಿ ಬಲುಲೇಸಹ ನಿಮಗಿಲ್ಲ
ಕೊಲಲು ಕಲಿಸಿ ಕುವಲಯಾಪೀಡನಿಗೆ ಎಳೆಯರು ಲಘುತರರಲಾ
ಲಲನೆ ಗೌರೀಶನ ಬಲು ಭಜಿಸಿರಿ ಮುಂದೆ ಗೆಲುವು ಭಾಗ್ಯೋದಯವಕ್ಕು
ಫಲ ಕುಸುಮಾವಳಿಯಲಿ ನರಮೇಧವ ಬಲಿಗವರರ್ಪಿಸಬೇಕು ೧೬

ಕಲಿವಸುದೇವನು ಕುಲೀನೆಯು ದೇವಕಿ ಸತಿ ಉಗ್ರಸೇನ ಗೋವಳರು
ಬಲು ಯಾದವಜನ ಲಲಿತೋತ್ಸವವನು ಕುಳಿತು ನೋಡಲಿ ನಲಿದವರು
ಎಳೆಮಕ್ಕಳ ಪಥಗಳ ನೋಡಲಿ ಕಂಗಳ ತುಂಬ ಜರಠರು ನೆರೆದು
ಕೆಲವು ಜನಪದವು ಬಿಲುಹಬ್ಬದ ಬಗೆಗಳ ನೋಡುವರಿಗೆ ಅರಿದು ೧೭

ಹೇ ಮಹಾಮಾತ್ಯನೆ ಈ ಮಹಾಕಾರ್ಯವ ನೀ ಮಾಡು ನಿನಗೆ ಮಂಗಳವೆ
ಆ ಮತ್ತ ವಾರಣೋದ್ದಾಮವ ನಿಲ್ಲಿಸು ಹೈಮರಂಗದ್ವಾರ ನಡುವೆ

ರಾಮನ ಸೋದರಮಾವನ ಕೇಳಿಸು ನೇಮಿಸು ಚತುರ್ದಶಿ ದಿವಸ
ಪ್ರೇಮದ ಬಿಲ್ಲುಹಬ್ಬ ಸೋಮಧರನ ಪ್ರೀತಿ ಈ ಮೇಧ ಪಶುದ್ವಯ ಹಿಂಸೆ ೧೮

ಅಕ್ರೂರ ಮಂತ್ರಿಯು ಕರವಿಡಿದು ಹುಸಿನಕ್ಕು ಹೇಳಿದ ಭೋಜಪನು
ಸೊಕ್ಕಿದ ಶೌರಿಯ ಮಕ್ಕಳ ವ್ರಜದಲಿ ಆ ಕೃಷ್ಣರಾಮರಿಬ್ಬರನು
ಗಕ್ಕನೆ ಧನುರ್ಯಾಗಕ್ಕೆ ಕರೆದು ತಾ ಈ ಕಾರ್ಯಗೌರವ ನಿನಗೆ
ನೀ ಕ್ಷುದ್ರನಲ್ಲೆಮಗೆ ಕೇವಲಾಪ್ತನು ಆ ಕೃಷ್ಣನಿಂದ್ರಗೊಲಿದಂತೆ ೧೯

ನಂದವ್ರಜಕೆ ಪೋಗೊಂದಿಷ್ಟು ಕಾಯದೆ ನಂದನರಿಬ್ಬರ ಕೂಡಿ
ಸ್ಯಂದನವೇರಿಸಿ ಮಂದಮತಿಯೆನಿಪ ನಂದಗೋಪನ ಒಡಗೂಡಿ
ಎಂದಿಗೆ ಕೊಡುವ ಕರತೆಗೆದುಕೊಂಡು ಮಂದಿಯು ಸಹ ಉತ್ಸವಕೆ
ನಿಂದಿರದೆ ಬಾಯೆಂದನು ಮತ್ತೆ ಮದಾಂಧನು ನಿಜಮರಣಕ್ಕೆ ೨೦

ಕೇಳಿಲಿ ದಾನವಪತಿ ಲಕ್ಷ್ಮೀಶನ ಆಳುಗಳಿನ್ನ ವೈರಿಗಳು
ಕಾಲಕಲ್ಪೇಭನ ಕೈಲಿ ಕೊಲಿಸುವೆನು ಮೇಲೆ ಚಾಣೂರಮಲ್ಲ ಸಿಡಿಲು
ಬೀಳಲು ಉಳಿವರೆ ಬಾಲಕಕಿತವರು ಖೋಳಕಿತವ ವಸುದೇವ
ಸಾಲು ಯಾದವರು ದೃಜ್ಕೊಲರು ವೃಷ್ಣಿಭೋಜ ಪಾಳಯು ಕುಕುರ
ದಾಶಾರ್ಹ ೨೧

ನೃಪಭ್ರಾತಾ ಆಹುಕ ಕೆಪಟಿಯು ದೇವಕಾದ್ಯಪಕಾರಿಗಳ ಕೊಲಿಸುವೆ
ಸುಪೃಥಿವಿಯಾಳುವೆ ನೃಪಮಾಗಧ ಗುರುಕೃಪೆಯುಂಟೆನಗೆ ಒಲಿಸುವೆ
ಆ ಪರಶಿವನು ನಮಗಪರ್ಮಿತ ಮಿತ್ರನು ರಿಪುಹರ ಬಾಣ ಶಂಭರರು
ಕುಪಿತ ವಿವಿಧ ಭೌಮ ಉಪಕಾರಿಗಳು ನಮಗೆ ಪರಮಹಿತರು ಸಮ್ಮತರು ೨೨

ಸುರಪಕ್ಷದವರ ತರಿವೆ ಸಾಮ್ರಾಜ್ಯವ ಪರಮ ಸುಖದಿ ಮಾಡುವೆನು
ಹರಿಬಲರಿಬ್ಬರ ಉರುಶೀಘ್ರದಿ ನೀನು ಕರೆತಂದರೆ ವಧಿಸುವೆನು
ಅರಸನ ನುಡಿಗುತ್ತರವನು ಕೊಟ್ಟನು ಅರಿಯೆ ನಾ ದೈವದ ಗತಿಯ
ಅರಿದೇನು ನಿನ್ನ ಮನಸದ್ಧುರುಷವ ಸಿದ್ಧ್ಯಸಿದ್ಧ್ಯೆರಡು ಸಮಾನದ ಮತಿಯ ೨೩

ಪುರುಷಗೆ ಮಹತ್ಕಾಲ ಬರೆ ಮಾತೇನೋ ನಿನ್ನ ನಿರೂಪದಿ ವ್ರಜಕೈದುವೆನು
ಪರಮ ಮನೋರಥ ದೊರೆಕೊಂಬುದು ಬಲು ಅರಿದೆನುತಲಿ ತೆರಳಿದನು
ದುರುಳರು ಉಚ್ಚಪದಕೆ ಕರವಿಕ್ಕಲು ಹರಿಯು ಸಹಾಯನಾಗುವನೆ
ಸುರಸಂಪದ ಸ್ಥಿರಸುರರ ಸಿರಿಯು ಉರಿ ನೆರೆ ಹೊಂದದಿಹುದು ನಿದಾನ ೨೪

ಇತಿ ಪ್ರಸನ್ನವೆಂಕಟ ಗಿರಿಪತಿಕೃಷ್ಣನ ಪದುಮನ ಸುಕೃತದ ಫಲವು
ಮಾರಕೆ ನಮ್ಮಯ ಗುರುಚರಿಯರ ತಪದಿಂದ ಚಿರದಿಂದ ಗೃಹಕೈದಿದರಲು
ಪರಮ ದಾಸಿಕೆ ಶ್ರೀಪತಿ ಪ್ರೇರಕೆನಿಂದ ಇರುಳೊಂದು ಹರಿಸ್ಮರಣೆಂದ
ಪರಮಭಾಗವತಕಾರ್ಯನಿಷ್ಠನು ತನ್ನವರ ಮಂದಿರದಲಿ ಚಂದ ೨೫

## ೫೨

**ರಾಗ : ಸಾವೇರಿ** **ತಾಳ : ಜಕ್ಕಣಿ ?**

ಹರಿಯ ಪಾದಾಬ್ಜ ಹೊಕ್ಕವರಿಗೆ ದುರಿತವ
ಸ್ಪರುಶವಿಲ್ಲ ಹರಿಯಲರಸು ಮರುಳೆ ಕರೆನುವ ಪ.

ದಾನವಪತಿಯು ಕಳಿಸಿ ಕಂಸ ದೀನಕೇಶಿಗೆ
ತಾ ನಿರೂಪಿಸಿದನು ತನ್ನ ಹಾನಿ ಬಯಕೆಗೆ
ನೀನು ಹೋಗು ವ್ರಜಕೆ ಶೌರಿ ಸೂನು ಯುಗ್ಮರ
ಪ್ರಾಣಹರಣ ಮಾಡಿಲ್ಲಿಗೆ ಬಾ ನೀ ಸತ್ವರ ೧

ಎನಲು ಪತಿತ ವ್ರಜಕೆ ಬಂದಾ ಘ್ರಾಣಿ ಹಯದಾವನು
ಘನಸಟಾಂಕ ವಿಮಾನಾವಳಿಯನಾಕ್ಷಣ ಕೆಡಹಿದನು
ಕೊನೆ ಖುರದಲಿ ಕೆದರಿ ಕೆದರಿ ಅವನಿ ಸೀಳಿ ತಾ
ವಿನಯ ಜಂಗುಳಿ ಹೊಕ್ಕನು ಹಿಂಗಾಲಿನಲ್ಲಿ ಒದೆಯುತ ೨

ಹೇಷಾರವದಿ ಮುಖಕೋಟರದಿ ಘೋಷಿಸಿ ಬೆದರಿಸಿ
ರೋಷಾಗ್ನಿ ನೇತ್ರ ಜ್ವಲಿಸಿ ಹಿಳ್ಕಿಸಿ ನಾಸಿಕದ್ವಬ್ಬರಿಸಿ
ತ್ರಾಸಿಸಿದಾ ಖಳಘೋಷದಿ ಜೀವರ ಬೀಸಿ ಪುಚ್ಛಾಗ್ರದಲಿ
ಘಾಸಿಸಿ ಮೇಘಂಗಳೋಡಿಸಿದನು ಕೇಶಿ ಭೂಕಂಪಿಸಿ ೩

ಕೊಬ್ಬಿನ ಖಳನು ತನ್ನ ಸಮಾನರನೊಬ್ಬರ ಕಾಣದಾದ
ಅಬ್ಧಿಶಯನ ಹಯನ ತ್ರಾಣದ ಅಬ್ಬರ ನೋಡಿದ
ಹೆಬ್ಬಾಯದೆರೆದು ಆಕಾಶನುಂಗುವ ಕೊಬ್ಬಿಲಿ ಓಡಿಬಂದ
ಅಬ್ಧಿಶಯನಗೆ ಅಭಿಮುಖನಾಗಿ ಶಬ್ದವ ಮಾಡಿದ ೪

ಹಿಂಗಾಲ ಹಾರಿಸಿ ಹರಿಯನೊದ್ದರೆ ರಂಗ ವಂಚಿಸಿದನು
ಮಂಗಳಮೂರುತಿ ಮರುಳೆ (ರಳಿ?) ಖಳನ ಅಂಘ್ರಿಯ ಹಿಡಿದನು

ತುಂಗ ವಿಕ್ರಮ ತುರಂಗದ ಪ್ರಮಥಿಸಿ ವಿಹಂಗವ ಭುಜಂಗನನು
ಭಂಗಿಸಿದಂತೆ ನೂರುಬಿಲ್ಲ ಪ್ರಮಾಣ ಹಿಂಗದೆ ಬಗೆದನು ೫

ಮತ್ತವನೆದ್ದನು ಬಿದ್ದ ಸಂಗ್ರಾಮದಿ ಸತ್ವರ ಕಾದಿ ಬಂದ
ದೈತ್ಯಾರಿ ತನ್ನ ತೋಳೊಳಿಂದವನ ಎಳೆದ ವಕ್ತ್ರದಿ ಹೊಗಿಸಿದ
ಹುತ್ತಿನೊಳುರಗ ಪೋಗುವ ತೆರದಿ ಹಸ್ತವ ವರ್ಧಿಸಿದ
ಶತ್ರುವಿಸ್ಮಯದ ಗಾತ್ರವ ಕಾಯುಕ್ಕಿನ ತೆರವಿ ಹಿಸಿದ ೬

ಪದುಮನಾಭನ ಭುಜಸ್ತಂಭಾಗ್ನಿಲಿ ಉದುರೆ ದಂತಗಳು
ಆದ್ಯ ಆಮಯುಪೇಕ್ಷಿಸೆ ವರ್ಧಿಸಿದಂತಾಗಿ ಬಾಧಿಸಲು
ಸ್ವೇದಾಂಗನಾಗಿ ತೇಲುಗಣ್ಣಲಿ ಬಿಟ್ಟನು ಮೇದಿನಿಲಂಘ್ರಿ ಚಾಚಿ
ಛೇದಿಸಿದ ಕರ್ಕಟಕಿ ಫಲದಂತೆ ಅದನು ಪ್ರಾಯಯು ಬಿಟ್ಟಿ ೭

ಯಮಸದನಕ್ಕೆ ಪೋದನು ದುಷ್ಟನು ಅಮರರಂಬರದಿ
ರಮೆಯರಸನ ಸ್ತೋತ್ರದಿ ಪೂಮಳೆಗರೆದರು ಮುದದಿ
ಗೋಪತಿಗೋಪಕ್ಕಳೊಡನೆ ಹೊಕ್ಕನು ಶ್ರೀಮಾಧವಾವ್ರಜವ
ಅಮರಮುನಿ ನಾರದನು ಬಂದನು ಹೇಳಲು ರಹಸ್ಯವ ೮

ಸ್ವಕೀಯ ಕರ್ತವ್ಯ ಮಾಡುವೆನೆನುತ ಅಕ್ಲಿಷ್ಟಕರ್ಮನಿಗೆ
ಏಕಾಂತಸೇವೆಗೆ ಭಾಗವತೋತ್ತಮ ಬೇಕಾಗಿ ಬಂದನಾಗೆ
ಲೋಕೇಶ್ವರೇಶ್ವರ ಬಂದ ನಾರದಗೆ ಬೇಕಾರ್ಹಣ ಮಾಡಿದನು
ಪ್ರೋಕ ಕಂಸನ ಕುಚೇಷ್ಟೆಯ ಹೇಳಿದ ತ್ರಿಕಾಲಜ್ಞಾನಿ ತಾನು ೯

ಅಶುಭಹರ ಸದಾ ಶುಭದಾಯಕ ದೋಷದೂರ ಮುಕುಂದ
ವಾಸುದೇವಾಚ್ಯುತಾಶೇಷಕಲ್ಯಾಣ ಗುಣಾಶ್ರಯ ಶ್ರೀ ಗೋವಿಂದ
ಭಾಸುರ ವೈಕುಂಠವಾಸ ಶ್ರೀನಿವಾಸ ಕೇಶವ ವಿಶ್ವಕರ್ತ
ಪ್ರಸನ್ನವೆಂಕಟಾದ್ರೀಶ ಸರ್ವೇಶ್ವರ ಭೂಸತಿಭಾರಹರ ೧೦

## ೫೩

**ರಾಗ : ಕನ್ನಡ ಕಾಂಬೋಧಿ** **ತಾಳ : ಝಂಪೆ**

ಸುಜ್ಞನಾರದ ತ್ರಿಕಾಲಜ್ಞ ಹೇಳಿದನು ಸರ್ವಜ್ಞ ಸರ್ವೋತ್ತಮ ಶ್ರೀಹರಿಗೆ
ಅಜ್ಞ ದೈತ್ಯರ ತರಿವಭಿಜ್ಞ ಬುಧರನು ಪೊರೆವ ಜಿಜ್ಞಾಸೆ ಮುಂದಾಗೆ ಬ್ಯಾಗೆ ಪ.

ಜಯ ಕೃಷ್ಣ ಕೃಷ್ಣ ಭಗವಾನಪ್ರಮೇಯ ತ್ರೈಲೋಕ್ಯೇಶ ಯೋಗಿಜನಪೂಜ್ಯ
ನಾಕಪನ ನಾಕಪ ಪಿನಾಕಿ ವಿಪ ಫಣಿಪ ವಿಧಿ ಲೋಕಮಾತಾರ್ಚಿತಪದಾಬ್ಜ
ಶ್ರೀಕಾಂತ ಸ್ವಸುಖಾರ್ಣವಪೂರ್ಣ ಜ್ಞಾನೈಶ್ವರ್ಯವಾರಿಧೆ ಸ್ವೇಚ್ಛೆ ಲೀಲೆಯಲಿ
ಲೋಕಕೆ ಸೃಷ್ಟಾರ ಪಾತಾರ ಹಂತಾರ ಜಗ ನಿಯಂತಾರ ಜಲಧಿ ೧

ಧರ್ಮರಕ್ಷಣೆಗವತರಿಸಿ ನೀ ಭುವಿಯಲ್ಲಿ ಧರ್ಮಕುಲನಾಶಕ ಸದ್ವೀಕ್ಷ
ಧರ್ಮವಿದ ಸತ್ಯಸಂಕಲ್ಪ ಗೋಭೂಸುರರ ಧರ್ಮಸಂರಕ್ಷಕ ದಕ್ಷ
ಧರ್ಮಕೆ ವಿರೋಧಿ ದೈತ್ಯರ ಕುಲಕೆ ಮನೆಕಿಲ್ಲ ಸುಧರ್ಮಜ್ಞ ದುಷ್ಟರ ಮಥಿಸುವೆ
ಪರ್ವ ಮಹಾ ಶಂಖಾರಿಧಾರಕಾಚ್ಯುತ ಹರೇ ಕರ್ಮಿಗಳ ವಧಿಸಿ ನಡುಗಿಸುವೆ ೨

ದಿಷ್ಟ್ಯಾ(ಧೃಷ್ಟ ?)ಹಂತನಾದ ಹಯಕಾಯದಾನವಕೊಕ್ಕಿ ವೃಷ್ಣಿಪತೆ ನಿನ್ನ ಕೈಯಿಂದ
ದುಷ್ಟನ ಫೂತ್ಕಾರಕೆ ಅಂಜಿ ಸುರರೋಡಿ ಕಷ್ಟಸುತಿದ್ದರೆಲ್ಲ ಗೋವಿಂದ
ತುಷ್ಟಿ ಬಡಿಸಿದೆಯವರ ಚಾಣೂರಮಲ್ಲ ಸಲೆ ಮುಷ್ಟಿಕಾದ್ಯರನು ಮರ್ದಿಸುವೆ
ಧೃಷ್ಟ ಹಸ್ತಿಪ ಕಂಸನ ವಧಿಸಿ ಅವನನುಜರಷ್ಟರನು ಬಲಗೈಲಿ ಕೊಲ್ಲಿಸುವೆ ೩

ನಾಳೆ ನಾಡಿದು ಹೋಗಿ ಸ್ವಾಮಿ ನೀ ಮಧುರೆಗೆ ಖೂಳಕಂಸನ ಬಿಲ್ಲ ಮುರಿವೆ
ಮೇಲೆ ಕಂಸನ ಮಿತ್ರಜಾಲ ಕುಜ ಶಂಖ ಮುರರೊಳಗೆ ತರಿವ ನಿಜರ ಹೊರೆವ
ಬಾಲೆ ಸತ್ಯಾದೇವಿಗಮರ[ತರು]ತರುವ ದಂಭೋಳಿಯ ಅಹಂಕಾರ ಖಂಡಿಸುವೆ
ಹೇಳಲೇನ್ ಕಣ್ಣಾರೆ ಕಾಂಬೆ ನಾ ನಿನ್ನ ಶುಭಲೀಲೆಯನು ವೀಣೆವಿಡಿದ್ದೋಳುವೆ ೪

ನೀ ಸತ್ಯಭಾಮೆಯ ಸ್ಯಮಂತಕ ಸಹಿತ ಗೆಲ್ವೆ ಲೇಸಾಗಿ ದ್ವಾರಕೆಯನಾಳುವೆ
ಭೂಸುರಗೆ ಸತ್ತ ಮಗನ್ನಿತ್ತು ಪೌಂಡ್ರಕ ಪಾಪಿ ದ್ವೇಷಿಯನು ಹೊಡೆದ್ಯಶಸು ಪಡೆವೆ
ಕಾಂತಿಯನು ದೀಪಿಸುವೆ ಜೋಂಕಿದ್ದಲ್ಲನು ಸೀಳ್ವೆ ನೀ ಶೀಘ್ರ ಚೈದ್ಯನ ಮಥಿಸುವೆ
ಲೇಸೀವೆ ಪಾರ್ಥನಿಗೆ ರಾಜಸೂಯಜ್ಞದಲಿ ಮಸೊಂದು ವಿಕ್ರಮ ಪ್ರಕಟಿಸುವೆ ೫

ದ್ವಾರಕೆಯ ನಗರದಲಿ ಭೂರಿ ಅದ್ಭುತ ಕರ್ಮ ತೋರಿಸುವೆ ಯಾದವರಪೊರೆವೆ
ನಾರಾಯಣ ಎಂತು ಕಾಂಬೆ ಕಣ್ಣಾರೆ ತವ ಚಾರು ಚರಿತ್ರೆಯ ಕೀರ್ತಿಸುವೆ
ಶ್ರೀರಮಣ ನಿಮ್ಮಗುಣ ವೈಕುಂಠಪ್ರಿಯಗೆ ಸಾರುವವ ಕವನ ಜ್ಞಾನವನು
ಕ್ರೂರ ದೈತ್ಯರಿಗೆಲ್ಲ ಕಾಲರೂಪನು ಭುವಿಯ ಭಾರಕಾಕ್ಷೋಹಿಣಿಗಳನು ೬

ರಣಮುಖದಿ ಸಂಹರಿಸುವೆ ಅರ್ಜುನನ ರಥವೇರಿ ಅನಿಮಿಷರ ಕಾರ್ಯಕಧ್ಯಕ್ಷ
ಘನಶುದ್ಧ ವಿಜ್ಞಾನ ಸಮೃದ್ಧ ವಿಗ್ರಹ ಗುಣತ್ರಯ ಪ್ರವಾಹಕಾಬ್ಜಾಕ್ಷಾ

ವನಿತೆ ಪೂತನೆಯು ವಶವಾಗಿ ಆಶ್ರಯಿಸಿದಳು ಗುಣವ್ಯತಿಕರವ ಮಾಡುವಳು
ನಿನ ಪ್ರೇರಣೆಯಲಿ ವರ್ತಿಪಳು ನೀನೆ ಕ್ರೀಡೆಯನು ಮಾಳ್ಪೆ ಮಾನಿಸ
ಜನರೊಳು ೭

ನಮೊ ನಮೋ ಯದು ವೃಷ್ಣಿ ಸಾತ್ವತರ ಧುರ್ಯನೆ ನಮೊ ನಮೋ ವಿಶ್ವಕೆ
ಪರ್ಯನೆ
ನಮೊ ನಮೋ ನಿರ್ಜರಕ್ಷೇಮ ಕಾರಣ ಕೃಷ್ಣಾ ನಮೊ ನಮೋ ಎಂದ ಮುನಿ
ಶ್ರೇಷ್ಠ
ರಮೆಯರಸನ ಬಹಳ ತುತಿಸಿ ವಂದಿಸಿ ನಡೆದ ಅಮರಮುನಿ ಹರಿಯಾಜ್ಞೆಯಿಂದ
ಅಮಿತೋತ್ಸವವ ಹರಿಯ ದರುಶನಲಾಭದಿ ಸುಮಹತಿ ವೀಣೆಯ ನುಡಿಸಿದ ೮

ತಪೋಯೋಗ್ಯ ಮಾಡಿದ ಸುಖವಾರ್ಧಿಯಲಿ ಬಾಳ ಸಂಭ್ರಮಕೆ ಸರಿಯಿಲ್ಲ
ಗೋಕುಲದಿ
ಕಮಲನಯನ ಮುಕುಂದ ಗೋವಿಂದಕೃಪೆಯಿಂದ ಗೋಪತಿ ಗೋಪರು
ಹರುಷಹೊಂದಿ
ವಿಮಲಚರಿತೆ ಶ್ರೀ ಪ್ರಸನ್ನವೆಂಕಟ ಕೃಷ್ಣ ಕಮನೀಯ ಗುಣಕಥನ ಹೇಳಿ
ಅಮರಾಪತಿಯ ಜನರ ಸಮನಾಗಿ ಸುಖಿಪರು ಶ್ರೀಮದ್ಧರಿಯ ಭಟರು ಕೇಳಿ ೯

## ಜಿಳಿ

ರಾಗ : ಶಂಕರಾಭರಣ ತಾಳ : ಏಕತಾಳ

ವಾಸುದೇವನ ಅಡಿದಾವರೆಯ ಆಶ್ರಿತ ಗೋವಳರು
ದ್ವೇಷಿಖಳಾಧಮ ವ್ಯೋಮಾಸುರನ ಗಾಸಿಯ ದಾಟಿದರು ಪ.

ಒಂದಿನ ಗೋವರ್ಧನಗಿರಿ ತಪ್ಪಲ ಹೊಂದಿಲಿ ಗೋಗಳನು
ಇಂದಿರೆಯರಸನು ಚರಿಸುತ ಗೋಪರ ವೃಂದಸಹಿತ ತಾನು
ಚಂದದಿಂದಲಿ ನಿಲಯನ ಕ್ರೀಡೆಯ ಸುಂದರರಾಡಿದರು
ಅಂದದಿ ಬಾಲರು ಕೆಲವರು ಚೋರರು ಎಂದು ಸೊಲ್ಲಿಸಿದರು ೧

ಬಾಲಕರನು ಮೇಷಾಯತರ ಮಾಡಿ ಸುಲೀಲೆಯ ಮಂಡಿಸಲಿ
ಖೂಳ ವ್ಯೋಮಾಸುರ ಬಂದನು ಗೂಢ ಗೋಪಾಲರ ವೇಷದಲಿ
ಬಾಲರನೆಲ್ಲರನೊಯ್ದಿಟ್ಟನು ಮಹಚ್ಛೈಲದ ದ್ರೋಣಿಯಲಿ
ತೋಳನ ತೆರನವ ಮಾಡಲು ಅಂಜುತ ನಾಲುವರುಳಿದಿರಲಿ ೨

ಬಿಲದೊಳು ಸಿಕ್ಕಿದ ಗೋಪಾಳರೆಲ್ಲರು ಬಲು ಭಯಪಟ್ಟೈದಿದರು
ನಳಿನನಯನ ಗೋವಿಂದಾಯೆನ್ನುತ ಸಲೆ ಮೊರೆ ಹೊಂದಿದರು
ಎಳೆಯರ ಆರ್ತಸ್ವರವನು ಕೇಳಿದ ಮಿತ್ರ ಸ್ತುತಿಯನರಿದ
ತಿಳಿಯದಂತೆ ಸರ್ವಾಷ್ಟಶಿರಾವಾಣಿ ಬಳಿಯಲಿ ನಿಂತಿದ್ದ ೩

ಕ್ರೂರಮಯಾತ್ಮನು ವ್ಯೋಮಾಸುರ ಬಲು ಘೋರದಿ ನಿಂತಿರಲು
ಶ್ರೀರಮಣನು ಕಂಡನು ಅವನಾಕೃತಿ ಹಾರಿ ಹಿಡಿದ ತೃಟಿಯೊಳು
ವೀರಸಿಂಹನು ತೋಳನ ಜಗ್ಗಿದ ಹಾಗ್ವ್ಯಾಜಿಸಿದನಾತಗೆ
ತೋರಿತು ಅವನಂಗವು ಪರ್ವತದೊಲು ತೋರವು ಅತಿಯಾಗೆ ೪

ಅನಂತಬಲಾತ್ಮಕ ಹಿಡಿದಂಚಲು ಅವ ನಾನಾ ಯತ್ನದಲಿ
ದಾನವರಿಗೆ ಶಕ್ತಿಸಾಲದು ಶ್ರೀಹರಿ ಅನಾಯಾಸದಲಿ
ಹೀನನ ಕೊಂದೋಡಾಡಿದ ಸುರರು ಪ್ರಸೂನ ಸುರಿದರಲ್ಲಿ
ಆನಂದದಲಿ ಗುಹಸ್ಥರ ತೆಗೆದನು ಶ್ರೀನಾರಾಯಣನು ೫

ಸುಜನರು ಸುಮುನಿನಿಕರವು ಸ್ತುತಿಸಲಿ ಭಜಕಜನಪ್ರಿಯನು
ವ್ರಜದಲಿ ಗಮಿಸಿದ ನಿತ್ಯಾನಂದನು ಸ್ವಜನಾನಂದನು
ನಿಜಸುಖದಾಯಕ ನಿರ್ಜರದಾಯಕ ಕುಜನನಿಕರಹರನು
ದ್ವಿಜಗೋರಕ್ಷಕ ದಾಮೋದರ ಕ್ಷೀರಜಲಧಿಮಂದಿರನು ೬

ಪ್ರಸನ್ನಚರಿತ ಸುಪ್ರಸನ್ನಲೋಚನ ನಿತ್ಯ ಪ್ರಸನ್ನವರಾಭಯದ
ಪ್ರಸನ್ನಗುಣಾಕರ ಪ್ರಸನ್ನಸನ್ಮಂದಿರ ಪ್ರಸನ್ನ ಸೌಂದರ್ಯಸಾರ
ಪ್ರಸನ್ನವದನಸ್ಮಿತ ಪ್ರಸನ್ನರದನ ಶ್ರೀಪ್ರಸನ್ನವೆಂಕಟಕೃಷ್ಣ
ಪ್ರಸನ್ನ ಶ್ರೀಪದ ಪ್ರಸನ್ನೀಕರಿಸಿದರಿಗೆ ಪ್ರಸನ್ನ ಜನವರಿಷ್ಠ ೭

## ೫೫

**ರಾಗ : ತೋಡಿ** **ತಾಳ : ಏಕತಾಳ**

ಹರಿಭಟರಿಗೆ ಲವ ಭಯವಿಲ್ಲ ಶ್ರೀಹರಿಸ್ಮರಣೆಗೆ ಸಮ ಧರ್ಮವಿಲ್ಲ
ಹರಿಕರುಣೆಗೆ ಪಾತ್ರ[1][ನೆ][1]ಸುಜ್ಞ ಶ್ರೀ ಹರಿಯೊಪ್ಪದವನೆ ಬಹು ಪಶುಘ್ನ ಪ.

ವ್ರಜಕೆ ತೆರಳಿದ ಕಂಸನ ಮತದಿ ಒಂದು ರಜನಿಯೊಳಿದ್ದ ಕ್ರೂರಗೃಹಹೊಂದಿ
ಸುಜನೇಶ್ವರ ಶ್ರೀಕೃಷ್ಣಪಾದ ಸಂನಿಜಧ್ಯಾನದಿ ಸ್ಮರಣೆಯಲಿದ್ದ ೧

[1] ವ

ರವಿಗರ್ಘ್ಯದ ತರ್ಪಣ ಮಾಡಿ ಶುಭ ಹವಿರ್ಗ್ರಾಹುತಿ ವಿಧಿಯಲಿ ನೀಡಿ
ಜವದಿ ರಥಕೆ ಹಯಗಳ ಹೂಡಿ ಮಾಧವ ದರುಶನಕೆ ಶಕುನ ನೋಡಿ ೨

ಪಂಥವಿಡಿದು ಅಂಬುಜಾಂಬಕನ ಗುಣಕೀರ್ತನೆಯಲಿ ಮಾಡುತ ಧ್ಯಾನ
ಎಂಥ ಸುಕೃತ ಎನಗುದಿಸಿತೊ ಭೂಕಾಂತ ಕಂಸಗೆ ಬುದ್ಧಿ ಪ್ರಕಟಿಸಿತೊ ೩

ವಿಷಯಾಸಕ್ತಿಯು ಶೂದ್ರನು ಹ್ಯಾಗೆ ಶ್ರುತಿವಿಷಯನಲ್ಲವು ಭುವಿಯಲಿ ಹಾಗೆ
ವಿಷಮ ವಿಷಯ ಬಯಸುವ ನನಗೆ ಶ್ರೀ ಬಿಸಜಾಕ್ಷ ಕೃಪೆಯಾಯಿತು ಎನಗೆ ೪

ಗೋಕುಲಕೆ ಹೋಗುವೆ ನಾನಿಂದೆ ಮನೋವ್ಯಾಕುಲವನು ಹರಿಕೃಪೆಯಿಂದೆ
ನೂಕುವ ಭಾಗ್ಯವು ಬಂತೆನಗೆ ಹರಿ ಶ್ರೀಕರಚರಣವಪ್ಪುವೆ ಬ್ಯಾಗೆ ೫

ಎನ್ನ ಜನ್ಮಕೆ ಫಲ ತೋರುತಿದೆ ನಾ ಧನ್ಯನಾಗುವೆ ದರುಶನದಿಂದೆ
ಚಿನ್ಮಯಾತ್ಮನ ಮೂರ್ತಿ ದೂರದಲಿ ಕಂಡು ಸನ್ನಮಿಸುವೆ ಘನಹರುಷದಲಿ ೬

ಕಾಲನದಿಯ ದಾಟುವೆ ಹರಿಯ ಅಂಘ್ರಿ ಮೂಲವನ್ನಾಶ್ರಯಿಸಿ ತ್ವರಿಯಾ
ಪಾಲಗಡಲೊಡೆಯನ ಕೃಪೆಯಿಂದ ಸೃತಿ ಜಾಲಬಲೆಯ ದಾಟುವೆನೆಂದ ೭

ಮುನಿಜನನುತ ಪಾದಾಂಬುಜವ ವಂದನೆಯ ಮಾಡ್ಯಪ್ಪುವೆ ಘನದೇವ
ಮನಸಿನ ಬಯಕೆ ಪೂರಿಸಿಕೊಂಬೆ ಇಂದು ಅನಿಮಿಷಪೂಜ್ಯನಾಕೃತಿ ಕಾಂಬೆ ೮

ಶ್ರೀ ಭಗವನ್ ಖಿಳವಂಘನ ಹರೆ ಇಂದೆ ಬಂದೆ ಖಳಹಂಸನಟ್ಟಿದರೆ
ಈ ಭಾಗ್ಯ ಮಂದಾಧಿಕಾರಿಗೆ ಆ ಲಾಭವು ಸುಲಭ ದೊರೆಯಿತೆನಗೆ ೯

ಪೂರ್ವೇತರರು ಅಂಬುಜಭವ ವಿಪ ಶರ್ವೇಂದ್ರಾದ್ಯರು ನಖಮಂಡಲವ
ಸರ್ವದಾ ಅರ್ಚಿಸುವರು ಬಿಡದೆ ಕೃಷ್ಣ ಸರ್ವೇಶ್ವರನ ಹೊಂದಿದೆಯಿಂದೆ ೧೦

ಗೋಗಳ ಕಾಯ್ದು ಗೋವರ ಬೆರಸಿ ಸಲೆ ಈ ಗೋಪರ ರಜಗಂಧವ ಧರಿಸಿ
ಈಗೊಪ್ಪುತಿದೆ ತಪೋರು ಹರೆ ಬಂದೀಗ ಕಾಂಬೆನು ನಿನ್ನ ಕಣ್ಣಾರೆ ೧೧

ಹೊಳೆವ ಕಪೋಲ ನಾಸ ಭ್ರೂಲತಾ ಶುಭ ಎಳೆನಗೆ ಅರುಣಾಂಬುಜ ನೇತ್ರ
ಲಲಿತ ಗುಡಾಳಕಯುತವಕ್ತ್ರ ಒಲುಚೆಲುವ ನೋಡುವವೆನ್ನಯ ನೇತ್ರ ೧೨

ಮೃಗಗಣ ಪ್ರದಕ್ಷಿಣೆಯಾಗುತಿವೆ ಮುಂದೆ ಬಗೆಬಗೆ ಶಕುನಾಗುತಿವೆ
ಜಗದೊಲ್ಲಭನ ಕಾಂಬುವೆ ಭವ್ಯ ಪದಯುಗಳಧೂಳಿಗಳಲ್ಲಿ ಲುಂಠಿಸುವೆ ೧೩

ವಂದಿಸಿ ಪುನಃ ಪುನಃ ಸ್ತುತಿಸುವೆ ನಾ ವಸುಂಧರೆಲಿ ಮಾನಿಸರೊಳ್ ತೋರುವನ
ವೃಂದಾರಕರಿಪುಕುಲಹರನ ಆನಂದ ಸ್ವೇಚ್ಛೈಕ ಲೀಲಾವತಾರನ ೧೪

ಅನಂತಲಾವಣ್ಯವಾರಿಧಿಯು ಈಗೆ ಮಾನವಪತಿ ತೋರುವ ಬಗೆಯು
ನಾ ನೋಡುವ ಪುಣ್ಯದ ಫಲವು ಇಂದೀನಂದನ ಸುತನ ದರುಶನವು ೧೫

ಕೃಷ್ಣ ಕರುಣಾವಲೋಕನವು ಶೀಘ್ರ ನಮ್ಮಾನವಮಗ್ರತರತಮವು
ಕೃಷ್ಣ ಸ್ವತಂತ್ರ ಸ್ವಮಾಯೆಯಲಿ ವಿಶ್ವ ಹುಟ್ಟಿಸಿ ಸಕಲ ತತ್ವಗಳಲ್ಲಿ ೧೬

ಪ್ರಾಣಾದ್ಯಮರರ ಸಹ ಪೊಗುವ ತಾನಾನಂತ ಜಂತು ಜಡದೊಳಿರುವ
ಅನಂತ ಪವಿತ್ರ ರೂಪದಲಿರುವ ಹರಿ ತಾನೆ ನಿಯಂತನು ಪೊರೆವ ೧೭

ಪಕ್ಷಿಮೃಗಗಳ ದಿವ್ಯೋಚ್ಚರವು ಕಮಲಾಕ್ಷನ ದರ್ಶನ ಸೂಚಿಪವು
ಈ ಕ್ಷೋಣಿ ಪವಿತ್ರ ಕರ್ಮಗುಣ ನಾಮ ಸಂರಕ್ಷಿಪ ಧರ್ಮಪೂರಣಕಾಮ ೧೮

ದೇವಾದಿ ಜೀವೌಘವು ಹರಿಯ ಜಿಹ್ವಾವದಿ ಕೀರ್ತನೆ ಮಾಡುತ ತ್ವರಿಯ
ಪಾವನವಾಗುವದನವರತ ಆ ದೇವನೆ ಸಾತ್ವ ಪ್ರಾದುರ್ಭೂತ ೧೯

ಈತನೆ ಗೋಷ್ಠದ ಹೊಂದಿಹನು ಮತ್ತೀತನೆ ಧರ್ಮಗೋಪ್ತಾರನಿಹನು
ಈತ ನಿರ್ಜರರಿಗೆ ಸುಖದಾತ ಜಗನ್ನಾಥ ಮಂಗಳ ಗುಣವಿಖ್ಯಾತ ೨೦

ಈತನ ಗುಣ ಸುರರ್ ಪಾಡುವರು ಅಜ ವಾತರುದ್ರೇಂದ್ರಾದಿಕಬುಧರು
ಈತನ ನಿತ್ಯ ಸ್ಥಾನವು ತ್ರಿಯುಗ ಮತ್ತೆ ನಾಥರಿಲ್ಲವು ಪ್ರೀತಿಯನುಭವವು ೨೧

ಮಹೋತ್ಸವ ಎನ್ನಕ್ಷಿಗೆ ಇಂದು ಮುಂದೆ ಮಹಚ್ಛ್ರೀಯಿಂದೀಪ್ಸಿತವಾಗಿಹುದು
ಮಹತ್ ಸ್ವಪ್ರಕಾಶಾಂಕಿತ ರೂಪನನೀ ಹೊತ್ತೆ ಕಾಂಬೆ ಭಗವತ್ಸ್ವರೂಪ ೨೨

ಶ್ರೀಪಾದಕಮಲಗಳಿಗೆರಗುವೆನೆ ನಮ್ಮ ಶ್ರೀಪತಿ ಕೈ ತಲೆಮೇಲಿಡುವನೆ
ಬಾ ಪ್ರಿಯನೆಂದೆನ್ನ ಮನ್ನಿಸುವನೆ ಸುತಾಪಸರ್ಗೀವಾಭಯಂಕರವೀವನೆ ೨೩

ಮಾಯಾಶ್ರಿತ ಕಾಲ ರಂಹಸಾಂತಕ ಹರಿ ಸುಯೋಗಿಜನಕಭಯದಾಯಕ
ಶ್ರೀಯಂಬೆಗಿಂಬಾಗಿಹ ತೋಳಂಗಳಿಂ ಇತ್ತೆ ಬಾಯೆಂದಪ್ಪುವನೊ
ಮನ್ನಣೆಯಿಂ ೨೪

ಸಮರ್ಹಣಾಂಬರ ಬಲಿಯ ನೀಡುವ ಮನೋರಮವಾಕ್ಯದಿಂದೆನ್ನ ತೋಷಿಸುವ
ರಮೆಯ ಸಂಸ್ಪರ್ಶಸೌರಭ್ಯಭುಜದಿಂದ ನಿತ್ಯ ಮಮ ಸ್ವಾಮಿಯಪ್ಪುವ ಪ್ರೇಮ
ಪುಂಜದಿಂ ೨೫

ಕಂಸನವನೆಂದೆನ್ನುದಾಸಿಪನೆ ಪರಮಹಂಸೇಶ್ವರ ಕೃಪೆಯ ಮಾಡುವನೆ
ತಾಂ ಸರ್ವ ಗೋಪ್ತಾಂತರ್ಬಹಿರ್ವ್ಯಾಪ್ತ ಇಂದು ಸಂಶಯವಿಲ್ಲ ಕಾಂಬೆ
ಯಥಾರ್ಥ ೨೬

ತನ್ನಂಘ್ರಿಕಮಲಕೆ ವಂದಿಸಲು ಇವ ನನ್ನವನೆಂದೊಲಿವ ಕೃಪಾಳು
ತನ್ನಸ್ಮಿತೇಕ್ಷಣದಿ ಹೊರೆವ ಸಚ್ಚಿನ್ಮಯಮೂರ್ತಿ ಮುಂದಕೆ ಕರೆವ ೨೭

ಅನಾದಿ ಧ್ವಸ್ತಕಿಲ್ಬಿಷದೇವ ತಾನಾನಂತ ಕೌಟುಂಬಿ ನನ್ನ ಕಾವ
ಅನನ್ಯ ದೈವಾತ್ಮೀಯ ಜನಕೆ ಹರಿತಾನೆ ಸರ್ವೋತ್ತಮೋತ್ತಮ ಸುಖಿಕೆ ೨೮

ಪೀನ ಭುಜಂಗಳಿಂದಪ್ಪುವನು ಮುನ್ನೇನು ಪುಣ್ಯವನು ಮಾಡಿದೆನು
ಏನಾರ್ಜಿತ ಕಾಲ ಸಂಧಿಸಿತೊ ಶ್ರೀ ಮಾನಾಥನ ರೂಪ ಮೊರೆಯಿತೊ ೨೯

ಅಂಜಲಿಪುಟದಿ ನಮಿಸುವೆನೆ ಶ್ರೀ ಕಂಜಾಕ್ಷ ಕೃತಾರ್ಥಿ ಬಾಯೆಂಬುವನೆ
ಅಂಜದ ಆಕೃತಾತ್ಮನು ದುಷ್ಟಖಿಳಭಂಜಕ ಸ್ವಜನೇಷ್ಟನು ಕೃಷ್ಣ ೩೦

ಪುಣ್ಯಾಮುರಸ್ಯೈವ ಪದ್ಮನೇತ್ರ ಇಂದೆನ್ನಪ್ಪಿದರೆ ಗಾತ್ರ ಪವಿತ್ರ
ಇನ್ನು ಸಂಸೃತಿ ಭಯವೆನಗಿಲ್ಲ ಎನ್ನ ಧನ್ಯನ ಮಾಡಿದ ಸಿರಿನಲ್ಲ ೩೧

ಬಂದೆ ಬಾ ಅಕ್ರೂರನೆನೆ ಜನ್ಮ ಹುಟ್ಟಿ ಬಂದುದಕ್ಕೆ ಸಾರ್ಥಕ ಧರ್ಮ
ಇಂದಿರೇಶೋರುಶ್ರವನ ಪಾದ ಮೊರೆ ಹೊಂದಿದ ಮೇಲೆ ಇಲ್ಲವು ಖೇದ ೩೨

ಸ್ನಿಗ್ಧಾಳಕಾಬ್ಜಾಯತ ನೇತ್ರ ವೇದವಾಗ್ದೇವಿಪ್ರಿಯಾಂಬುದಗಾತ್ರ
ಸ್ರಗ್ಗಂಧಲೇಪಿತ ನೋಡದಿಹ ಜನ್ಮ ಧಿಗ್ ಧಿಗ್ ಮಾನಿಸರೊಳವನಧಮ ೩೩

ಸುಹೃತ್ ತಮೋಪೇಕ್ಷೆ ದ್ವೇಷಗಳು ಇಲ್ಲ ಶ್ರೀಹರಿಗೆ ಕಲ್ಪತರುವಿನೊಲು
ಸುರ ನೃಪ ನರ ಯೋಗ್ಯತೆಯೊಳು ಫಲಗರೆವುದು ಹಾಗೆ ಆದರೊಲು ೩೪

ಔಷಧಿ ವನಸ್ಪತಿಗಳ ಚಂದ್ರ ನಿತ್ಯ ತೋಷಿಪಂತೆ ಯದುಕುಲಚಂದ್ರ
ತೋಷಿಪನೋ ತೋಷಿಸನೋ ಶ್ರೀಬಾಲ ಉದಾಸೀನ ಮಾಡನು ಜ್ಞಾನಕುಶಲ ೩೫

ತನ್ನಹಸ್ತದಿಂದೆನ್ನ ಕೈಪಿಡಿದು ಹರಿಮನ್ನಿಸಿ ಮನೆಹೊಗುವನೆ ಇಂದು
ಉನ್ಮತ್ತ ಕಂಸನ ಕರ್ಮವನು ಕೃಷ್ಣ ಚೆನ್ನಾಗಿ ಕೇಳ್ವನೆ ಪ್ರಶ್ನೆಯನು ೩೬

ಶ್ರೀಕಾಂತನಂಘ್ರಿಯ ರೇಣುಗಳು ಸರ್ವ ಲೋಕೇಶಮೌಳಿಗಾಭರಣಗಳು
ಈ ಕೌತುಕ ನೋಡಿ ಭೂಪತಿಗೆ ಅನೇಕಾಭರಣ ಹೆಜ್ಜೆಗಳಿಗೆ ೩೭

ಅಂಕುಶಾಯುಧಯವಧ್ವಜ ಪದ್ಮರೇಖಾಂಕಿತವಾಗಿಹ ಭುವಿ ವ್ರಜ
ಪಂಕಜಸಂಭವಭವರ ಶಿರಗಳಿಂ ಸೋಂಕಿಪುವೆಂದನಕ್ರೂರ ೩೮

ಅಹೋ ಮುಕುಂದಾಂಘ್ರಿ ಪಾಂಸುವೆಂದು ತಾ ಮಹಿಗೆ ಬಿದ್ದಾನಂದಾಶ್ರುಬಿಂದು
ಬಹುಪ್ರೇಮಸ್ಫುರಿತ ದಾನಪತಿ ಬಿದ್ದು ಹೊರಳಿದ ಭಕ್ತಿಯಲಿ ಸುಮತಿ ೩೯

ಮಹಾತ್ಮ ರಾಮಾಚ್ಯುತರ ಕಂಡ ಗೋದೋಹನ ಕಾಲದಿ ಭಕ್ತ ಶೌಂಡ
ಸುಹೇಮಾಂಬರ ನೀಲಾಂಬರದ ಸ್ಮಿತ ಸ್ನೇಹಾಪಾಂಗಾಂಬುಜಾಂಬಕರ ೪೦

ಅಸಿತ ಶ್ಯಾಮಲ ಶ್ವೇತಾಂಗದ ಯುಗ್ಮ ಸುಪೀನ ಭುಜವುಳ್ಳ ಸುಂದರರ
ವೀಕ್ಷಿತಾಮೋಘ ಚಂದ್ರೋಪಮರ ಬಾಲ [1]ದ್ವಿಪಭಾ[1] ಪೂರ್ಣಕಳಾಯುತರ ೪೧

ಸೌಗಂಧಮಾಲ್ಯೋರುರಾಜಿತರ ಸರ್ವ ಭೂಗಗನಕೆ ಸುಂದರವರರ
ಯೋಗೈಶ್ವರ್ಯ ಲೀಲಾಪರರ ಅಮೋಘೌದಾರ್ಯ ಗುಣಾಕರರ ೪೨

ವಜ್ರಾಂಕುಶಾಯುಧಧ್ವಜಚಿಹ್ನಿತ ಶುಭ ಹೆಜ್ಜೆಟ್ಟು ಭೂಪಾವನವ ಮಾಡುತ
ಸಜ್ಜೀವಿಗಳ ಪ್ರತಿಪಾಲರನು ಖಿಳದುರ್ಜೀವದೈತ್ಯರ ವಧಿಪರನು ೪೩

ದಯಾಪೂರ್ಣನೇತ್ರ ಸ್ಮಿತವದನರನು ಲೇಶ ಭಯಾತಿರಿಕ್ತರ ಜಿತಾತ್ಮರನು
ಶ್ರೀಯಾಂಚಿತ ವನಸ್ರಗ್ಧರರ ಸರ್ವ ಪ್ರಿಯತಮೋತ್ತಮ ಹರಿಬಲರ ೪೪

ಸ್ನಾತರ ಶುಚಿವಸ್ತ್ರಾಭರಣಾಂಕಿತರ ನಿತ್ಯ ಭೂತ ಪ್ರಧಾನ ಪುರುಷೋತ್ತಮರ
ಈ ತ್ರಿಜಗದ್ಧೇತುಗಳ ಪರ ಅತಿಪ್ರೀತಿಲಿ ಕಂಡನಕ್ರೂರ ಚತುರ ೪೫

ಆನಂದಬಾಷ್ಪದೊಳೀಕ್ಷಿಸಿದ ಸಹಸ್ರಾನನ ಶುಕ್ಲಕೇಶಾವೇಶ[2][ನ][2]
ಆನಕದುಂದುಭಿಯ ಜ್ಯೇಷ್ಠಸುತ ಶ್ರೀ ವೇಣುಗೋಪಾಲ ಸಾಕ್ಷಾದಚ್ಯುತ ೪೬

ನೀಲ ಶ್ವೇತ ಗಿರಿಯಂತೊಪ್ಪುತಿಹರ ಕಂಡ ಮೇಲೆ ಹಾರಿದ ತ್ಯಜಿಸುತ ತೇರ
ಶ್ರೀಲೋಲಬಲರಿಗೆ ಪ್ರಣಾಮವನು ಮಾಡಿ ಏಳಲೊಲ್ಲನು ಅಶ್ರುತುಂಬಿ
ಅವನು ೪೭

ನೀಲಾಂಗಬಲರಿಗೆ ದಂಡಪ್ರಣಾಮಮಾಡಿ ಕಾಲಮೇಲಿಟ್ಟ ತನ್ನ ಮಸ್ತಕವ ಪ್ರೇಮ
ಆಲಿಂಗಿಸಿ ಚುಂಬಿಸಿದನು ಮಮವ ತಾನೇಳಲೊಲ್ಲನು ಪ್ರೇಮ ತುಂಬಿದವ ೪೮

[1] ದ್ವೀಪೇಭ [2] ದ

ಪುಲಕ್ಕೆ ವಿಳಸಾರನು ಪುಟಿಪ ತನ್ನ ನಾಲಿಗೆಳೆದು ಗದ್ಗದಾಗಿರುವ
ಹೇಳುತಾನಂದಬಾಷ್ಪವು ತುಂಬಿ ಕಣ್ಣಾಲಿಗಳೊರತೆಯಿಟ್ಟವು ಉಬ್ಬಿ ೪೯

ನಾ ನನ್ನದೆಂಬೆಚ್ಚರ ಮರೆವ ನೈಜಾನಂದವನು ಮನದಲಿ ಕರೆದ
ಜ್ಞಾನಾಂಗರುಹ ಉಬ್ಬಿದವಾಗ ತಾನೇನುತ್ತರ ಕೊಡದ್ಹೋದಾಗ ೫೦

ಅಕ್ರೂರನ ಭಕ್ತಿಗೊಪ್ಪಿದನು ಶ್ರೀ ಚಕ್ರಧರಕರನಪ್ಪಿದನು
ಆಕ್ರಂದಿಸಿದೆ ಅಕ್ರೂರ ಬಾಹೊಂದ ಸ್ಮರ ಶಕ್ರೇಶಾರ್ಚಿತ ಶ್ರೀಪಾದ ೫೧

ಕೈಯಿಂದ ಕೈಹಿಡಿದು ಪುಕ್ಕೊಂಡ ತನ್ನ ಗೇಹಕಗ್ರಜನ ಕೂಡಿ ಬಂದ
ಪ್ರಿಯೋಕ್ತಿ ಪೀಯೂಷವನುಣಿಸಿದ ಬಾ ನೀಯೆನ್ನ ತಾತನ ಸರಿಯೆಂದ ೫೨

ಆಸನವಿತ್ತನು ಸ್ವಾಗತವ ಕೇಳಿ ವಾಸುದೇವ ಸರ್ವಜ್ಞದೇವ
ಪೋಸಲಜಲದೊಳಂಘ್ರಿಯ ತೊಳೆವ ಆರ್ಯ ಸಂಕರುಷಣ ಸಹಾರ್ಚಿಸಿದ ೫೩

ಬಹುಗುಣೋಪೇತಾನ್ನವ ರಚಿಸಿ ಅತಿಮಹಿಮ ಪ್ರಿಯೋಕ್ತಿಯಿಂದಲಿ ಉಣಿಸಿ
ಬಹುಕೃತಾರ್ಥನಾವನಕ್ರೂರನು ಶ್ರೀ ಅಹಿಶಯನನ್ನ ಹೊಗಳಿದನು ೫೪

ಸೃಗ್ಗಂಧ ಮಾಲ್ಯಾಂಬರಾಸ್ಯವಾಸದ ದಿವ್ಯ ನಾಗವಲ್ಲಿದಳವ ಸೇವಿಸಿದ
ಶ್ರೀ ಗೋವಿಂದ ಸೋಂಕಿದ ಪವಿತ್ರಗಾತ್ರ ಭಾಗವತೋತ್ತಮ ಅಕ್ರೂರ
ಪಾತ್ರ ೫೫

ಸಕಲ ಭೋಗವ ಸತ್ಯಮತಗಳ ಹರೆ ಶ್ರೀ ಕೃಷ್ಣಾರ್ಪಣವೆಂದನಾ ಕುಶಲ
ಶುಕಮುನಿ ಪೇಳಿದ ನೃಪತಿಗೆ ಈ ಶ್ರೀ ಕೃಷ್ಣನ ಕಥಾಮೃತವ ಅವಗೆ ೫೬

ಭಕುತಿಲಿ ಹೇಳಿ ಕೇಳಿದರಿಗ ಭುಕ್ತಿ ಮುಕುತಿ ಕೊಡುವ ಹರಿ ಬ್ಯಾಗೆ
ಭಕುತವತ್ಸಲ ಪ್ರಸನ್ವೆಂಕಟಪತಿ ಭಕುತಿಯುಳ್ಳವನೆ ಧನ್ಯನು ನಿತ್ಯ ೫೭

## ೫೬

**ರಾಗ : ವಸಂತ** **ತಾಳ : ಝಂಪೆ**

ಶ್ರೀಯರಮಣ ಶ್ರೀ ಕೃಷ್ಣ ಪ್ರಿಯನಾದ ದಾನಪತಿ
ಜಯವು ಹರಿದಾಸರಿಗೆ ಭಯ ದ್ವೇಷಿಗಳಿಗೆ ಪ.

ಜಗದ ಆದ್ಯಂತವೆಲ್ಲ ಬಲ್ಲ ಲಕ್ಷ್ಮೀಕಾಂತ
ಮಗುಳೆ ಕೇಳಿದನು ಭೋಜಪನ ವೃತ್ತಾಂತ
ವಿಗಡ ಕೃತ್ಯವ ಹೇಳ್ವನಕ್ರೂರ ವಿಸ್ತೃತ
ಮುಗುಳುನಗೆಯಲಿ ಕೇಳ್ದ ಜಗದೇಕ ಶಾಸ್ತ ೧

ಸುಖದಿ ಮಲಗಿದ ದಾಂತಮುಂದವಲಿ ಅಕ್ರೂರ
ಸಕಲ ಲಕ್ಷ್ಯವ ಮರೆಯ ಪಾದಾಶ್ರಿತರಿಗೆ
ಭಕುತಿ ಭಾಗ್ಯವು ಒಂದು ದೇವರಿನ್ನೊಂದರ್ಥ
ಮುಕುತಿಗಧಿಕೆಂಬ ಪರಿಭಕುತನಿಕುರುಂಬ ೨

ವೈರಾನುಬಂಧ ಯದುವಂಶದಲ್ಲಿದ್ದವನ
ಶೌರಿಯನು ಕೊಲ್ಲುವ ವಿಚಾರದಲ್ಲಿದ್ದವನ
ನಾರದನ ಮುಖದಿ ತನ್ನ ಜನ್ಮವನು ಕೇಳ್ದವನ
ಶೌರ್ಯೋಕ್ತಿಗಳನು ಕೇಳ್ವನು ಸುಪ್ರಸನ್ನ ೩

ರಾಜಾಜ್ಞೆ ಹೇಳಿದನು ನಂದನಿಗೆ ಅಕ್ರೂರ
ಗೋಜೀವನಾಥ ಘೃತಪಾಲುದಧಿ ಭಾಂಡಗಳ
ರಾಜಿಸುವ ಶಕಟಗಳ ತುಂಬಿ ಹೇರಿಸಿದನು
ರಾಜೀವಸಖನುದಯಕೆ ಗೋಪರಿಂದ ೪

ನಾವೀಗುಪಾಯನವನೊಯ್ದು ಭೋಜೇಶ್ವರಗೆ
ಈವ ಮಥುರೆಯಲಿ ಉತ್ಸವವನೀಕ್ಷಿಸುವ
ಆವಾವ ದೇಶದಿಂ ಪ್ರೇಕ್ಷಕರು ಬಂದಿಹರು
ನಾವು ಭೋಜಪನಾಪ್ತಬಂಧುಗಳು ಎಂದ ೫

ಏವಂವಿಧ ಘೋಷಿಸಲು ಗೋಕುಲದಿ ಶೀಘ್ರದಲಿ
ಗೋಪಿಯರು ವ್ಯಥಿಸಿದರು ಚಿತ್ತವ್ಯಗ್ರದಲಿ
ಗೋವಿಂದರಾಮರನು ಮಥುರೆಗೊಯ್ಯುವನೆಂದು
ದಾವ ಅಕ್ರೂರ ಗೋಷ್ಠಕೆ ಬಂದನೆಂದು ೬

ಎದೆಗೆ ವ್ಯಥೆ ತಾಗಿ ಮುಖಕಾಂತಿ ಆ ಕ್ಷಣ ಹೋಗಿ
ಸದನ ದುಕೂಲವ ನೀಗಿ ಸಾಗಿ ದುಶ್ಚಿತರಾಗಿ
ಬದಿಯ ಜನರನು ಕಾಣದೆ ಬಿಚ್ಚಿದ ತುರುಬು ನೋಡದೆ
ಸುದತೇರಖಿಳರೆಲ್ಲ ಸೊಲ್ಮರೆದರೆಲ್ಲ ೭

ವಿಷಯ ವಿಷಯಕೆಯ ಬಿಟ್ಟು ಕೃಷ್ಣಧ್ಯಾನವು ನೆಟ್ಟು
ಬಿಸಜನಯನನ ಆಸ್ಯ ಸ್ನೇಹಸ್ಮಿತಹಾಸ್ಯ
ಶಶಿಮುಖಿಯರ್ ನೆನೆನೆನೆದು ನೇತ್ರಬಾಷ್ಪವ ತಂದು
ಅಸಮ ವಿರಹಾಗ್ನಿಯಲಿ ಬೆಂದು ಭ್ರಾಂತರಂದು ೮

ಹರಿಯ ನರ್ಮೋಕ್ತಿ ಸೌಂದರ್ಯ ಸಖ್ಯವು ಪ್ರೀತಿ
ವರೋದ್ದಾಮ ಚರಿತೆಯನು ಸಲೆ ಸ್ಮರಿಸಿ ಸ್ಮರಿಸಿ
ಸರಸಾಕ್ಷಿಯರೊಳಶ್ರುಗರೆದು ಮೃಗಶಾವಾಕ್ಷೇರ್
ಮರೆದು ತನುಮನ್ನ ಶೋಚಿಸಿ ಅಂದು ನೊಂದು ೯

ಎಲೆ ವಿಧಿಯೆ ಇದು ಸಲ್ಲ ನಿನ್ನಲ್ಲಿ ಕರುಣೆಲ್ಲ
ಗೆಳೆಯ ಹರಿ ಸಂಯೋಗ ಮಾಡಿಸಿ ವಿಯೋಗ
ಇಳೆಯೊಳೆಯರ ತೆರದಿ ಚೇಷ್ಟಿಸುವೆ ನೀನಿಂತೆ
ಸಲೆ ನಿನಗೆ ಉಚಿತೆ ನಮ್ಮ ಶೋಕ ನಿನಗೊಳಿತೆ ೧೦

ಕುರುಳು ಕುಟಿಲಾವೃತದ ವಕ್ತ್ರ ಅಂಬುಜನೇತ್ರ
ತರುಣಿಯರ ಹೃತ್ತಾಪ ಪರಿಹರಿಪ ಶ್ರೀಪಾ
ಪುರುಷೋತ್ತಮನು ಹೋಗೆ ಪ್ರಾಣ ನೀಗುವೆವೀಗ
ಸರಸಿರುಹಭವ ನಿನಗೆ ಪುಣ್ಯಾಗ್ರಗಣ್ಯ ೧೧

ಆಕಟ ಕ್ರೂರಹೃದಯ ನಿನಗಕ್ರೂರಾಭಿಧವೇಕೆ
ಸುಖದಿ ನಮ್ಮಯ ಕಣ್ಗೆ ಗೋಚರನ ನಂದಜನ
ಅಕರುಣಿಯೆ ನೀನೊಯ್ವೆ ಪ್ರಾಣನಾಥನ ಸೇಪೆ
ನಿಖಿಳ ಸಖಿಯರಿಗೆಲ್ಲ ದುರ್ಲಭಾಯ್ತಲ್ಲ ೧೨

ಸ್ವಜನ ಸದನವನು ಗಂಡರು ಮಕ್ಕಳಾರ್ಯರನು
ತ್ಯಜಿಸಿ ಮಧುಹರನ ದಾಸಿಯರಾಗಿ ಇಹೆವು
ವ್ರಜವನಣುಗನ ಆಸ್ಯ ಲೇಶ ಸೌಂದರ್ಯಹಾಸ
ರಜನಿಯಲಿ ಸಖಿಯರಿಗೆ ತುಷ್ಟಿಯಹುದಾಗೆ ೧೩

ಹರಿಯ ಸುಹೃದ್ವೃಂಗ ಕ್ಷಣಮಾತ್ರ ತಾಳದಿಹ
ತರುಣಿಯರು ಬಳಲುತಿರೆ ತೋರುವ ಮುರಾರಿ
ಪರಮಕರುಣಾಪಾಂಗ ನೋಟದಮೃತರಂಗ
ಹರುಷಸುಧೆಯೊಳಗದ್ದಿ ಹೊರೆವನು ದಯಾಬ್ಧಿ ೧೪

ನಡೆಯಿರಃಯರಿರ ನಿವಾರಿಸುವ ಅಚ್ಯುತನ
ಸಡಿಯೇನು ಜನದಂಜಿಕೇಕೆ ವೃದ್ಧರದು
ಕಡಲೊಡೆಯನಡಿಗಳಲಿ ದೃಢಭಕ್ತಿಯೆರಕವಿರೆ
ಬಿಡನು ವೇಣುಗೋಪಾಲ ಮಡದಿಯರನೆಲ್ಲ ೨೨

ನಿಮಿಷ ಕೃಷ್ಣಾಚ್ಯುತನ ವಿಯೋಗ ಸ್ಮರವೇಗ
ರಮಣಿಯರಸನನುಗ್ರಹವು ಕುಂದಾಯಿತೆಮಗೆ
ತಮೋರ್ಪ್ಯ ಅಸ್ತಗಿರಿಗೆ ಸಾಗೆ ಗೋಪಾಲ
ಚಮುಗೂಡಿ ಗೋಧೂಳಿಲಿಪ್ತಕುಂತಳನು ೨೩

ಕಮನೀಯವಕ್ತ್ರ ಧೇನುಗಳ ಮಧ್ಯದಿ ತೋರ್ಪ
ಕಮಲಲೋಚನ ವೇಣುವನ್ನು ನಾದಿಸುವ
ರಮಣೀಯಪಾಂಗದಿಂ ರುಚಿರಸ್ಮಿತಹಾಸದಿಂ
ರಮಣಿಯರ ಮನೋರಥವ ಪೂರೈಪ ಯದುಪ ೨೪

ಚಿತ್ತಜನಯ್ಯನ ಮುಗುಳುನಗೆ ಸುಕಟಾಕ್ಷ
ನೇತ್ರಾಮೃತವನುಣದೆ ಇಹುದಾವ ಪಕ್ಷ
ಪಿತ್ತಪರ ಮರೆದೆವಾತನ ಸ್ನೇಹದಿಂಬಿನಲಿ
ನಿತ್ಯಕ್ಷಣಗಳ ನಾವು ಕಳೆವ ಬಗೆ ಹೇಗೆ ೨೫

ಹೀಗೆಂದು ಗೋಪಿಯರು ವಿರಹದಲಿ ಕಾತರರು
ಯೋಗೇಶ್ವರೀಶ್ವರಂಘ್ರಿಕಮಲಮಧುಪರು
ನೀಗಿದರು ಲಜ್ಜೆಯನು ಮೌನಿನಿಕರದವೋಲು
ಶ್ರೀಗೋಪತಿ ಭುವನನಾಥನ ಸತಿಯರು ೨೬

ರೋದಿಸಿದರ್ ದೀನಸ್ವರರಸದಲರ್ದಿತರಾಗಿ
ಮಾಧುರಿಗೆ ಪ್ರಿಯತಮನು ಪೋಗಲಾಗಿ
ಶ್ರೀಧಾಮ ದಾಮಸಖ ಕೃಷ್ಣ ಗೋಪತಿಯೆಂದು
ಈದೇಹ ಪ್ರಾಣೇಂದ್ರಿಯವು ನಿನ್ನದೆಂದು ೨೭

ಕೆಲದೆಯರಿಗೆ ದುಃಖರಾತ್ರಿ ಹೋಯಿತು ಆನಕ
ನಳಿನಸಖನುದಯ ಕ್ರಿಯೆಯಕ್ರೂರ ಮುಗಿಸಿ
ಆಲಸದೆ ರಥಕೆ ತೇಜಿಯ ಹೂಡೆ ನಂದ ಬಂಡಿ
ಗಳಿಗೆ ಅನಡುಹ(ದ್ವ?)ಗಳನು ಹೂಡಿ ಹೊರಿಸಿ ೨೮

ಅರಸಗೆ ಉಪಾಯನವ ಕೊಡುವ ಗವ್ಯಾಮೃತವ
ತರಿಸಿ ಕೊಡಗಳನು ತುಂಬಿಸಿದ ಶಕಟಗಳ
ಹರುಷ ಮಿಗಿಲಾಗಿ ಗೋಪಕರು ಹೇರಿದರು ಸಲೆ
ಜರಿದು ದುಃಖಿತರಾದರಬಲೇರಮಿತ್ರರು ೨೯

ಮುಖದ ಕಳೆಗುಂದ್ಯೈದಿ ಬಂದು ನಿಂತರು ಪ್ರಾಣ
ಸಖ ನಮ್ಮ ಕರೆದೊಯ್ವನೆಂಬಾಸೆಯಿಡಿದು
ಸಖಿಯರತಿ ರೋದಿಸಲು ಸಂತೈಸಿದನು ಪಾರ್ಷ್ಣ
ದುಃಖಿಸದಿರಿ ಶೀಘ್ರ ಬಹೆನೆಂದನು ಮುಕುಂದ ೩೦

ರಥಧ್ವಜವು ಕಣ್ಗೆ ತೋರ್ಪನಕಬಲೆಯರು ಮತ್ತೆ
ರಥರಜವು ಕಾಂಬನಕ ಹೋಗಿ ಹಿಂದಿರುಗಿ
ರತಿಪತಿಯಪಿತನಾಶೆ ನೈರಾಶ್ಯ ನಮಗೆಂದು
ಅತಿಕ್ಲೇಶದಲಿ ಅಂದು ಬಂದರ್ ಮನೆಸೊಂದು ೩೧

ರಥಚರಣಧರನ ಲಾವಣ್ಯರೂಪ ಧ್ಯಾನ
ಮತಿಗೆ ನಿಲುಕಿಸುತ ಕಣ್ಣೀರ ಮಳೆಗರೆವುತ
ವ್ಯಥಿತ ಹೃದಯರು ತಿರುಗಿ ಬಂದರು ವ್ರಜಕ್ಕಾಗಿ
ಸತತ ಪ್ರಿಯನ ಚೇಷ್ಟೆ ಸಲೆ ಸುಗುಣ ಗೋಪಿ ೩೨

ಅತಿ ಮಂಜುಳ ಸ್ವರದಿ ಪಾಡುವರು ನೋಡುವರು
ಸತಿಯರು ತಮ್ಮ ಹೃದಯಕಮಲದಲ್ಲಿಟ್ಟು
ಇತರ ವಿಷಯ ಮರೆದು ಜರಿದು ಅಹಂಭಾವ
ಅತಿಕ್ರಮಿಸಿ ಮುಕುತರ ಸ್ವಭಾವದಬಲೆಯರು ೩೩

ಒಪ್ಪಿದರು ಜೀವನ್ಮುಕ್ತ ಹರಿಭಕ್ತರು
ಇಪ್ಪರಲ್ಲನವರತ ಹರಿಯಗುಣ ಚಿಂತನೆಯ
ತಪ್ಪರರೆಗಳಿಗೆ ಭಗವಜ್ಜನರು ಸಜ್ಜನರು
ಶ್ರೀಪ್ರಿಯನ ಪ್ರಿಯರು ನೆನೆವರಘಹರರು ೩೪

ರಥವ ದೂವಾಳಿಸಿದ ವಾಯುವೇಗದ್ಯಕ್ರೂರ
ಮತಿವಂತ ಹರಿಬಲರ ಸಹ ಯಮುನೆಗೈದಿ
ರಥ ನಿಲಿಸಿ ತರುಮೂಲದಿಳಿದರಚ್ಯುತ ಬಲರು
ಅತುಳ ನಿರ್ಮಲಜಲ ಸೇವಿಸಿ ಕುಳಿತರು ೩೫

ರಥದಿ ಉಭಯತರಿರಲು ಸ್ನಾನಕ್ಕೈದಿದ ವೇಗ
ಅತಿ ಅಘಮರ್ಷಣ ಮಾಡಲದ್ಭುತವ
ಸತತ ನೋಡುವ ಬ್ರಹ್ಮ ಸನಾತನಧ್ಯಾಸದಲಿ
ಮತಿಗೆ ಹರಿ ಜಲಿ ತೋರ್ದನಾಶ್ಚರ್ಯದಲಿ ೩೬

ಹೊರಗೆ ರಥದಲ್ಲಿದ್ದರಂತು ತೋರಿದರಿಲ್ಲಿ
ಪರಮ ಕೌತುಕವೆಂದು ಮೇಲೆ ನೋಡಿದನು
ಹರಿಬಲರ್ಯಥಾಸ್ಥಿತಿಯ ಕಂಡು ಸಲೆ ಮುಳುಗೆ ಅಥ
ಮರಷಣದಿ ತೋರಿದರು ಪರಮ ಪಾವನರು ೩೭

ಸುರೋರಗರು ಸಿದ್ಧಚಾರಣರು ಕೈ ಮುಗಿದು ತಮ್ಮ
ಶಿರವ ಬಾಗಿಸಿ ಬಹಳ ಸ್ತೋತ್ರ ಮಾಳ್ಪದನು
ಶಿರಸಫಣಸಹಸ್ರ ಶ್ವೇತಶೃಂಗಾಭಮಣಿ
ಕಿರೀಟ ಕುಂಡಲ ಕರ್ಣ ನೀಲಾಂಬರನ್ನ ೩೮

ಶರೀರದಾಸನದಲ್ಲಿ ಕುಳಿತಿರ್ದ ಶ್ಯಾಮಲನ
ವರಪೀತಾಂಬರ ಚತುರ್ಭುಜ ಅಬ್ಜಾಂಬಕನ
ಚಿರರುಚಿರ ನಗೆಮೊಗನ ಪ್ರಸನ್ನಾವಲೋಕನನ
ಅರುಣಾಧರ ಸುಕಪೋಲ ಸತ್ಕರ್ಣಯುಗನ ೩೯

ವರಭ್ರೂವಿಲಾಸನ್ನ ಕಂಬುಕಂಠಾನ್ವಿತನ
ಶಿರಿ ತ್ರಿವಳಿನಾಭಿಯ ಗಭೀರ ಬೃಹದ್ಭುಜನ
ಭರಿತಭುವನೋದರ ವಿಸ್ತರವಕ್ಷ ಸುನಿತಂಬ
ಕರಭೋರು ದ್ವಯಜಾನುಜಂಘಾನ್ವಿತನ ೪೦

ಅರುಣನಖಾಂಗುಲಿ ದೀಪ್ತ ಚರಣವಾರಿಜಯುಗಳ
ಸರಸಿಜಾಂಕುಶವಜ್ರಧ್ವಜಯವಾಂಕಿತದ
ಪರಮಪದತಳನ ಪಾವನಕರ ಜಗತ್ರಯನ
ಸುರಮೌನಿ ಹೃದಯಪೀಠದಲಿ ರಾಜಿಪನ ೪೧

ಕಿರೀಟ ಕುಂಡಲ ಕಟಕ ವರಕೇಯೂರಾಮೋಘ ಪದಕ
ಚಿರರತ್ನಕಟಿಸೂತ್ರ ಕೌಸ್ತುಭ ಬ್ರಹ್ಮಸೂತ್ರ
ಸಿರಿವತ್ಸ ವೈಜಯಂತಿಹಾರ ನೂಪುರ ಮಾಲಾ
ಧರನ ಅರಿಶಂಖಗದಾಂಬುಜಕರ ಸ್ವಸುಂದರನ ೪೨

ಅಜಭವಾದಿಸುರಪ ಪ್ರಾಚಿಪ ಪವಾಬ್ಧ ಬಿಭು
ವಿಜಯ ನಂದಸುನಂದ ಪಾರ್ಷದಾನ್ವಿತನ
ದ್ವಿಜ ಮುನಿಸುರಾದ್ಯ ಪ್ರಹ್ಲಾದ ನಾರದವಾದಿ
ಸುಜನಮೋಹರ ಸೇವ್ಯನಹನ ಗುಣಾರ್ಣವನ ೪೩

ಸ್ವಯಶೋವಚನ ಕೀರ್ತನೆ ಮಾಡುವನ ವನ್ನಿಸುವ
ಶ್ರೀಯು ಪುಷ್ಟಿ ಶಾಂತಿ ಮೊದಲಾದ ಶಕ್ತಿಯನು
ಭಯ ಭಕ್ತಿಯಿಂದಿಹರು ಅವನ್ನ ಭಾವುಕರು
ಶ್ರೀಯುಪತಿಯ ಮಹಿಮೆಯನು ಕಂಡನಕ್ರೂರ ೪೪

ಅಪರಿಮಿತ ಮಹಿಮೆಯನು ನೋಡಿ ವಿಸ್ಮಿತನಾದ
ಸುಪ್ರೇಮಲೋಚನದಿ ಬಾಷ್ಪವನು ತಂದ
ತಾ ಪರವಶದಿ ಅಂಗರುಹಪುಳಕಿತನಾಗಿ
ಶ್ರೀಪರಬ್ರಹ್ಮನ ಮಹತ್ವವನು ತಿಳಿದ ೪೫

ಅತ್ಯಂತ ಭಕ್ತಿಯಲಿ ಗದ್ಗದೋಚ್ಚಾರವಲಿ
ವ್ಯಕ್ತವಾಗದು ಸ್ತೋತ್ರ ಮಾಡುವೆನೆನ್ನಲು
ಚಿತ್ತದ್ರವದಲಿ ನಮಿಸಿ ಧೈರ್ಯವನು ಮಾಡಿ ಹರಿ
ಸ್ತೋತ್ರ ಮಾಡಿದ ಅಂಜಲಿಪುಟದಿ ನಿಂದು ೪೬

ದಿನದಿನದ ಸ್ನಾನದಲಿ ಅಹಿಪತಿಯ ಕಾಂಬನು
ದಿನದಿನದಿ ಅನಂತಆಸನನ ಕಂಡಾ
ಘನಹರುಷದಲಿ ಸ್ತೋತ್ರ ಮಾಡಲನುವಾದ ಚಿದ್
ಗುಣವಾರ್ಧಿ ಆಶ್ರಿತರ ಸುರಭೂರುಹನ್ನ ೪೭

ಪರದೇವತೆಯು ಕೊಲ್ಲಿಸುವೆನೆಂದು ಕರೆಸಿದನು
ಪರಮಪಾಪಾತ್ಮ ಭೋಜಪ ಸಚಿವನಟ್ಟಿ
ಪರಮ ಭಾಗವತರಿಗಾಧರ್ಮವೇ ಧರ್ಮವಹುದು
ವರ ದಾನಪತಿಗೊಲಿದು ಹರಿತೋರ್ದನು ತನ್ನ ೪೮

ಪ್ರಸನ್ನವೆಂಕಟಪತಿಯ ಪಾದಾಶ್ರಿತಾಕ್ರೂರ
ವಿಷಮ ಪ್ರತಿಕಂಸನ ಆಜ್ಞೆಯಲಿ ವ್ರಜಕೆ
ಬಿಸಜನಾಭನ ದರುಶನಕೆ ಬಂದು ಕಂಡ ಗಡ
ಅಸಮಮಹಿಮೆಯನು ಭಾಗವತ ಶಿರೋರತ್ನ ೪೯

## ೫೭

ರಾಗ : ಸುರಟಿ | ತಾಳ : ಝಂಪೆ

ಪಿರಿದುಸುಖ ಪೊಗಳೆ ಹರಿಯ ಮಹಿಮೆ ನರ
ಹರಿಯ ದಾಸರಿಗೆ ಹರಿಯ ಒಲುಮೆ
ಪರಮಭಾಗವತನಕ್ರೂರ ಆಘ
ಮರಷಣದಿ ಸ್ತುತಿಮಾಳ್ಪ ವಿವರ ಪ.

ಕಂಡನಾಶ್ಚರ್ಯ[1]ವ[1] ನೀರಿನಲಿ ಭಕ್ತ
ಶೌಂಡ ಕರವೆರಡಂಜಲಿಯಲಿ
ಮಂಡೆಯನು ಬಾಗಿ ಭಕ್ತಿಯಲಿ ಶ್ರೀ
ಪುಂಡರೀಕಾಕ್ಷನದಿರಿನಲಿ ೧

ಹೇಯಂಬುಜಾಕ್ಷ ನಮೋ ನಮಸ್ತೇ ನಮೊ
ಈ ಎರಡೇಳುಭುವನ ಪ್ರಭೊ ತೆ
ಶ್ರೀಯಾದಿ ಲಕ್ಷ್ಮೀನಾರಾಯಣ ತವನಾ
ಭಿಯ ಪದ್ಮದಲಿ ಪೆತ್ತ್ಯಜನ ೨

ನೀನೀಗ ಬೊಮ್ಮನೊಳು ಪೊಗುವೆ ನಾ
ನಾನಂತ ಜಗವ ಪುಟ್ಟಿಸುವೆ
ಅನಾದಿ ಜೀವರ ಕರ್ಮವನು ನೋಡಿ
ನೀನೆ ಗುಣತ್ರಯದಿ ಬಂಧಿಸುವೆ ೩

ಸರ್ವೇಂದ್ರಿಯಾರ್ಥದಧಿಕಾರ ಕೊಟ್ಟೆ
ಓರ್ವಮುಖ್ಯ ಪ್ರಾಣನಿಗೆ
ಸರ್ವ ಸುರರ ತನ್ನಿಚ್ಛೆಯಲಿ ಇಟ್ಟೆ
ಸರ್ವೇಶ್ವರ ನಿನ್ನ ಆಜ್ಞೆಯಲಿ ೪

ನೀ ನಿಯಾಮಕ ಲಕುಮಿಯು ನಲ್ಲ ನಿನ್ನಾ
ಜ್ಞಾನುಸಾರ ಪ್ರವರ್ತಕರು ಎಲ್ಲ
ಏನೇನು ಸ್ವಾತಂತ್ರ್ಯ ಸುರರ್ಗಿಲ್ಲ ಜ್ಞಾ
ನಾನಂದ ಸ್ವೇಚ್ಛೈಕಲೀಲ ೫

---

1 ಘ

ನೀನೆಲ್ಲರ ಹೃದ್ಗುಹದಲ್ಲಿರುವೆ ನಿನ್ನ
ಕಾಣದೆಲ್ಲರು ಜಗದ್ಗುರುವೆ
ನೀ ನಿನ್ನ ಮಾಯದಿ ಮೋಹಿಸುವೆ ಹರಿ
ನೀನೆ ಅಜ್ಞಾನ ಕವಿಸುವೆ ೬

ಶುದ್ಧಾತ್ಮಯೋಗಿಗಳ್ ಯೋಗದಲಿ ಅನಿ
ರುದ್ಧ ಕಾಂಬರು ಪ್ರಸಾದದಲಿ
ಅಧ್ಯಾತ್ಮ ಭೂತ ದೈವದಲಿ ಕೆಲರು
ವಿದ್ಯೋನ್ನತಿ ವಿವಿಧ ಯಜ್ಞದಲಿ ೭

ಇದ್ದು ನಿನ್ನನು ಪೂಜಿಸುವರು ನಿಜ
ಗಾದ್ಯಂತ ಕರ್ಮವನರ್ಪಿಪರು
ಶುದ್ಧ ಜ್ಞಾನಿಗಳು ಜ್ಞಾನದಲಿ ಯಜ್ಞ
ಪದ್ಧತಿ ವಿಧಿಯಲರ್ಚಿಪರು ೮

ನೀನೇಕರೂಪ ಬಹುರೂಪ ತಿಳಿದು
ನಾನಾಪ್ರಕಾರದಿ ಭಜಿಪ
ಜ್ಞಾನಿಗಳು ಭೇದಾಭೇದದಲಿ ಅರ್ಚಿಪರು
ನಾನಾಚಾರ ಮಾರ್ಗದಲಿ ೯

ವಾಚಾದಿ ಕರ್ಣಗಳಿಂದ ವೇದ
ವಾಚ್ಯನು ಪರಾತ್ಪರ ಮುಕುಂದ
ಯೋಚನೆಗೆ ನಿಲುಕದಾನಂದ ಎಂದು
ಸೂಚಿಪವು ಉಪನಿಷದ್ವೃಂದ ೧೦

ಹರಿ ನಿನ್ನ ಪೆಸರ ಸುರರ್ಗಿಟ್ಟೆ ಸರ್ವ
ಸುರರ ಯೋಗ್ಯತೆ ಪದವಿ ಕೊಟ್ಟೆ
ಗಿರಿಜ ನದಿಗಳಂಬುಧಿ ಬೆರೆವ ಪರಿ
ಸುರಋಷಿ ಪಿತೃಗಳ್ ತರ್ಪಣವ ೧೧

ನಿನಗೋಸುಗ ಜ್ಞಾನಿಗಳರ್ಚಿಪರು ನಿನ್ನ
ವಿನಾ ಅರ್ಚನೆ ಅವಿಧಿಯೆಂಬುವರು
ಅನಿಮಿಷರು ನಿನ್ನ ಸೇವಕರು ತಮ್ಮ
ಘನತೆಯೊಲ್ಲರು ಭಯಾನ್ವಿತರು ೧೨

ಸತ್ವ ರಜಸ್ತಮ ಮೂರು ಗುಣವು ಜಗವ
ವಿಸ್ತರಿಸಿ ಒತ್ತ್ಯಾಳುತಿಹವು
ಎತ್ತೆತ್ತಲೋಕತ್ರ್ಯಾತಾಗಿ ಆ ಬ್ರ
ಹ್ಮಸ್ತಂಬ ಪರಿಯಂತವಾಗಿ ೧೩

ನೀ ನಿಯಂತಾರ ಜಗಕೆಲ್ಲ ಇಲ್ಲ
ದೇನು ಕಾರಣ ವಿಶ್ವಕೆಲ್ಲ
ನೀನಂತರ್ಬಾಹ್ಯ ಸ್ವತಂತ್ರ ಆ
ಧೀನವು ನಿನ್ನದೇ ತಂತ್ರ ೧೪

ನೀನಗ್ನಿ ಮುಖದಿಂದ ಪಡೆದೆ ನೀ ಪೃಥ್ವಿ
ಯನು ಅಂಘ್ರಿಯಿಂದ ಪಡೆದೆ
ನೀನಿನನ ನೇತ್ರದಿಂ ಪೆತ್ತೆ ನಾಭಿ
ಯಿಂದ ಅಂತರಿಕ್ಷ ಹೊತ್ತೆ ೧೫

ರಕ್ಷಿಸಿದೆ ದಿವಿ ತಲೆಯಿಟ್ಟು ಸಹ
ಸ್ರಾಕ್ಷಾದ್ಯರ ತೋಳಿಂಬಿಲಿಟ್ಟು
ದಿ(ಕ್ಕು?)ಗಳ ಶ್ರೋತ್ರದಿ ಸೃಜಿಸಿದೆ ನಿನ್ನ
ಕುಕ್ಷಿಯೊಳಬ್ಧಿಗಳ ತಾಳ್ದೆ ೧೬

ಹೇ ಮಾರುತನ ಪ್ರಾಣದಿಂದ ಅಂಗ
ರೋಮಗಳಲಿ ವೃಕ್ಷವೃಂದ
ನೀಮುತ್ತಮಾಂಗರುಹಗಳಲಿ ಘನ
ಸ್ತೋಮವನು ಪಡೆದೆ ಕರುಣದಲಿ ೧೭

ನಖಪಂಕ್ತಿಯಿಂದದ್ರಿಗಳನು ಪಕ್ಷ್ಮ
ನಿಕರದಿಂದಹಸ್ಸು ರಾತ್ರಿಗಳನು
ಪ್ರಕಟಿಸಿ ದಕ್ಷಾದ್ಯರ ಶಿಶ್ನದಲಿ ವೃಷ್ಣಿ
ವ್ಯಕುತ ಮಾಡಿದೆ ವೀರ್ಯದಲಿ ೧೮

ಮರ್ತ್ಯ ಜನಕಾಪ್ಯಾಯನವೆಂದು ಏವಂ
ರೀತ್ಯಾ ಸೃಜಿಸಿದಾಪ್ತ ಬಂಧೋ
ನಿತ್ಯಾವ್ಯಯಾತ್ಮ ಪುರುಷೋತ್ಮ ಜೀವ
ರುತ್ಪತ್ತಿ ಪಾಲನ ಪರಾತ್ಮ ೧೯

ಜಲಜಂತುಗಳ ಲಯಪ್ರ ಜಲಧಿ ಅತ್ರಿ
ಫಲಿಪ್ಪುಳಕೆ ಲಯವದೇ ಫಲದಿ
ನಳಿನಾಕ್ಷ ನಿನ್ನಲಿ ಪುಟ್ಟಿ ಪು
ತ್ರಳಿದು ಪೋಪುದು ಸರ್ವಸೃಷ್ಟಿ ೩೦

ಅನಂತ ಬೊಮ್ಮರನು ಪಡೆವ ಪು
ತ್ರ್ಯನಂತಾಜಾಂಡವ ಪುಟ್ಟಿಸುವೆ
ನೀನೆ ಪಾಲಿಪೆ ಸಂಹರಿಸುವೆ ನಿನ
ಗಾನಂದವಾಟವಿದು ಪ್ರಭುವೆ ೩೧

ಅನಂತ ಜಡಚೇತನಕ್ಕೆಲ್ಲ ಮುಖ್ಯ
ನೀನಲ್ಲದನ್ಯಾಶ್ರಯವಿಲ್ಲ
ನೀನೇಕ ಅನಂತರೂಪ ದೇ
ವಾನೀಕಕೆ ದೂರನು ಸವಿತಾಪ ೩೨

ನಿನ್ನಜನಕರಿಗಿತ್ತೆ ಮುಕ್ತಿ ಸಲೆ
ನಿನ್ನ ದ್ವೇಷಿಗಳಿಗೆ ತಮವಿತ್ತೆ
ನಿನ್ನಮೋಘ ಗುಣಕೀರ್ತನ ಸುರರು ಹೊಗಳಿ
ಧನ್ಯರಹರು ಮಹಾತ್ಮರು ೩೩

ಲಯಜಲಧಿಗಾಮೋಘ ಮೀನ ಶ್ರೀ
ಹಯವದನ ಮಧುಕೈಟಭಮಥನ
ಪಯೋನಿಧಿ ಮಂಥಕಕೂಪಾರ ಸುರನಿ
ಚಯಸುಖದ ಮಂದರೋದ್ಧಾರ ೩೪

ಸುಯಜ್ಞ ಭವ್ಯ ಪರಮಾತ್ಮ ಹೇಮಾ
ನಯನಹರ ಧೃತಭೂತಳಾತ್ಮ
ಭಯದೂರ ನರಮೃಗಸ್ವರೂಪ ಲೋಕ
ತ್ರಯ ಕೀರ್ತಿತ ಸುಪ್ರತಾಪ ೩೫

ವ್ಯಾಪ್ತ ಲೋಕದ್ವಯ ಸಚ್ಚರಣ ಬಲಿ
ಗೋಪ್ತಯಾಚಿತಸದ್ವಿತರಣ
ದೀಪ್ತಕರ ಪರಶು ಧನುರ್ಧಾರ ಮದ
ದೃಪ್ತನೃಪಕುಲಕುಜಕುಠಾರ ೩೬

ದಶರಥಾತ್ಮಜ ಸೀತಾರಮಣ ಪವಿತ್ರ
ದಶಶಿರಾರ್ದನ ಹನುಮದಂಸಗಮನ
ಪ್ರಸೀದ ನಮೋ ನಮೋ ವಾಸುದೇವ ಸಂಕ
ರುಷಣ ಶ್ರೀ ಪ್ರದ್ಯುಮ್ನ ದೇವ ೨೭

ಪ್ರಸೀದ ನಮೋ ನಮೋ ಅನಿರುದ್ಧ ಸು
ಪ್ರಸೀದ ಸಾತ್ವತ ಕುಲಸುವೃದ್ಧ
ಪ್ರಸೀದ ಶಶಿವಂಶ ಸುಪವಿತ್ರ ಸು
ಪ್ರಸೀದ ಸಚ್ಚಿದಾನಂದ ಗಾತ್ರ ೨೮

ನಮೊ ನಮೊ ಸತ್ಸುಬುದ್ಧಿ ಬುದ್ಧ
ನಮೊ ನಮೊ ದನುಜಮೋಹನ ಪ್ರಸಿದ್ಧ
ನಮೊ ನಮೊ ದುಷ್ಟಕುಲದಹನ ಪ್ರಸ
ನ್ನಮೊ ನಮೊ ಗಹನಾತ್ಮಗಹನ ೨೯

ಸೃಜೇಚ್ಛೆಲಾಳ್ವ ಸುರವೃಂದ ನಾ
ನಾ ಜೀವರ ತವ ನಾಮದಿಂದ
ತಾ ಜೀವಿಸಿ ಮೋಹಿಸಿ ವರ್ತಿಪ್ಪದು ಮಹಾ
ಸೋಜಿಗದ ಲೀಲೆ ದೀನಬಂಧು ೩೦

ಸತಿಸುತರು ಗೃಹ ಸ್ವಜನ ಕ್ಷೇತ್ರ ಅರ್ಥ
ದತಿಭ್ರಾಂತಿ ಬಿಡದಿಹೆ ಅಸ್ವತಂತ್ರ
ಮತಿಹೀನನಾಗಿ ಸ್ವಪ್ನಸಮ ಈ
ಸ್ಮೃತಿಯೆಂದು ತಿಳಿಯೆ ನಾನಘಮ ೩೧

ನೀನಿತ್ತ ಸುಖದುಃಖವಿನ್ನು ತಿಳಿಯದೆ
ನಾನು ಕಾರಣನೆಂಬುವೆನು
ನಾನಾಗಿ ಸುತ್ತಿ ಬಪೆ ಭವವ ಹರಿ
ನೀನೇವೆ ಮಾಡನುಗ್ರಹವ ೩೨

ದುಃಖಾನ್ವಯವನು ಸುಖಕಂಡೆ ಭ್ರಾಂತಿ
ಲೆಕ್ಕದೋರದು ಮರೆಹುಗೊಂಡೆ
ಮೂರ್ಖ ವಿಪರೀತಮತಿ ಬೆರೆವೆ ತವ
ಸಖ್ಯವನು ಮರೆವೆ ಜಗದ್ಗುರುವೆ ೩೩

ನಿನ್ನಾಶ್ರಯದಿ ಬದುಕಿರುವೆ ನಾ
ನನ್ಯರಾರಾಧನೆಯ ಮಾಡುವೆ
ಸನ್ನೀರ ಜರಿದು ಬಿಸಿಲುದೊರೆಗೆ ಓಡಿ
ಬನ್ನ ಬಡುವೆ ಭವಾಟವಿಯೊಳಗೆ ೩೪

ಕಾಮ್ಯಕರ್ಮದಲಿ ಉತ್ಸಾಹವು ನಿತ್ಯ
ಧರ್ಮದಲಿ ನನಗಿನ್ನು ಮರೆವು
ಗ್ರಾಮ್ಯ ಸುಖದನುಭವಗಳಿಂದ ನಿತ್ಯ
ನಿನ್ನಂಘ್ರಿಯನು ಮರೆದೆ ಮುಕುಂದ ೩೫

ಕೃಪಣ ಬುದ್ಧಿಯಲಿ ನಾ ಕೆಟ್ಟೆ ಧನ
ವಿಷಿನಾಟಕೆಗೆ ಒಡಂಬಟ್ಟೆ
ಕಪಟ ಗೃಹಕ್ಷೇತ್ರ ಹೊಂದಿದೆನು ನಿತ್ಯ
ತೃಪ್ತ ತಪಸ್ಸಿಕೆ ದೂರಹೆನು ೩೬

ಇಂದ್ರಿಯಗಳಿಗೆ ಸಹಾಯವಾಗಿ ಮನ
ನಿಂದಿರದು ತವ ಚರಣಕೆರಗಿ
ಮಂದಗಬಡಿಸುವ ದುರ್ವಿಷಯ ದೂ
ರಂದದಿ ಕಡೆಹಾಯಿಸು ಜೀಯ ೩೭

ನನ್ನ ಪ್ರಯತ್ನದಿ ನಿನ್ನ ಕಾಣೆ ಹರಿಯೆ
ನಿನ್ನಾನುಗ್ರಹವಾದರಿನ್ನೆ
ಧನ್ಯ ನಾನಹೆನು ಸುಪ್ರಸನ್ನ ಹರಿ
ಸನ್ನುತ ಸುಜನರ ಜೀವನ್ನ ೩೮

ಮಹಾನುಭಾವರ್ಗೆ ಶ್ರೀಚರಣ ಸಾಧ್ಯ
ವಹುದು ದುರ್ಲಭವು ಕರುಣಾರ್ಣ
ಈ ಹೊತ್ತು ಅನುಗ್ರಹ ಪ್ರಸಾದವಾಗಿ
ಬಾಹ್ಯಾಂತರ ಕಂಡೆನು ಮುಕುಂದ ೩೯

ಆರೊಡೆಯರಿಲ್ಲ ನಿನ್ನ ಬಿಟ್ಟು ಪಾ
ದಾರವಿಂದ ಪತ್ರದ್ವನ್ನಿಟ್ಟು
ತಾರಿಸು ಭವಾಬ್ಧಿಯನು ಕೃಷ್ಣ ನಿನ್ನ
ಸಾರಿದೆನು ವೃಷ್ಣಿಜವರಿಷ್ಟ ೪೦

ನಮೊ ನಮೊ ಅನಂತ ಶಕ್ತೆ ನಮೊ
ನಮೊ ವಿಜ್ಞಾನಂದಗಾತ್ರ
ನಮೊ ಪ್ರಧಾನ ಪುಂಸೇಶ ಪ್ರೀಶ ನಮೊ
ನಮೊ ವಾಸುದೇವ ಪರೇಶ ೪೧

ನಮೊ ನಮೊ ಭೂಭಾರಹರಣ ನಮೊ
ನಮೊ ಪ್ರಸನ್ನ ಜನರಿಗಾಭರಣ
ನಮೊ ನಮೊ ಪ್ರಮತ್ತ ಖಳಮಥನ
ನಮೊ ನಮೊ ಪೂರ್ಣಾನಂತ ಗುಣಕಥನ ೪೨

ಅಘಮರ್ಷಣದಲಿ ಅಕ್ರೂರ ಕಂಡ
ನಿಗಮನುತಾನಂತನ ಧೀರ
ಜಗದೇಕ ಪ್ರಸನ್ನವೆಂಕಟಪನ ಲೀಲೆ
ಸೊಗಸಾಗಿ ಪೇಳುವದೇ ಪುಣ್ಯ ೪೩

## ೫೮

ರಾಗ : ಕಲ್ಯಾಣಿ ತಾಳ : ಏಕ

ಶ್ರೀಕೃಷ್ಣಪಾದ ಸರೋರುಹ ಹೊಂದಿದ
ಏಕಾಂತಜನ ವಿಷಯಗಳ
ಬೇಕೆನರು ಭಕ್ತಿ ಸಾಕೆನರು ಜ್ಞಾ
ನಾಕರರ್ಭವವಿರಹಿತರು ಪ.

ದಾನೇಶ್ವರಸಿಗೆ ನೀರಿನೊಳಗೆ ಭಗವಾನ್ನಿಜದರುಶನವಿತ್ತು
ಮಾನದಲ್ಯವನ ಸ್ತುತಿಯ ಕೇಳ್ಯೊಲಿದಂತರ್ಧಾನವನೈದಿದ ಕರ್ತು ೧

ತೀರದಿ ಕುಳಿತು ನಿತ್ಯ ಸತ್ಕ್ರಿಯೆ ಮುಗಿಸಿದ ಶ್ರೀಹೃಷಿಕೇಶ ಕೃಷ್ಣಪ್ರಿಯ
ನೀರನುಳಿದು ನಡೆತಂದನು ತನ್ನಯ ತೇರಿನೆಡೆಗೆ ಗಾಂದಿನೇಯ ೨

ನಾರಾಯಣರಿಬ್ಬರಿಗೆ ನಮಸ್ಕಾರ ಮಾಡಿದ ಸಾಷ್ಟಾಂಗ
ಭೂರಿ ಪ್ರೇಮದಿ ನಯನದಿ ಸುಖಬಾಷ್ಪದ ವಾರಿಯ ರೋಮಪುಳಕಾಂಗ ೩

ಕರವೆರಡು ಮುಗಿದು ನಿಂತಿರೆ ಕೇಳಿದನೊಂದುಪರಿದೋರುವುದು ನಿನ್ನವದನ
ಅರಿದೇನ ನೀ ಕಂಡೆ ಅದ್ಭುತವನ್ನು ನೀರಿನೊಳಗ ಪೇಳ್ದದನ ೪

ಧರೆಯಲಿ ಕಂಡಂತಾಶ್ಚರ್ಯಪಡುವ ವಿಸ್ತರಿಸನೆ ನುಡಿದನಾ ಸಚಿವ
ಹರಿ ನಿನ್ನ ಮಹಿಮೆಯಗಾಧವು ವಿಶ್ವಾಂತರಿಯು ನಮೊ ನಮೊ ದೇವಾ ೫

ಸ್ವಾಮಿ ಕೃಪಾನಿಧೆ ಅಘಮರ್ಷಣಾದಿ ಮಹಾಮಹಿಮೆಯ ತೋರಿಸಿದೆ
ಭೂಮಿಲಿ ಕಂಡಂತೆ ಜ್ಞಾನಾನಂದಮಯ ಶ್ರೀಮೂರ್ತಿಯ ಪ್ರಕಟಿಸಿದೆ ೬

ಶ್ರೀಮಾಯಾಪತಿ ಅಜಭವಸುರಮುನಿಸ್ತೋಮಸನ್ನುತ ವಿಶ್ವಾತ್ಮ
ನಾ ಮನುಜನು ಕಣ್ಣಿನದರೆ ಕಂಡೆನು ಭಕ್ತಕಾಮಧೇನುವೆ ಅಂತರಾತ್ಮ ೭

ಹೀಗೆಂದು ನಡೆಸಿದ ರಥವನು ಮಧುರೆಗೆ ವೇಗಾಚ್ಯುತ ಹಲಿಯೊಡನೆ
ಆ ಗುಣನಿಧಿ ವಸುದೇವನ ತನಯನ ಆಗಮನವನು ಕಂಡೊಡನೆ ೮

ಆಗತರು ಗ್ರಾಮಗ್ರಾಮದವರು ಬಂದು ಬಾಗಿ ತಲೆಯ ಸ್ತೋತ್ರಮಾಡಿ
ಸಾಗಿದನಗರಕೆ ಉಪವನದಲಿ ನಿಲ್ಲಲಾಗಿ ಜನರ ಪರಾಣ್ಮು ನೋಡಿ ೯

ನಂದಾದ್ಯರ ನಿಲಿಸಿದನು ಮುಕುಂದನು ಗಾಂದಿನೀಯನ ಕೈಯಪಿಡಿದ
ಮಂದಹಾಸದಿ ನುಡಿದನು ಘನಪ್ರೇಮದಿ ಇಂದಿರೆಯರಸ ಗೋವಿಂದ ೧೦

ಮುಂದೆ ನೀ ಮನೆಗೈದು ರಥಸಹ ಪಟ್ಟಣದ ಚೆಂದವ ನೋಡುತ್ತ ಬಹೆವು
ಎಂದ ಮಾತಿಗೆ ನುಡಿದನು ಅಕ್ರೂರನು ತಂದೆ ಅಧೋಕ್ಷಜಾ ನೀವು ೧೧

ಇಂದೆನ್ನ ಬಿಡದಿರಿ ನಿಮ್ಮ ಪದಾಬ್ಜವ ಹೊಂದಿದೆ ಎನ್ನ ಜೀವನ್ನ
ಮುಂದೆ ನಾ ನಗರಕೆ ಮನೆಗೈದಿ ಮಾಡುವ ದಂದುಗವೇನು ಪ್ರಸನ್ನ ೧೨

ಬಂದು ನಮ್ಮಾಲಯ ಪವಿತ್ರಮಾಡು ಗೋಪವೃಂದದೊಡನೆ ಭಕ್ತಬಂಧೋ
ವೃಂದಾರಕ ನಿಮಿಷ ಪಿತೃ ನೃಪಕುಲಕಂಘ್ರಿದ್ವಂದ್ವ ದುರ್ಲಭ ಗುಣಸಿಂಧೋ ೧೩

ನಿನ್ನಂಘ್ರಿರಜ ಗೃಹಮೇಧಿಗಳ್ಗೆ ದುರ್ಲಭ ನಿನ್ನಂಘ್ರಿ ಶೌರಿ ಪಿತೃ ಸುರರ
ಧನ್ಯರ ಮಾಳ್ಪುದು ಬಲಿಯವನಿಯು ಎಲ್ಲ ನಿನ್ನಂಘ್ರಿ ಶ್ಲಾಘಿಸಿತು ಧೀರ ೧೪

ನಿನ್ನಂಘ್ರಿ ಸೋಂಕಿದ ಬಲಿಗುನ್ನತ ಭಾಗ್ಯ ನಿನ್ನಂಘ್ರಿಯಂಗುಷ್ಠಜಲ
ಪನ್ನಗಭೂಷಣ ಧರಿಸಿದ ಮೂಜಗವನ್ನು ಪಾವನ್ನ ಮಾಳ್ಪವಳ ೧೫

ಶ್ರೀ ದೇವದೇವ ಜಗತ್ಪತೆ ಪುಣ್ಯಕೀರ್ತೆ ಯಾದವಕುಲಮೌಳಿರತ್ನ
ಆದಿ ನಾರಾಯಣ ಲಕ್ಷ್ಮೀರಮಣ ನಿನ್ನ ಪಾದಾಂಭೋರುಹದಾಶ್ರಿತನ್ನ ೧೬

ಆದರಿಸದಿರಲನಾಥ ನನಗೆ ದಾರು ಆಧಾರವಿಲ್ಲ ದಯಾಬ್ಧೀ
ನಾ ಧನ್ಯನಹೆನು ಬಾ ಮನೆಗೆನ್ನುತ ಪಾದಕೊಂದಿಸೆ ಸ್ತುತಿಯಿಂದ ೧೭

ಗಾಂದಿನೀಯನ ಸ್ತೋತ್ರವ ಕೇಳಿ ಯದುಪತಿ ಮಂದಹಾಸದಿ ಸುರಮೌಳಿ
ಎಂದನು ತ್ವದ್ಗೃಹದಲಿ ಪೂಜೆಯಕೊಂಬೆ ಕೊಂದು ಕಂಸನ ನಾಳಿನಲಿ ೧೮

ಬಂದು ನಿಮ್ಮಲುಂಬೆ ಯಾದವಾನ್ವಯದ್ರೋಹಿಯೆಂದ್ಯಮಪುರಕಟ್ಟುವೆನು
ಇಂದುವಂಶದ ಸುಹೃದ್ಬಂಧುನಿಕರಕಾನಂದಾಮೃತವನುಣಿಸುವೆನು ೧೯

ದಿವಿಜ ಭೂದಿವಿಜರ ಕಂಟಕ ತೆಗೆವೆನು ಭುವಿಯ ಭಾರವ ಕಳೆಯುವೆನು
ಸವೆಯದ ಸುಖದಲಿ ಸಜ್ಜನರಿರಲೆಂದು ಭುವನ ಆಧಾರ ನುಡಿದನು ೨೦

ಪ್ರವಚನ ಕೇಳಿ ಶ್ವಫಲ್ಕಿಯು ಕಿಂಚಿತ್ತು ಅವಿಮನೋಪಮ ತೆರಳಿದನು
ತವಕದಿ ನಮಿಸಿ ಪುರವ ಪೊಕ್ಕು ಕಂಸಗೆ ವಿವರಿಸಿ ಸ್ವಗೃಹಕೈದಿದನು ೨೧

ಒಂದಾಗಿ ರಾಮ ಮುಕುಂದರು ನಗರಕೆ ಬಂದರು ಗೋಪಮೇಳದಲಿ
ನಂದಗೋಪನ ಮಕ್ಕಳು ಕೃಷ್ಣರಾಮರು ಬಂದಿಹ ವಾರ್ತೆ ಪುರದಲಿ ೨೨

ಸಂದಣಿಸಿತು ಚತುರ್ವೀಥಿಲಿ ಜನಪದ ಕಂದುಗೊರಳನ ಧನುರ್ಯಾಗ
ಹೊಂದಿರಲರ್ಥಿಯ ನೋಡುತಲಿದ್ದರು ಮಂದರಧರ ಬಲರಾಗ ೨೩

ಈ ಭಾಗವತ ದಶಮಸ್ಕಂಧದ ಕಥೆ ಶೋಭಿತ ಪ್ರಾಕೃತ ಪದವ
ಶ್ರೀ ಭಗವಜ್ಜನ ಪೊಗಳಲು ಇಹಪರ ಭೋಗ ಬಯಕೆ ಕೃಷ್ಣನೀವ ೨೪

ತ್ರೈಭುವನೇಶ್ವರ ಪ್ರಸನ್ನವೆಂಕಟ ಪದ್ಮನಾಭನ ಜ್ಞಾನವೈರಾಗ್ಯ
ಲಾಭವು ಭಕುತಿಯ ಭಾಗ್ಯವು ಬರುವುದು ಶೋಭನ ಆಯುರಾರೋಗ್ಯ ೨೫

## ೫೯

ರಾಗ : ಸಾರಂಗ ತಾಳ : ಏಕ

ಬಿಲ್ಲಹಬ್ಬವ ನೋಡುತೈದಲು ರಾಮಕೃಷ್ಣರುಲ್ಲಾಸದಿ ಮಧುರೆಯೊಳು ಪ.

ಗೊಲ್ಲಗೆಳೆಯರ ಮೇಳದಲ್ಲಿ ಚೆಲ್ವ ಅಪರಾಹ್ನದಲ್ಲಿ
ಎಲ್ಲ ಜನರು ಸಂದಣಿಸೆ ಮೆಲ್ಲನೆ ನಿವಾರಿಸೆ ಅ. ಪ.

ಸ್ಫಾಟಿಕ ಸದ್ಗೋಪುರಾವಳಿ ದೇಹಳಿನಾಟ ಅರುಷ್ಕಟ ತಾಮ್ರದಲಿ
ಪಾಟಿಸಿ ಗಭೀರ ಪರಿಖಿ ಕೋಟೆ ಕೊತ್ತಳಂಗಳಿಂದ
ನೋಟಕರ್ಗೆ ಆಶ್ಚರ್ಯ ವಿಟಪ ಉಪವನಗಳ ೧

ಪಾಡುವ ದ್ವಿಜಾಳಿರವಗಳು ಅಲ್ಲಿಗಲ್ಲಿ ಹಾಟಕ ತೋರಣ ಸಾಲುಗಳು
ಸೀಪಾದ ಹರ್ಮ್ಯಗಳು ಶೃಂಗಾಟಕ ಭವನ ಭಿತ್ತಿ
ಕೋಟಿ ಕೃತ್ರಿಮ ವಿಹಂಗ ನಾಟ್ಯಗಳಿಂದೊಪ್ಪುವ ೨

ಪೃಥ್ವಿಯಲಿಪ್ಪ ವಜ್ರ ವೈಢೂರ್ಯ ನೀಲರತ್ನ ನಿಮಿತಾರುಣ ವಿದ್ರುಮಾವಳಿಯು
ಸುರುಚಿ ಶುಕಪಿಕೌಘ ಶುಭರವ ಶ್ರವಣಗಳ್ಗೆ
ವಿಭವ ಸೌಖ್ಯ ಬೀರುತಿಪ್ಪ ಸಭೆಗಳಿಂದ ರಾಜಿಪ ೩

ನಲಿವ ಮರಾಳಕುಲವು ಅವಿರಳ ಸುಚಿತ್ರ ಪತಾಕಾಕೇತುಗಳು
ಛತ್ರ ಮೆರೆವ ಸಿಂಗರಿ ಒತ್ತಿಡಿದ ವೀಥಿ ಗಂಧ
ಸಿಕ್ತ ಆಪಣಂಗಳಲಿ ಮೊತ್ತಕುಸುಮರಾಶಿಯು ೪

ಅಂಕುರ ಪಾತ್ರಿಗಳು ದಧಿ ಜಲ ಕಲಶ ಪೂರ್ಣಾಂಕ ಕುಂಭ ತೆಂಗು ತಂಡುಲ
ರಲಂಕರಿಪ ಮಧುಪವಾಹನಾಲಂಕೃತದ ರಂಭಾಸ್ತಂಭಾ
ದ್ಯಂಕಿತ ಚಿತ್ರಾದಿಗಳ ಶಂಖ ನೀರ ಪಾತ್ರೆಗಳು ೫

ಆಮೋದಮಯದಾಗರು ಧೂಪವು ಗಂಧ ಕುಸುಮ ದಾಮ ಅಪರಿಮಿತ ದೀಪವು
ದೇವ ಮಣಿಮಂದಿರ ಸೋಪಾನದ ಸಿಂಗರದ ದ್ವಾರ
ಸುಮನೋಹರವಾಗಿರೆ ರಾಮಾಚ್ಯುತರು ತೋಷದಿ ೬

ವಸುದೇವ ಕುಮಾರರಿಬ್ಬರು ಬಂದರೆಂದು ಶಶಿಮುಖಿಯರ್ಕೇಳಿ ಮನೆಯೊಳು
ಅಶನವ ಬಿಟ್ಟು ಕೃಷ್ಣನೆಸೆವ ಸೌಂದರ್ಯಕ್ಕೆ ಮೆಚ್ಚಿ
ಮಿಸುನಿ ಪ್ರಾಸಾದಾಗ್ರದಿ ಸಂತಸದಿ ನೋಡುತಿದ್ದರು ೭

ಗೃಹಾಪತ್ಯ ಬಿಟ್ಟು ಬಂದರು ಭೂಷಣಗಳ ದೇಹಕೆ ಹೊಂದದೆ ಬಂದರು
ಬಾಹುಬಂದಿಯೊಂದೆವಲಯ ಕುಹೇಮಕುಂಡಲವೊಂದೆ
ಆ ಹೆಂಗಳು ಧರಿಸಿ ಕೃಷ್ಣ ಸ್ನೇಹಕೊದಗಿ ಬಂದರು ೮

ಒಂದೆ ಕಣ್ಗೆ ಕಜ್ಜಲಿಟ್ಟರು ಹಾರ ಪದಕ ಬಂಧಿಸಿ ಮಧ್ಯಕ್ಕೆ ಬಂದರು
ಹೊಂದಾವಿಗಕಂಕ್ಷಿಗಿಟ್ಟು ಒಂದೆ ಶ್ರುತಿಗೆ ಮೂಗುತಿಟ್ಟು
ಇಂದುಮುಖಿಯರೆರೆಕೊಳುತ ನಿಂದು ನಗುತ ಬಂದರು ೯

ಶಿಶುಗಳ್ಗವಿಮ್ರಯನೀಯದೆ ತೊಟ್ಟಿಲೊಳು ರೋದಿಸುವ ಮಕ್ಕಳನು ತೂಗದೆ
ಬಿಸಜನೇತ್ರನ ಚಿತ್ತವಪಹಾರಿಸಲು ಓಡಿಬಂದರು
ಕುಸುಮಶರನಟ್ಟುಳಿಯ ಸೈರಿಸದೆ ಸಾರಂಗಾಕ್ಷಿರು ೧೦

ಭ್ರಮಿಸಿ ಕಾಮಿನಿಯರ ತಂಡವನು ವಾಸುದೇವ ಕಮನೀಯರೂಪ ತೋರ್ದನು
ರಮಣಿಯರು ಹರ್ಮ್ಯಾಗ್ರದಲ್ಲಿ ರಮೆಯರಸನ ಕೃತಿಗೆ ಮೆಚ್ಚಿ
ಸುಮನಸಾನನ ನಟ್ಟು ಮೌನಿ ಜಪದೊಲು ಮೈ ಮರೆದರು ೧೧

ಹಸಿತವದನಾಪಾಂಗದಿಂದಲಿ ನೋಡಿದನು ಶಶಿಮುಖೀರ ಮದನನಯ್ಯನು
ಕುಸುಮಬಾಣನಂಬುಗಳು ಆಸಿಯರೆದೆಗೆ ನಾಂಟುತಿರಲು
ವಸುನಗೆಯ ಸುಧೆಯನೂಡಿ ಅಸಮಸುಖವನಿತ್ತನು ೧೨

ವರ್ಷಕನ ವರ್ಷನಿಲ್ಲಿಸಿ ಹರ್ಮ್ಯಾಗ್ರದೊಳಿಪ್ಪ ನಾರಿಯರ ಮನ್ನಿಸಿ
ಒಪ್ಪಿದ ದ್ವಿಪೇಂದ್ರನಂತೆ ಸರ್ವತಲ್ಪ ಸಂಕರ್ಷಣರು
ಸರ್ವವೇಣಿಯರ್ಗಾನಂದಾನಲ್ಪವಾರ್ಧಿಲಿಟ್ಟರು ೧೩

ಕುಸುಮನೇತ್ರೆಯರ್ಹರಿಬಲರ ಮೇಲೆ ಮಳೆಗರೆದರು ಕುಸುಮ
ಲಾಜಾಕ್ಷತೆಗಳಿಂದಲೆ
ವಸುಧೆಸುರರು ಗಂಧಾಕ್ಷತೆ ವಸನ ಸ್ರಗ್ಗಂಧೋಪಾಯನದಿ
ಅಸುರಹರನ ಪೂಜಿಸಿದರು ಅಸಮ ಭಕ್ತಿಯಿಂದಲಿ ೧೪

ಸುಂದರಿಗೋಪಿಯರ್ಮರ್ಗನ್ನ ಮಾಡಿದ ತಪದ ಫಲವು ಪದುಮನಾಭನ
ವದನಾಮೃತವನು
ಉದಯಾಸ್ತದಲಿ ಸೇವಿಪರೆಂದ್ವದಿಪವಕ್ಕಾ ರಾಮಕೃಷ್ಣರ
ಇದಿರಿಗೆ ಬಂದಹಂಕಾರ ಮದಸೊಕ್ಕಿದ ರಜಕನು ೧೫

ಮಧುರೆಯರಸು ತೊಡುವ ಅಂಬರವ ಹೇರಿಕೊಂಡು ಬದಿಗೆ ಬಂದಿರೆ ಬೇಡಿದ
ಕೃಷ್ಣ
ಹೊದಿಕೆ ತಾರೈ ಉತ್ತಮೋತ್ತಮ ಮೃದುಂತರದವನ್ನಲವನು
ವದಿಸಿದನು ಗದಿಗ್ರಜನಿಗೆ ಮದವೇರಿದ ಮೂಢನು ೧೬

ಬಣಗುಭೃತ್ಯರಿಗೆ ನೃಪತಿಯು ಉಡುವ ವಸ್ತ್ರ ಕನಸಿನೊಳಗರೆ ಸಲ್ಲವೆ
ವನಚರರು ಸೊಕ್ಕಿದಿರಿ ಅಣುಬಾಲಿಶರ್ಮರಣ ಬಯಸಿ
ನೆನೆದಿರೀ ಮಾತನ್ನು ರಾಜನನುಗರ್ನಿಮ್ಮ ಕೊಲ್ಲುವರು ೧೭

ದೃಪ್ತನುಡಿಯನಾಡಬೇಡಿರೋ ಜವಾಕಿ ಹೋಗಿ ಗೋಪ್ತರಿಲ್ಲ ನಿಮಗೆ ಎಂದನು
ಸಪ್ತದ್ವೀಪ ಭುವನೇಶ್ವರನು ಮತ್ತವನ ತಲೆಯುಳುಹಿದನು
ಹಸ್ತದಿಂದ ಕ್ಷಿಪ್ರದ್ಯವನ ಭೃತ್ಯರೋಡಿ ಪೋದರು ೧೮

ಅವನಿಪನ ವಸ್ತ್ರವಸ್ತ್ರನೂ ಗ್ರಹಿತರು ಸುಜನಾಬೆನುಟ್ಟು ತೊಟ್ಟರು
ಸವೆಯುವಷ್ಟು ಸೂರೆಬಿಟ್ಟು ಗೋಪರಿಗೆಲ್ಲ ಕೊಟ್ಟರು
ಅವನಿಗ್ರಾಹಿ ಬಿಟ್ಟು ನಗುತ ಭುವನೇಶ್ವರರು ನಡೆದರು ೧೯

ಮುಂದೆ ಬರಲು ವೇಷಕಾರನು ವಾಯಕನೊಬ್ಬ ಬಂದು ಅಂಘ್ರಿದ್ವಯಕೆರಗಿದನು
ಇಂದಿರೇಶ ರಾಮರಿಗೆ ಸುಂದರಾಂಬರವ ತೊಡಿಸೆ
ಕಂದರ್ಪ ಕೋಟಿಲಾವಣ್ಯರು ಹೊಂದಿದರು ಚಿತ್ರವ ೨೦

ಅವರಂಗದ ಸೇವೆ ಮಾಡಿದ ವಾಯಕನು ಸಮೆಯದಿ ಸಾನಂದ ಗಳಿಸಿದ
ಇವರ ಪ್ರಭೆಯು ತುಂಬಿತಲ್ಲಿ ಬಾಲ ಬಾಲೇಭದಂತಿದ್ದರು
ನವನೀಲ ಶ್ವೇತಾದ್ರಿಯಂತೆ ಅವನಿಯಲ್ಲಿ ತೋರ್ದರು ೨೧

ಮುಂದೆ ದಾಮಕರ್ತ ಸುದಾಮ ರಾಮಕೃಷ್ಣರಿಗ್ವಂದಿಸಿದ ಸಾಷ್ಟಾಂಗಪ್ರಣಾಮ
ಒಂದೆ ನಿಷ್ಠೆಯಿಂದ ಸ್ತೋತ್ರಸಂಪದಿಂದ ಮಾಳ್ಪನೆ
ಸನ್ಮಂದಿರದಿ ಪೂಜೆಗೊಂಡು ಸುಂದರರು ಒಪ್ಪಿದರು ೨೨

ಇಂದೆನ್ನ ಜನ್ಮವೆ ಸಫಲವು ಶ್ರೀನಾಥ ನೀವು ಬಂದಿರಿ ನೂರೊಂದು ಕುಲವು
ಹೊಂದಿದರು ಮುಕ್ತಿನಗರ ಸಂದೇಹವಿಲ್ಲವು ಪಾಂಸು
ಹೊಂದಲಾಗಿ ಗೃಹಪವಿತ್ರ ಮದಾಂಧಕರ್ಗಿಲ್ಲವು ೨೩

ನೀವಿಬ್ಬರು ವಿಶ್ವಕಾರಣರು ಪ್ರಭುಗಳು ಜಗತ್ಪಾವನರು ಅವತಾರಿಕರು
ದೇವದ್ವಿಜಗೋವು ರಕ್ಷಿಸುವ ಧರ್ಮದೀಕ್ಷೆಯಿಂದ
ದೇವಾರಿಗಳನ್ನು ಸವರಿ ಭೂಮಿಭಾರ ಕಳೆದಿರಿ ೨೪

ನಿಮ್ಮಿಂದೆ ಧರ್ಮಕೆ ಕ್ಷೇಮವು ಸರ್ವರಿಗೆ ಕರ್ಮಾನುಸಾರದ ಫಲವು
ನಿಮಗೆ ಶತ್ರು ಮಿತ್ರರು ಸಮಾನರು ಭುವನ ಜೀವರ್
ತಮ ತಮ್ಮ ಯೋಗ್ಯತೆಯಂತೆ ಕರ್ಮವ ಮಾಡ್ಯುಂಬರು ೨೫

ನಿಮ್ಮ ಭೃತ್ಯ ಭೃತ್ಯ ಭೃತ್ಯರ ಪರಿಚಾರಕ ನಾ ಸನ್ಮಾರ್ಗದಿ ಸಿಕ್ಕಿಸೆನ್ನನು
ನಿಮ್ಮ ವೈಷ್ಣವಜನರ ಶುದ್ಧೋತ್ತಮರ ಸೇವೆಯಲ್ಲಿಟ್ಟು
ದುರ್ಮತಿಯ ಬಿಡಿಸಯ್ಯ ಶ್ರೀ ರಮ್ಮೆಯೊಳ ರಮಣನೆ ೨೬

ಪಾಹಿ ಪಾಹಿ ಪ್ರಸನ್ನೇಶ್ವರ ಮುಕ್ತಾಮುಕ್ತ ದೇಹಿಗಳಿಗೆ ನೀ ನಿಯಂತಾರ
ಪಾಹಿ ಪಾಹಿ ನಿರ್ಜರರ ಸಮೂಹವಂದ್ಯಾನಂದಸಿಂಧೋ
ಪಾಹಿ ಪಾಹಿ ದೇಹಿಕ ಸಂದೋಹಾಮರಭೂರುಹ ೨೭

ರಾಮಾಮೃತದ ಸ್ತೋತ್ರ ಮಾಡಿದ ಭಕ್ತಿಯಲಿ ಸುದಾಮ ಗಂಧಾಕ್ಷತೆ ವಸ್ತ್ರಾದಿ
ಪೂಮಾಲೆಯಿಂ ಪೂಜಿಸಿದ ಶ್ರೀಮದ್ರಮಾರಮಣ ಮುಕ್ತಿ
ಧಾಮದಲ್ಲಿ ಅವನ ತನ್ನ ದಾಮಕರ್ತನ ಮಾಡಿದ ೨೮

ಪ್ರಸನ್ನವೆಂಕಟಕೃಷ್ಣಭಕ್ತರು ಸಂಸ್ಕೃತಿಯ ಗಹನಕೆಂಜದಿಹ ಧೀರರು
ದಶಪ್ರಮತಿಯ ಮತಪತಿಗಳು ದಶಮಸ್ಕಂಧಾಮೃತವಾರ್ಧಿಲಿ
ನಿಶಿದಿನ ಸ್ನಾನಪಾನಮಾಡಿ ಎಸೆವ ಮುಕ್ತಿಗೈದುವರು ೨೯

## ೬೦

ರಾಗ : ಮಧ್ಯಮಾವತಿ ತಾಳ : ಜಕ್ಕಣಿ ?

ಭಾಗ್ಯವನೆಣಿಸಿದರೆಣಿಕಿಲ್ಲ ಕುಬ್ಜೆ ಯೋಗ್ಯತೆ ವಾಸುದೇವ ತಾನೇ ಬಲ್ಲ ಪ.

ಭೋಜೇಂದ್ರನಂಗಲೇಪ ಸೌರಭಗಂಧ ಭಾಜನದೊಳು ತುಂಬಿಕೊಂಡು ಬಂದು
ರಾಜಮಾರ್ಗದಿ ನಿಂತ ತ್ರಿವಕ್ರೆಯಳ ನೋಡಿ ರಾಜೀವಲೋಚನ ನಗುತ ಕೇಳಿ
ದನು ೧

ಆರು ನೀ ನಿನ್ನ ಪತಿಯಾರು ಈ ದಿವ್ಯ ಸೌರಭಗಂಧ ಯಾರಿಗೆ ಒಯ್ಯುವೆ
ತಾರೆ ನಮ್ಮಂಗಕುತ್ತಮಗಂಧ ಇದರಿಂದ ಮೇರೆಯಿಲ್ಲದ ಸುಖಬಡುವೆ
ನೀಯೆಂದ ೨

ಸೌಂದರ್ಯಸಾರ ಶಪಸಮ್ಮತ ದಾಸಿ ನಾ ಇಂದೆನ್ನ ನಾಮ ತ್ರಿವಕ್ರೆಯೆಂದು
ಗಂಧಾನುಲೇಪಕರ್ತ್ರಿಯು ನಾನು ಕಂಸಗೆ ಕಂದರ್ಪ ನಿನ್ನಿಂದಾರು ಪ್ರಿಯ
ರೆಂದಳು ೩

ಚಿದ್ರೂಪ ಮಧುರ ಪೈಶಲ ಉಕ್ತಿಯಿಂ ಬಲಭದ್ರಗೆ ತನಗೆ ಬೇಡಲು ಬ್ಯಾಗೆ
ಭದ್ರಾಂಗಿಯಿತ್ತಳು ಭಕ್ತಿಭರಿತೆಯಾಗಿ ಸದ್ರೂಪ ಲೇಪನದೆಸೆವ ಗೋವಿಂದ ೪

ಕುಂಕುಮ ಕೇಶರ ಕಸ್ತೂರಿ ಗಂಧವ ಸಂಕರುಷಣ ತಾನು ಕೊಡ್ಯಂಗಕ್ಕೆ
ಅಂಕಿತರಾಗಿ ಒಪ್ಪಿದರು ಕುಬ್ಜೆಯ ಮೂರುಡೊಂಕ ತಿದ್ದಿದನು ಮುರಾರ್ದ
ಮುಕುಂದ ೫

ಪಂಕಜನಾಭನ ಪ್ರಸನ್ನತೆ ಯಾರಿಗೆ ಶಂಕೆಯಿಲ್ಲದೆ ಸೌಖ್ಯವವರಿಗೆ
ತೋಂಕ ತಿದ್ದಿ ಮದನಪಕ್ಷ್ಮರಿಯರುಲ್ಲಾಸಿದ್ಯೆಯು ಶಂಕೆ ನೀಗಿಸುವ ಸರ್ವೇಶ
ಸರ್ವೇಶ ೬

ಸುಂದರಾಂಗನ ಸ್ಪರ್ಶನ ಮಾತಿಗುಂಟಾದರೆಂದಿಗೆ ಮುಕುತಿಗೈದುವರು ಸತ್ಯ
ಇಂದಿರೆಯರಸನ ಪಾದಾಬ್ಜಾಶ್ರಿತರಿಗೆ ಮಂದಗಾದ ಭಯವೇಕೆ ಚಿಂತ್ಯಾಕೆ ೭

ತ್ರಿವಕ್ರೆ ರುಚಿರವಕ್ತ್ರೆಯು ಕಾಲ್ಗಳಲ್ಲಿ ಶ್ರೀ ತ್ರಿವಿಕ್ರಮ ಪದವನೊತ್ತಿ ಇಟ್ಟು
ದೇವೇಶ ವ್ಯಂಗುಲಿ ಪರಿಮಿತಪತ್ರಿವ ದೇಹದ ಚುಬುಕವೆತ್ತಿದ ಕೈಲಿ ೮

ವಕ್ರವು ರುಜುವಾಯಿತವಳಿಗೆ ಆಕ್ಷಣ ಶಕ್ರಾಂಗನೆಯಂತೆ ತೋರ್ದಳಾಗೆ
ಚಕ್ರಸಲಂಕಾರ ಕೃಶಮಧ್ಯದಿಂದೊಪ್ಪಿ ಚಕ್ರಿಯ ಬಳಿಯ ನಿಂತಳು ಲಜ್ಜೆ
ಯಿಂದ ೯

ಶ್ರೀ ಕೃಷ್ಣಸ್ಪರ್ಶನದಿ ಪ್ರಾಪ್ತಿಯು ವರ್ಧನೆ ಆ ಕಾಂತೆ ಹರಿಯ ಉತ್ತರೀಯ
ವಸ್ತ್ರವ
ಆಕಾಂಕ್ಷೆಯಿಂದ ಜಗ್ಗಿದಳ್ ಮಾತಾಡಿದಳ್ ಹೇ ಕಾಂತ ವೀರಮೊರೆಯ ಬಾ
ಮನೆಗೆಂದು ೧೦

ಗುಣರೂಪಪೂರ್ಣ ನೀ ಕೇಳು ಪ್ರಾರ್ಥನೆ ದೀನಜನದಯಾನಿಧೆಯೆನ್ನ ಮನೆಗೆ
ಬಂದು
ಇನಿಗೋಲನಂಬ ಪ್ರೇರಿಸಿದೆ ನೀ ಪರಿಹಾರವನು ಮಾಡು ಬಿಟ್ಟಿರಲಾರೆ
ನಿನ್ನೆಂದಳು ೧೧

ಮಾನಿನಿ ಹೀಗೆಂದವರಣ್ಣನ ಮುಖನೋಡಿ ನಾನಾ ಗೋಪರ ನಗುತ ನೋಡಿ
ಆ ನಾರಿಗೆಂದ ಮಂದಸ್ಮಿತೇಕ್ಷಣದಿ ಚಂದ್ರಾನನೆ ಪೃಥುಶ್ರೋಣಿ ಮಾತ
ಕೇಳೆಂದ ೧೨

ವೃಂದಾರಕರ ಮನೋವ್ಯಥೆಯ ಬಿಡಿಸಿ ನಿನ್ನ ಮಂದಿರಕೆ ಬಹೆ ನಡೆಯೆನ್ನುತ
ದೊಂದಿದಮೃತವಾಕ್ಯದಿಂದ ಮನ್ನಿಸಿ ಗೋಪವೃಂದ ಸಹಿತ ಅಣ್ಣ
ನೊಡನೈದೆ ಮುಂದದಿ ೧೩

ದೇವೇಶ್ವರರ ಪೂಜಿಸಿದರು ಸುಜನರು ಭಾವಜ್ಞರು ಸ್ತೋತ್ರವಂದನೆಯಿಂ
ಪವುರಜನರಿಗೆ ಕೇಳಿದನು ಧನುಃಪಸ್ಥಳೆ ದಾವುದೆನ್ನುತ ಸರ್ವಜ್ಞರು ನರರಂತೆ ೧೪

ಇವರ ಲಾವಣ್ಯಾಮೃತಪ್ರಂಡು ಬುಧರಕ್ಷಿಸವೆಯಿಕ್ಕದಲೆ ಕವಿದು ನೋಡುತ
ಸವೆಯದ ಸುಖಬಡುತ್ತಿದ್ದರು ಪ್ರಸನ್ವೆಂಕಟ [1][ರೌಹಿಣೇಯರು ಕಂಡರು ಭವನ
ಧನುವ][1] ೧೫

## ೬೧

**ರಾಗ : ಪಹಡಿ** **ತಾಳ : ಅಟ್ಟ**

ಮುಕ್ಕಣ್ಣನ ವರಧನುವನು ಕಂಸನು ಸೊಕ್ಕಿನ ಭಕ್ತಿಲಿ ಪೂಜೆಗಿಟ್ಟು
ರಕ್ಕಸಾಂತಕ ಕೃಷ್ಣರಾಮರ ಕರೆಸಿರೆ ಲೆಕ್ಕವೆ ಹುಲ್ಲು ಬಿಲ್ಲನು ಮುರಿವಾಟ ಪ.

ಇಂದ್ರಚಾಪೋಪಮ ವಿಚಿತ್ರಧನುವನು ಬಂದು ಕಂಡರು ರಾಮಕೃಷ್ಣರಾಗೆ
ಗಂಧ ಮಾಲ್ಯಾಂಬರ ಧೂಪದೀಪ ಬಲಿಯಿಂದರ್ಚನೆಗೊಂಡು ರಂಜಿಸಲು ೧

ತ್ವರಿಯದಿ ಬರುತಿರೆ ಹರಿರಾಮರಿಬ್ಬರನು ತರುವಿದರ್ ಮಾರ್ಗದಿ ಪರಿಚಾರರು
ಸೊರಜಾಗಳಿಗೆ ಅಂಜಿ ಉರಿ ಒಂದಕಾಗ್ಗದೆ ಹರಿ ಹಿಡಿದನು ಎಡಗೈಯಲಿ ಬಿಲ್ಲ ೨

ಹೆದೆಯೇರಿಸಿದನು ವಿಶ್ವೈಕ ಶೂಸ್ತ್ರಾರ ಮದಗಜೇಕ್ಷುದಂಡವ ಪಿಡಿದಂತೆ
ಬದಿಯ ಕಾವಲಿನವರ್ನ್ವರಿ ಬೇಡೆನುತಿರೆ ಪದುಮಾಕ್ಷ ಮಕ್ಕಳ ಲೀಲೆಯಂತೆ ೩

ಸಜ್ಜಿಸಿದನು ಸಕಲರು ಈಕ್ಷಿಸುತಿರೆ ಭಜ್ಜಿಸಿದನು ಎರಡು ತುಂಡುಮಾಡಿ
ಗರ್ಜಿಸಿತು ಛಟ್‌ಛಟ್ ಸಿಡಿಲುಗಳವೋಲು ನಿರ್ಜೀವರಂತೆ ಜನರಕಾಂತಿಹೋಗೆ ೪

ಗರ್ಜನೆಯಾಕಾಶ ಮಂಡಲ ತುಂಬಿತು ದಿಗ್‌ಜಾಲವೆಲ್ಲವ ವ್ಯಾಪಿಸಿತು
ಬೆಜ್ಜರವಡೆದನು ಕಂಸನ ಮೂರ್ಛೆಯೊಳ್ ಜರ್ಝರಿತಾದನು ಧೈರ್ಯಗುಂದಿ ೫

ಕಾವಲಿದ್ದವರು ಕೋಪದಿ ರಾಮಕೃಷ್ಣರ ನೀವು ಕಟ್ಟಿ ತಾವು ಕಟ್ಟಿಯೆಂಬ
ಸೌವಕ ದುರ್ಮತಿಗಳನು ಧನುಶ್ಶಕಲದ್ವಯವನ್ಪಿಡಿದು ಕುಟ್ಟಿದರ್ ಲೀಲೆಯಲಿ ೬

ಒರಳಿಗಿಕ್ಕಿದ ಧಾನ್ಯದಂತೆ ಹಿಟ್ಟು ಹಿಟ್ಟು ಘೋರಟ್ಟಿದ್ದಾಗೆ ಮಾಡಿದರಾಕ್ಷಣ
ದಂರುಳ ಕಂಸನು ಮತ್ತೆ ಕಳುಹಿದ ಬಲವನು ತರಿದುತಿರುಗುತಿದ್ದರ್ ಪುರದೊಳಗೆ ೭

ರಾಜಿಸುತ್ತಿದ್ದರು ಪುರದ ಸಂಪದ ನೋಡಿ ರಾಜವೀಥಿಲಿ ಗೋವಳರೊಳು ನಗುತ
ಭ್ರಾಜತ್ಪರಾಕ್ರಮವನು ಕಂಡು ಸುಜನರು ಈ ಜಗತ್ಪಾವನರಿವರೆಂದರು ೮

---

[1] ಭವನ ರೌಹಿಣೇಯರು ಕಂಡರು ಧನುವ

ಮೂಜಗದೊಳ್ ದೇವದಾನವರೊಳ್ ಕಾಣೆವೀ ಗೋಪಿಗರ ಪರಾಕ್ರಮರ ಸಮ
ನೈಜದಾನವರಲ್ಲ ಅಜಭವಸುರವರ್ಯ ಈ ಜಗದಿ ಒಪ್ಪುತಿಹರೆಂದು ೯

ಗೋವಕ್ಕಳ ಸುಕೃತವ ನೋಡಿ ಆವಾಗ ಜೀವನ್ಮುಕ್ತರಂತೆ ಸುಖಿಗಳಾಗಿ
ಶ್ರೀವಾಸುದೇವನ ಸಮಾಶ್ರಿತರಾದರು ದೇವಾಂಶರ್ ನರರಲ್ಲ ಇವರೆಂದರು ೧೦

ಆವೇಳೆಯಲಿ ಭಾನು ಅಸ್ತಮಯವ ನೋಡಿ ಶ್ರೀವಾಸುದೇವ ಬಲಗೋವಳರು
ತಾವು ಮೋದರು ತಮ್ಮ ಶಕಟವಿದ್ದಲ್ಲಿ ಜಯವಂತರ್ ಧಾರ್ಮಿಕರ್
ದಯವಂತರು ೧೧

ತೊಳೆದು ಪಾದಾಬ್ಜವನುಂಡು ಕ್ಷೀರೋದನ ಕಳೆದನುಭವನು ಕಂಸನಮತಿಯ
ತಿಳಿದು ಬಲವುಳ್ಳವರು ಸೌಖ್ಯವಲಾರಾತ್ರಿ ಲಲಿತ ಸ್ವಾಪವ ಮಾಡಿದರು
ರಾಮಾಚ್ಯುತರು ೧೨

ಸತ್ಯಸಂಕಲ್ಪ ಶ್ರೀಕೃಷ್ಣಾಶ್ರಿತ ಭೃತ್ಯಜನಾರ್ಥಪೂರಣ ಕಾರಣ
ನಿತ್ಯ ನಿರ್ದೋಷ ಸಚ್ಚರಿತ್ರಾಂಬುಜನೇತ್ರ ದೈತ್ಯಾಂತಕ ಪ್ರಸನ್ವೆಂಕಟಾದ್ರೀಶ
೧೩

## ೬೨

**ರಾಗ : ಪಂತುವರಾಳಿ** **ತಾಳ : ಅಟ್ಟ**

ರಾಮಕೃಷ್ಣರ ದ್ರೋಹದಫಲ ತತ್ಕಾಲ ಒದಗಿತು
ತಾಮಸಾತ್ಮ ಕಂಸನಿಗುತ್ಪಾತ ತೋರಿತು ಪ.

ಮನದಿ ಯೋಚಿಸಿದನು ಬಿಡದ್ಯಾಮಿನಿ ಸಮಗ್ರವ
ಧನುವು ಮುರಿದ ಕ್ಲೇಶ ತನ್ನ ಜನರ ಹಿಂಸೆಯ
ನೆನೆದು ನೆನೆದು ರಾಮಕೃಷ್ಣರ ಘನವಿಕ್ರಮವನು
ಎಣಿಸಿ ದುರ್ಮತಿ ಭೀತಿವಿಡಿದು ಅನಿಮಿಷನವನು ೧

ತನುವಿನಲ್ಲಿ ತಲೆಯುದೋರದು ಕನ್ನಡಿಯೊಳಗೆ
ದಿನಪಮಂಡಲವೆರಡು ತೋರಿದವನಿತರೊಳಗೆ
ಮನಸಿನಲ್ಲಿ ನೊಂದು ಕುಳಿತು ನೋಡುತಿರಲಿಕ್ಕೆ
ಘನ ದುರ್ನಿಮಿತ್ತ ಕಂಡಂಜುತಿದ್ದನು ಕ್ಷಣಕೆ ಕ್ಷಣಕ್ಕೆ ೨

ದೇಹದ ನೆಳಲು ಛಿದ್ರ ಛಿದ್ರಾಗಿರೆ ಆಹರ್ನಿಶ ಕಿವಿಯಲಿ
ಇಹಂಥ ಪ್ರಾಣಘೋಷವಡಗಿ ಬಹಳ ಭಯದಲಿ
ಮಹಿಜವೆಲ್ಲ ಸುವರ್ಣವಾಗಿ ಇಹುದು ಕಂಡನು
ಮಹಾಮದಾಂಧ ತನ್ನ ಹೆಜ್ಜೆಗಳ ಮಹಿಯಲಿ ಕಾಣನು ೩

ಬವಣೆಗಂಜಿ ಬೆದರ್ದು ಭ್ರಾಂತಚಿತನಾಗುವ
ಜವನ ದಿಕ್ಕಿಗೆ ಕನಸಿನಲ್ಲಿ ಖರವನೇರ್ದೈದುವ
ಶವವನಪ್ಪುತ ಹೋಗುವ ಕಣಗಿಲ್ ಹೂವಿನ ಮಾಲೆಯನು
ಗ್ರೀವದೊಳಾಂತು ಮೂಸಿ ದಿಗಂಬರ ನವಿವ ಬಿಸವನು ೪

ಈವಿಧವುತ್ಪಾತ ಜಾಗ್ರತೆ ಸ್ವಪ್ನವಿವರ ಕಂಡನು
ಕಾವಲಿಲ್ಲದ ಮೃತ್ಯುವ ನಿಶ್ಚಯಿಸಿ ಆವನು ಅಂಜಿದನು
ಲವಯುಗಾಗಿ ರಾತ್ರಿಯು ನೂಕಿದ ನವೆಯುವ ಕಷ್ಟದಲಿ
ರವಿಯು ಉದಿತನಾದ ಬಳಿಕುತ್ಸವವು ಮನದಲಿ ೫

ಹವಣಿಸಿದನು ಮಲ್ಲರ ಕ್ರೀಡೆಗೆ ಲವಲವಿಕೆಯಲಿ
ಅವನಿಪತಿಯು ರಂಗವ ಮಂಡಿಸಿ ನವಮಂಚಗಳಲಿ
ತೀವಿಯರಚಿಸಿ ತುತೂರಿ ಭೇರಿ ವಾದ್ಯವ ಘೋಷಿಸಿದ
ಟವಟವಿಸುವ ತುಂಗಮಂಟಪ ಸಿಂಗರಿಸಿದ ೬

ಸುತ್ತಲು ಪೂಮಾಲೆ ಪತಾಕೆ ತೋರಣ ಚಿತ್ರ ವಿಚಿತ್ರಗಳು
ಅತ್ಯಂತಾಲಂಕರಿಸಿದ ಮಂಚಗಳು ಎತ್ತೆತ್ತ ರಾಜಿಸಲು
ಅರ್ಥಿಲಿ ದಿದೃಕ್ಷುಗಳು ಪೌರಜನ ಪೃಥ್ವೀಸುರರ್ ಸಮೂಹ
ಸತ್ವರ್ ಬಂದು ಬಂದು ತಮ್ಮ ಆಸನ ಹತ್ತಿ ನೋಡುತಲಿಹ ೭

ದೇದೀಪ್ಯ ತುಂಗ ಮಂಚದಲಿ ಭೋಜೇಂದ್ರನೈದಿ ಕುಳಿತ ಹೊಂದಿ
ಪ್ರಧಾನರಮಾತ್ಯರೊಡನೆ ಒಪ್ಪಿದ ಭೂಧರ ಮಂಡಲದಿ
ಹೋದ ತೇಜಾಗ್ನಿಯಂತಿದ್ದನು ರಾಜೇಂದ್ರ ಶ್ರೀಧರನ ದ್ರೋಹದಿ
ಕೈಮು ತಗಲಿವಂದದೆದೆದಿಗಿಲಿನಲಿ ನಾದಿದ ದುಶ್ಚಿತ್ತದಿ ೮

ರಂಗಕೈತಂದವರು ದೃಪ್ತದಿ ಮಲ್ಲರು ಸಿಂಗರಿಸಿ ತಮ್ಮನು
ಸಂಗರದನುಗರು ಆಪ್ತರುಪಾಧ್ಯೇರು ಜಂಗುಳಿಗಟ್ಟೆಲ್ಲರು
ಸಂಗೀತ ತುತ್ತೂರಿ ತಾಳ ಜಾಗಟೆ ಬಿರುದಂಗಳ ಚಾಣೂರ ಮುಷ್ಟಿಕ
ಪಿಂಗದೆ ಶಲ ತೋಸಲ ಕೂಟಾದ್ಯರ ಸಂಗಡಿಸಿ ಬಳಿಕ ೯

ಬಂದಿರೆ ವಾದ್ಯದ ಘೋಷದಲಿ ಮತ್ಸ್ಯಸಂದೋಹ ಒಪ್ಪುತಲ್ಲಿ
ನಂದಗೋಪಾದ್ಯರುಪಾಯನವ ತಕ್ಕೊಂಡು ಬಂದರು ರಾಜನಲ್ಲಿ
ಮುಂದೆ ತಂದಿಟ್ಟರು ನೃಪಗೆ ನಮಿಸಿ ತಾವು ಹೊಂದಿದರ್ ಮಂಚಗಳ
ಚಂದದಿಂದುತ್ಸವವ ನೋಡುತ ಕುಳಿತರು ಬಂದು ಗೋವಳರ್ಮೇಳ ೧೦

ಶ್ರೀಕೃಷ್ಣ ಕೃಷ್ಣ ಸುಮಾರ್ಣವ ನಿರ್ಜರಾನೀಕಪ್ರತಿಪಾಲಕ
ಗೋಕುಲರಕ್ಷ ಗೋವಿಂದ ನಿರ್ದೋಷ ಗುಣಾಕರ ದಿವ್ಯಾರ್ಕ
ವೈಕುಂಠಮಂದಿರ ಸುಂದರ ವರ ಭುವನೈಕ ವ್ಯಾಪಕ ಮುರಾರೆ
ಶ್ರೀಕಾಂತ ಭೂಕಾಂತ ಏಕಾಂತಭಕ್ತಕೃಪಾಕರಾನಂತ ಹರೆ ೧೧

ಭೂಭಾರಹರಣ ನಿರ್ಜರಕ್ಷೋಭಕಾರಣ ಶೋಭನ ಸದ್ಗುಣಾರ್ಣವ
ತ್ರೈಭುವನಾಧಾರ ಪರಮ ಭವೋದ್ಧರ ಲಾಭರಹಿತ ಉದಾರ
ಗೋಭೂಸುರಾರ್ತಿಹನ್ಮೋಪವೇದಧರ ಶ್ರೀಭೃತ ಸಕಲಾರ್ಥದ
ಭೂಭುಜಾರ್ಚಿತಪಾದ ಭಕ್ತವತ್ಸಲ ಹರೆ ಶ್ರೀ ಭಗವಜ್ಜನ ದಾತಾರ ೧೨

ಈ ಕಥಾಮೃತವನುಂಬುವ ಜಾಣಭಾಗ್ಯವು ಬೇಕೆಂದು ಬಯಸುವರು
ನಾಕಜನರ್ ಮುನಿಗಳು ನಿತ್ಯವಿರಕ್ತರು ಲೌಕಿಕೇಷಣರಿಕ್ತರು
ಶ್ರೀಕರ ಪ್ರಸನ್ವೆಂಕಟ ಕೃಷ್ಣನೊಲುಮೆಯಲಿ ವೈಕುಂಠಲಾಭವಕ್ಕು
ಏಕಾಂತಜನರೊಳು ವಾಸಬೇಕಾದರೆ ಅನೇಕ ಸಾಧನವಿನ್ಯಾಕೆ ೧೩

### ೬೩

ರಾಗ : ಸಾರಂಗ ತಾಳ : ಝಂಪೆ

ಗಜಪಾಲ ಅಷ್ಟದಿಗ್ಗಜಪಾಲ ಗಜವದನಜನಕಪಾಲ
ಗಜರಿಪುವದನ ಹರಿಗೆ ಕುವಲಯಪೀಡಕನೊಬ್ಬ
ಗಜವದನ ಘನವೆಯುವಗೆ ಪ.

ಬಾಹ್ಯೋಪವನದಿ ಶಕಟಗಳ ಬಳಿ ಹರಿಬಲರು ಆಹಸ್ಕರೋದಯದಲೆದ್ದು
ಸುಹಸ್ತ ಶೌಚ ಮಾಳ್ಪನಕ ಕೇಳಿದರು ಮತ್ತಮಲ್ಲರ ಬಹಳ ದುಂದುಭಿಘೋಷವ
ಆಹ್ನೀಕ ಮುಗಿಸಿ ನಡೆದರು ಶೀಘ್ರ ಭೋಜಪನ ಗೇಹ ರಂಗದ್ವಾರದೆಡೆಗೆ
ಮಹಾಶೈಲದಂತೆ ತಮ್ಮ ನಿವೇಶಕೆ ಅಡ್ಡ ನಿಂತಿಹುದು ಅಂಬಷ್ಠನಿಲಿಸೆ ೧

ಕಂಡು ಶ್ರೀ ಕೃಷ್ಣ ಪರಿಕರವ ಮಧ್ಯಕೆ ಸುತ್ತಿಕೊಂಡು ಅಳಕವ ಕಟ್ಟಿದ
ಕುಂಡಲವಂ ತೆಗೆಯೆ ಶೀಘ್ರ ಅಲಸದಲೆ ಉದ್ದಂಡತನವನು ತೋರಿದ

ಮಿಂಡುಗೆಡಹುವ ನಿನ್ನ ಹಸ್ತಿ ಸಹ ಕಳುಹುವೆನು ದಂಡಪಾಣಿಯ ನಗರಕೆ
ಭಂಡತನ ಬೇಡ ನಿನ್ನಯ ಪಕ್ಷಪಾತ ಜನ ಹಿಂಡುವೀರರ ಸದೆವೆನು ೨

ಹೀಗೆನಲು ಕೋಪದಲಿ ಮಾವುತಗೆ ಗಜವನ್ನು ಚೋದಿಸಿದ ಕೃಷ್ಣೋಪರಿ
ವೇಗದೈದಿತು ಪ್ರಳಯಕಾಲ ಕಾಲನರೂಪ ಹೋಗಿ ಶುಂಡಿಲಲಿ ಜಗ್ಗಿ
ಯೋಗೇಶ್ವರಾಚ್ಯುತನ ಹಿಡಿವರೆ ಜಗುಳಿ ಬೇಗ ಅಧಮನ ವಂಚಿಸಿ
ಆಗಜಗುತಿರಲಂಘ್ರಿ ಮೆಟ್ಟುಗಳ ತಪ್ಪಿಸಲು ಮೂಗಿಲಾಘ್ರಾಣಿಸಿ ಗಜ ೩

ಮಾಗುವಂಗ್ಯತ್ನವಾಡಲು ದುಷ್ಟವಾಸ್ವಾರ ಬೇಗ ಪುಷ್ಕರ ತಪ್ಪಿಸಿ
ಆಗ ಪುಚ್ಛವ ಹಿಡಿದು ಜಗ್ಗಿಳಿದ ಭೂಮಿಮೇಲ್ ಲಾಘವದಿಪ್ಪತ್ತೈದು ಧನುವ
ನಾಗಾರಿ ಅಹಿಯ ಲೀಲೆಯಜೋಯ್ದು ತಿರು ತಿರುಹಿದ್ದಾಗೆ ಅಪ್ರತಿಮಲ್ಲನು ಆ
ಮೋಘವಿಕ್ರಮ ಸವ್ಯದಕ್ಷಿಣಕೆ ಬಿಗಿದಾಡೆ ನಾಗ ಭ್ರಾಂತಿಯನೈದಿತು ೪

ಭ್ರಾಮಣವ ಮಾಡಿದನು ಬಾಲಕರು ವತ್ಸವನು ಭೂಮಿಯಲಿ ವಂಚಿಪಂತೆ
ಶ್ರೀ ಮನೋಹರ ಹಸ್ತಿ ಮುಖದಿದಿರು ನಿಂತನು ಮಹಾಮೃಗಾಧಿಪನ ತೆರದಿ
ಆ ಮತ್ತಗಜವ ಬಡಿದನು ಕೈಲಿ ಘನವನ ನಿಯಾಮಕನು ಚೆನ್ನಾಟದಿ
ತಾ ಮತ್ತೆ ಮುಟ್ಟಿ ಮುಟ್ಟೋಡಿದನು ಹಿಂದೆ ಗಜ ಮುಂದೆ ಮುಂದಾಗೆ ಕೃಷ್ಣ ೫

ನಿಂತು ನಿಂತೋಡುವನು ತೋರ್ಪನಡಗುವನೊಮ್ಮೆ ದಂತಿಕರಕೆ ಸಿಲುಕಿದೋಲ್
ಭ್ರಾಂತಿ ಬಡಿಸುವ ಹಸ್ತಿ ಹಸ್ತಿಪಗೆ ಕ್ಷಣ ಕ್ಷಣಾ ಚಿಂತ್ಯಾದ್ಭುತಕರ್ಮನು
ಸಂತರ ಮನಕೆ ಮೋದ ತೋರುವುದು ಹರಿಗೆ ಜಯ ಚಿಂತಿಪರು ಭಕ್ತರಾಗ
ನಂತಶಕ್ತ್ಯಾತ್ಮನ ಲೀಲೆಯಂ ಕಂಡು ಸುರತಿಂತಿಣಿಯು ಜಯ ಜಯವೆನೆ ೬

ಆಯಾಸಾದಂತೆ ಬಿದ್ದೆದ್ದು ಓಡಿ ದೇವಮಾಯವು ತನಗೆ ತಿಳಿಯದೆ
ತಾಯ್ದೈದಿತಾಗಜವು ದಂತದಲಿ ಇಳೆಗಿರಿದು ಹೋಯಿತೆಲ್ಲ ವಿಕ್ರಮವು
ಶ್ರೀಯಿಶನ ಕಾಣದೆ ಮಹಾಮಾತ್ರ ಕ್ರೋಧಾಯಮಾನದಿ ಬೆಂಬತ್ತಿ
ನೋಯಿಸುವೆನೆಂದು ಓಡಿಸಿದ ಹರಿ ಬೆನ್ಹತ್ತಿ ವಾಯುವೇಗದಿ ಹಸ್ತಿಪ ೭

ಶ್ರೀ ಪದ್ಮಾರಮಣ ನಿಂತನು ಕರಿಯ ಮುಂದೆ ಬಾ ಮುಂದಕೆಂದು ಹಿಡಿದು
ಭ್ರಾಮಿಸುತ ಶುಂಡಾಲವಿಡಿದಪ್ಪಳಿಸೆ ತೀವ್ರ ಭೂಮಿತಳದಲ್ಲಿ ನಗುತ
ವೈಮಾನಿಕರು ಜಯಜಯ ಎನೆ ಕರಿಯ ಮೆಟ್ಟಿ ಶ್ರೀ ಮನ್ನೃಸಿಂಹನಂತೆ
ಆ ಮತ್ತಗಜದ ದಂತಗಳೆರಡು ಕಿತ್ತಿ ಮಹಾಮಾತ್ರನಂ ಜಡಿದನು ೮

ದಂತಿ ಮಂತಿಪರಳಿದು ಬಿಸುಟು ನಡೆದನು ಒಂದು ದಂತವಂಸದಲಿ ಧರಿಸಿ
ದಂತವೊಂದನು ಅಗ್ರಜಗೆ ಕೊಟ್ಟು ದುಷ್ಟಹರಾನಂತಶಕ್ತ್ಯಾತ್ಮಕೃಷ್ಣ

ಕಾಂತಿಯಿಂದೊಪ್ಪುವರು ರಾಮನಾಚ್ಯುತರು ಮದದ ದಂತಿ ರಕ್ತಬಿಂದು ಸಿಡಿದು
ಎಂತು ನೀಲಾದ್ರಿ ರಜತಾದ್ರಿ ಧಾತುಸುತಿಪವು ಅಂತೆ ತೋರಿದರು ಕಣ್ಗೆ ೯

ಸ್ವೇದಾಂಕಿತಾಸ್ಯಾಬ್ಜವತ್ಯಂತ ಸುಂದರರು ಮೋದಸ್ಮಿತೇಕ್ಷಣದವರು
ಐದಿದರು ರಂಗವನು ಆಕಾರ ಯೋಗ್ಯತೆಯ ಭೇದದಂತಲಿ ತೋರ್ದರು
ಕಾದಿರುವ ಸಿಡಿಲಂತೆ ಮಲ್ಲರಿಗೆ ತೋರಿದರು ಮೇದಿನಿಪರಂತೆ ನರರ್ಗೆ
ಐದಂಬ ಸ್ತ್ರೀಯರಿಗೆ ಆಪ್ತ ಗೋಪಾಲರಿಗೆ ಭೂಭರರ್ಗೆ ಶಾಸ್ತಾರರೋಲ್ ೧೦

ಜನನಿಜನಕರ್ಗೆ ಅರ್ಭಕರಾಗಿ ಮೃತ್ಯು ಕಂಸನಿಗೆ ವೃಷ್ಣಿಗಳ ಕಣ್ಗೆ
ಘನವಿರಾಟರಂತೆ ಪರಾತ್ಪರರಂತೆ ತೋರಿದರು ಜ್ಞಾನಿಜನಕೆ ರಂಗದಲ್ಲಿ ೧೧

ಸವೆಯದಹಂಕಾರವನು ಬಾಹ್ಯದಲಿ ತೋರುತಿಹ ಭವರೋಗನಾಶನ ಮುಕುಂದನಾ
ಲವಲವಿಕೆ ಮಾಡುತಿಹ ವ್ಯರ್ಥ ಉನ್ಮತ್ತ ಸಿಂಗವರ ಸಾಹಸಕೆ ಕುದಿದನು
ಪೀವರಭುಜಬಲಾಢ್ಯರು ವಿಚಿತ್ರವೇಷ ಸುವಸನಾಭರಣರು
ದೇವೋತ್ತಮರು ರಂಗದಲಿ ಸಂಚರಿಸುತಿಹರು ಮಾನವ ವೃಷಾಕೃತಿಯಲಿ ೧೨

ನೋಡುವರ ಕಣ್ಮನಕೆ ಸುಧೆಯ ರಸ ತುಂಬಿ ಸುಪ್ರಾಶನ ಹರಿಯ ಸೌಂದರ್ಯ
ನೋಡಿ ಚಕ್ಷುಪುಟಗಳಿಂ ಪೀಯೂಷಪಾನವನು ಮಾಡುವರು ಮನದಣಿಯದೆ
ನೀಡಿ ನಾಲಿಗೆಯಿಂದ ಲಾವಣ್ಯಲೇಹನವ ಮಾಡುವಂತಿಹ ಸುಜನರು
ಗಾಢ ಘ್ರಾಣಿಸುತಿಹರು ಘ್ರಾಣದಿಂದಾಮೋದ ಗಾಢಾಲಿಂಗಿಪರ್ ಬಾಹುಗಳಿಂ ೧೩

ಬಾಹ್ಯಾಂತರ ಪ್ರಕಾಶನಾಪ್ಪವನು ನೋಡಿ ಜನ ಮಹದಾಶ್ಚರ್ಯಪಡುತಲಿ
ಸ್ನೇಹದಲಿ ಮಾತಾಡಿದರು ತಮ್ಮ ತಮ್ಮೊಳಗೆ ಇಹ ಮಂಚದ ತಾಣದಿ
ಇವರ ವಿಕ್ರಮವನ್ನು ಕಂಡರು ಪ್ರತ್ಯಕ್ಷದಲಿ ಆ ಹಿಂದೆ ಕೇಳಿದಂತೆ
ರೂಹ ಚಾತುರ್ಯ ಔದಾರ್ಯ ಮಾಧುರ್ಯ ಸಲೆ ಗಹನ ಗಾಂಭೀರ್ಯ
ಮಂದು ೧೪

ಆದಿ ನಾರಾಯಣನಂಶರು ಈಗಲೀ ಯಾದವ ಕುಲದಲಿ ಜನಿಸಿ
ಈ ದೇವಕಿ ಶೌರಿ ಪೂರ್ವದಲಿ ಮಾಡಿದ ಪುಣ್ಯೋದಯವು ಮಕ್ಕಳೆನಿಸಿ
ಮೇದಿನಿಯ ಭಾರಿಳುಹಬೇಕೆಂದು ವ್ರಜದಲಿ ದಿನೇ ದಿನೇ ಕ್ರೀಡೆಯಾಡಿ
ಮೋದವಿತ್ತರು ಜನಕೆ ಚಾರು ಚಾರಿತ್ರ್ಯರಿವರಾದರದಿ ಸುರರಿಗೆ ಜಯ ೧೫

ಗೂಢಾತ್ಮರಿವರು ನಂದನ ಗೇಹದಲಿ ಬೆಳೆದು ಮಾಡಿದರು ದುಷ್ಟಹರಣ
ಪೀಡೆ ಪೂತನಿ ಚಕ್ರವಾತ ಕೇಶಿಯುಂ ಗುಹ್ಯಕ ಜೋಡಾರ್ಜುನಾದ್ಯರನ್ನು

ಕಾಡಿನೊಳು ಕಿಚ್ಚನುಂಗಿದ ಕೃಷ್ಣ ಅಹಿಮದ ವಿಭಾಡಿಸಿದ ಸುತ್ರಾಮನ
ಕೇಡಿನ ಮಳೆಗೆ ಗಿರಿಯನೇಳು ದಿನ ಕೈಲಿ ಎತ್ತ್ಯಾಡಿದುಳುಹಿದ ವ್ರಜವನು ೧೬

ಕೃಷ್ಣವದನಾಬ್ಜ ಸುಧೆಪಾನವನು ಇರುಳ್ಹಗಲು ದೃಷ್ಟಿಂದ ಮಾಳ್ಪಬಲೆರ
ನಿಷ್ಟೆ ಜ್ಞಾನವನು ಕವಿಗಳು ಜಿಹ್ವೆಯಿಂದೆ ಇನ್ನೆಷ್ಟು ಹೇಳಲು ತೀರದು
ಶಿಷ್ಟರ ಶ್ರವಣಾಮೃತಸಾರ ಮುಂದಕೆ ಸುವಿಶಿಷ್ಟ ಸುಖಭೋಜನ ಗಡ
ಕೃಷ್ಣಚಾರಿತ್ರ್ಯದ ವಿಚಿತ್ರವನು ಪೇಳ್ವ ಪರಮೇಷ್ಠ್ಯಾದಿ ವಿಬುಧ ಸಮೂಹ ೧೭

ಗೋಪಾಲರೊಡಗೂಡಿ ಗೋವ್ರಗಳ ಚರಿಸುವ ಶ್ರೀಪತಿಯು ಗಿರಿವನದಲಿ
ಗೋಪಿಯರ ಮನ್ನಿಸುವ ವೇಣುನಾದದ ರಸದಿ ವ್ಯಾಪಿಸುವ ಸುರರ ಶ್ರುತಿಗೆ
ಈ ಪರಬ್ರಹ್ಮ ಹರಿರಾಮ ಸಾಮಾನ್ಯರೇ ಗೋಪರೇ ಲೋಕೇಶರು
ಆ ಪ್ರಲಂಬನ ಮರ್ದಿಸಿದ ರಾಮ ತಡೆಯದೆ ಮಹಾಪರಾಕ್ರಮಿ ದುಷ್ಟರ ೧೮

ಈ ವಿಧದ ಕೀರ್ತನೆಯನು ಮಾಡುವರು ಸುರರೆಲ್ಲ ನಾವೇನು ಬಲ್ಲೆವೆನುತ
ಈ ವಾಕ್ಯ ನುಡಿವನಕ ಭೇರಿ ತುಂತುರಿ ಘೋಷ ತೀವಿತು ಬಿರಿದು ಮಲ್ಲರ
ಶ್ರೀವರ ಪ್ರಸನ್ನವೆಂಕಟಕೃಷ್ಣ ಬಲರಾಮ ರಾಜೀವನೇತ್ರರು ವೀರರು
ಕೋವಿದರು ಒಪ್ಪಿದರು ಜಗಜಟ್ಟಿಗಳ ಕಂಡು ಭಾವುಕರಿಗಾಹ್ಲಾದವು ೧೯

## ೩೪

ರಾಗ : ಮುಖಾರಿ ತಾಳ : ಜಕ್ಕಣಿ ?

ಮಧುಕೈಟಭಮರ್ದಕನೊಳು ಚಾಣೂರ ಮದಸೊಕ್ಕಿ ಕಾದುವೆನೆಂದು
ವದಿಸಿದ ರಂಗದಿ ರಂಗನೊಡನೆ ತಾ ಬದುಕಬಲ್ಲನೆ ಹೇಳೆಂದು ಪ.

ಎಲೆ ಬಲರಾಮಾಚ್ಯುತ ನಂದಗೋಪನ ಎಳೆಯರಿರಾ ನೀವಿಂದು
ಇಳೆಯೊಳು ವೀರಸಮ್ಮತರುದ್ಭಟರು ಬಲು ಯುದ್ಧಕೌಶಲರೆಂದು
ಘಳಿಗಘಳಿಗೆ ಕೇಳುತಲಿದ್ದ ಭೋಜಪ ಲಲಿತ ಉತ್ಸವನೋಳ್ಪ ವ್ಯಾಜೆ
ಯಲಿ ಕರೆಸಿದನು ಇಬ್ಬರನೆಂದನು ಖಳ ಕಲಿ ಚಾಣೂರ ಪಾಪಭಾಜ ೧

ದೇಶಸ್ಥರೆಲ್ಲರು ನೆರೆದಿಹರಿಲ್ಲ್ಯವನೀಶರು ನೃಪಪ್ರೀತಿಗಾಗಿ
ಲೇಸು ಶ್ರೇಯಸು ಉಂಟು ನಿಮಗಿನ್ನು ನೃಪತಿಯ ತೋಷಬಡಿಸಿ ಸುಖಿಯಾಗಿ
ಮೇಸುತಲಿರುತಿರೆ ವತ್ಸವ ವನದಲಿ ಆ ಸಖ ಗೋಪರ ಕೂಡಿ ಸ
ದಾ ಸರ್ವದಾ ಮಲ್ಲಯುದ್ಧವ ಮಾಡಿದಿರೀ ಸಮಯಕೆ ಅಂಜಬೇಡಿ ೨

ಪ್ರೀತಿಪಡಿಸಿ ರಾಜೇಂದ್ರನ ಸಮ್ಮುಖದಿ ನೀತಿಯುದ್ಧವ ಮಾಡಿ ತೋರಿ
ಖ್ಯಾತರಾಗಿರಿ ಕೋವಿದತೆ ನೋಡಲೆಲ್ಲರು ಚಾತುರ್ಯ ತೋರ್ಪುದು ವಿಚಾರಿ
ಘಾತ ಪ್ರಸಾದಿಸುತೇವೆ ಭೋಜಪದಾತನ ಆಜ್ಞೆಯವಹಿಸಿ
ಘಾತಪ್ರಭು ಪೃಥ್ವೀನಾಥನು ಎಂದನು ಮಾತಿಲಿ ಚಾಣೂರ ಕಥಿಸಿ ೩

ಚಾಣೂರನ ಕಥನವ ಕೇಳುತ ಕೃಷ್ಣ ತಾ ನುಡಿದನು ಸ್ಮಿತವದನ
ಧೇನುಚಾರಕರು ನಾವೇನು ಬಲ್ಲೆವು ಪ್ರಜಾನನಿಚರಬಾಲಕರಾದನ
ಸೀನಾನುಗ್ರಹವ ಮಾಡಿದರೇವೆ ಯುದ್ಧ ಪ್ರಮಾಣದಿ ಮಾಡಿ ನಿಮ್ಮೊಳು
ಘನಾಘನ ಪ್ರೀತಿಯ ಪಡೆವೆವು ಬಲಹೀನರು ಆಶಿಬಾಲರುಗಳು ೪

ಬಲವಂತರ್ ನೀವು ಯಥೋಚಿತ ಯುದ್ಧವ ಇಳೆಯರಸಗೆ ತೋರ್ಪಾವು
ಸಲೆ ಅತಿಕ್ರಮಿಸಿದರೇವೆ ಅಧರ್ಮವು ತಿಳಿಯ್ಯೆ ನಾವು ಹೇಳುವೆವು
ಬಲಿನಾನುಜನು ಹೀಗೆಂದರೆ ಚಾಣೂರ ನಳಿನಾಕ್ಷಗೆ ತಾನೆಂದ
ಎಲೆ ಬಲರಾಮಾಚ್ಯುತರಿರಾ ನೀವಿನ್ನೆಳಿಕಿಶೋರರು ವ್ಯಾಗೆಂದ ೫

ನಲುವಿಂದ ಲೀಲೆಯಲಿ ಕುವಲಯಾಪೀಡನ ಅಳಿದಿರಿ ಮದಸೊಕ್ಕಿಯಾಹುದು
ಗೆಲುವ್ರಂಟೆ ಕಾದಿದವರಿಗೆಂದಿಗೆ ಕೇಳಿ ಇಳೆದಿವಿಯಲಿ ಸಟೆಯೆಂದ
ಬಲನಿಗೆ ಮುಷ್ಟಿಕನೊಡನೀಗ ಯುದ್ಧವು ಸಲೆ ಸಮರ್ಪಕ ನಿನ್ನೊಳೆನಗೆ
ಬಲವಂತ ಮಲ್ಲರನೇಕರು ಹೀನೇಕ ಗೆಲಬೇಕೆಂದ ಖಳನಾಗೆ ೬

ಈ ನೇಮದ ಚಾಣೂರ ಮಾಡಲು ಬಲ ಬಾ ಸೀನೆಂದು ಮುಷ್ಟಿಕನ
ಪಾಣಿಗೆ ಪಾಣಿ ಪಾದಕೆ ಪಾದ ಹಚ್ಚುತ ತಾನೊತ್ತ್ಯಾಡಿದ ಜಾಣ
ಜಾನುವಿಗೆ ಜಾನು ನೆತ್ತಿಗೆ ನೆತ್ತಿ ಅರಾತ್ನಿಗೆ ಅನ್ಯೋನ್ಯ ಗೆಲುವ ಇಚ್ಛೆಯಲಿ
ಮಾನ ಪರಿಭ್ರಮಣವು ವಿಕ್ಷೇಪಣ ನಾನಾ ಪರಿರಂಭದಲ್ಲಿ ೭

ಒಮ್ಮೊಮ್ಮೆ ಬೀಳಗೆಡಹ್ಯಾಡುವ ಸೌರಂಭ ಒಮ್ಮುತ್ಸರ್ಪಣಾಪಸರ್ಪಣ
ಒಮ್ಮುತ್ಥಾಪನ ಸ್ಥಾಪನ ಚಾಲನವ ಮಾಡಿ ಹಮ್ಮಲಿ ಗೆಲುವೆವೆಂಬ್ವಣ
ತಮ್ಮೊಳು ಗೆಲುವಿಚ್ಛೆಯಲಿ ಪರಸ್ಪರ ಹಿಮ್ಮೆಟ್ಟದಲೆ ಒತ್ತ್ಯಾಡಿದರು
ಹೆಮ್ಮದ್ದಾನೆಯ ತೆರದಲಿ ಯುದ್ಧದ ಸೊಮ್ಮಿನ ಬಲ್ಲಿದರವರು ೮

ಜನರೆಂದರು ಬಾಲಕರಿಗೆ ಬಲ್ಲಿದರನು ಸರಿ ನೋಡುವ ಕರ್ಮ
ಘನ ಅನ್ಯಾಯವು ಎಂದರು ಸ್ನೇಹದೀ ಜನಪತಿಗಿದು ಈಗಧರ್ಮ
ನೆನೆವರೆ ಪಾಪದ ಸಭೆಯಿದು ಇಲ್ಲಿ ಸಜ್ಜನರಿಗೆ ಸಲ್ಲ ನಿವಾಸ
ತನುಗಿರಿಗ್ಹೋಲುವ ಮಲ್ಲರು ವಜ್ರರು ಅಣು ಕೈಶೋರರು ದೋಷ ೯

ಅಪ್ರಾಪ್ತದ ಯೌವನದವರ್ ನೃಪತಿಯು ಅಪ್ರಜ್ಞನತಿಘಾತುಕನು
ಈ ಪ್ರಕಾರ್ ಕಲ್ಪಿಸ ದೊಂದಿದ ಸಭೆಯನು ಸುಪ್ರಜ್ಞರ್ ಬಿಡಬೇಕಿದನು
ಸಂಪ್ರವೃತ್ತ ಮಲ್ಲರು ದಂಡಿಲರ್ ಬಾಲರು ಸುಪ್ರೇಕ್ಷಜನಕೆ ಮೋಕ್ಷದರು
ಈ ಪ್ರತ್ಯಕ್ಷದಿ ನೋಡುವರ್ ಕಣ್ಗಳಿಗೆ ಅಪೌರುಷ ಕಂಸಗೆ ಹಿತರು ೧೦

ಕೃಷ್ಣಾಸ್ವಾದ್ಯತ್ವದ ನೋಡುವರಕ್ಷಿಗೆ ದೃಷ್ಟತ್ವ ಪಾಪಕೆ ಲಯವು
ಸಿಟ್ಟಿಲಿ ಚಾಣೂರನ ಕೃಷ್ಣ ಯುದ್ಧಕೆ ಕರೆದಪ್ಪರೊಳು ಬಲನಿಗ ಗೆಲುವು
ದೃಷ್ಟವಿಲ್ಲದ ಹಾಸ್ಯವದನದಿ ಈ ಬಲ ಮುಷ್ಟಿಕನೊಳು ಕಾದುತಿಹ
ಪಟ್ಟಿಗರರಸನ ದೃಷ್ಟಿ ತಾಮ್ರಗಿದೆ ಶಿಷ್ಟರು ನೋಡಿಯೆನುತಿಹ ೧೧

ರಾಮಾಚ್ಯುತರ ವಸತಿ ಗೋಕುಲದ ಭೂಮಿಯು ಪುಣ್ಯವು ವೊತ್ತ
ಗೋವಂತಿಗಳ ಸಹಚರಿಪರು ವನವನ ಸ್ವಾಮಿ ಭುವನತ್ರಯನಾಥ
ಈ ಮನುಷ್ಯಾಕೃತಿ ಗೂಢರು ಈಶ್ವರರು ಮನುಜರ ಮೋಹಿಪರು
ಶ್ರೀಮಂತರು ಸಕಲ ಭುವನವ್ಯಾಪ್ತರು ವೈಮಾನಿಕರ ಪಾಲಕರು ೧೨

ಪೌರಾಣಪುರುಷರು ಶ್ರೀವನಮಾಲಾರಾಜಿತರು ಸುಂದರರು
ನಾರಾಯಣ ನರರಿವರು ಯಮುನೆಯ ತೀರವನಾಂತದಲಿಹರು
ಗೋರಕ್ಷಕರೊಡನೆ ಗೋಗಳ ಸಂಚಾರಿಸುವರು ದಿನದಿನದಿ
ಸೌರಭ ಕುಂಜದಿ ವೇಣುನಾದಿಸುವರು ನಾರಿಗೋಪಿಯರ ಸಖ್ಯದಿ ೧೩

ಗೋಪೀಜನರ್ತಪವೆಂತೊ ಪೂರ್ವದ ಗೋಪವೇಷದ ಶ್ರೀವರನ
ಆಪಾದನಖದ ಸೌಂದರ್ಯಾಮೃತವ ಪಾನ ಮಾಡುವರ್ ನಿಶಿದಿನ
ಅಪವರ್ಗದ ಸುಖವನುಂಬರು ಮೌನಿಜನೋಪಮರು ಶುಚಿವ್ರತರು ೧೪

ವೈಕುಂಠಧಾಮನ ಕೀರ್ತಿಯ ವಿಸ್ತಾರ ವಿಖ್ಯಾತಿಯ ಹೇಳುವರು
ಆಕಳಕರೆಸುತ ತೂಗುತ ತೊಟ್ಟಿಲ ತೋಕರ ನಿದ್ರೆಯಗೈಸುವರು
ಗೋಕನ್ನಿಕೆಯರ ಸುಕೃತವಿನ್ನೆಂತೊ ಸಕಾಲದಧಿಮಥನದಲ್ಲಿ
ಶ್ರೀಕೃಷ್ಣನ ಗುಣಕರ್ಮನಾಮಂಗಳನೇಕಸ್ವರದಿ ಪಾಡುತಲಿ ೧೫

ನೈಕೇತನ ಸಮ್ಮಾರ್ಜನ ಕಾಲದಿ ತ್ರೈಕಾಲ ಮಜ್ಜನದಲ್ಲಿ
ಏಕಾಂತ ಜನಪ್ರಿಯನಂಘ್ರಿಕಮಲಗಳಾಲೌಕಿಕ ಕೀರ್ತ್ನೆ ಹೇಳುವರು
ಶ್ರೀಕರ ಪುಣ್ಯವ್ರಜದ ಸ್ತ್ರೀಯರ ಸುಖವು ಕವಿಗಳ ಕವನಕ್ಕೆ
ಸಾಕಿನ್ನದು ಮತಿ ನಿಲುಕದು ಸ್ತೋತ್ರಕ್ಕೆ ಶ್ರೀಕೃಷ್ಣನ ಶುಭಲೀಲೆ ೧೬

ಧನ್ಯರು ಗೋಪ್ಯಾಳು ಕ್ರಮವಿಕ್ರಮನ ಚಿನ್ಮಯ ಗುಣಚರಿತೆಯ
ಕಣ್ಣವೆಯಿಕ್ಕದೆ ಕವಲಿದ ಭಕ್ತಿಯಿಂ ತನ್ಮನಸ್ಕೆಯರು ಸತಿಯರು
ಇನ್ನೊಂದವರಿಗೆ ಸಾಧನವೇತಕೆ ಮಾನ್ಯರು ಸುರಲೋಕಕ್ಕೆ
ಚಿನ್ನರ ಚೆಲುವ ಯಶೋದೆಯು ಮೊಲೆಯುಂಡ ಚಿನ್ನನ ದಯವಿರಲಿಕ್ಕೆ ೧೭

ಗಾಯತ್ರಿಗಳ ಬೆರಸಿ ಪ್ರಾತಃಕಾಲದಿ ಶ್ರೀಯದುಪತಿ ಹೋಗುವನು
ಸಾಯಂತನಿಯಲಿ ವೇಣುನಾದ ಸುತಲಿ ಪ್ರಿಯಾತ್ಪ್ರಿಯನೈದಿ ಬಹನು
ಸ್ತ್ರೀಯರು ನಾದಕೆ ಮೋಹಿಸಿ ಬಹರು ಶ್ರೀಯರಸನ ತುತಿಸಲಿಕ್ಕೆ
ದಯಾಪೂರ್ಣ ದೃಷ್ಟಿಯಲಿ ನೋಡುವ ಪರಿ ಮಾಯಾತೀತನು ಜಗಕೆ ೧೮

ಪ್ರಿಯೋಕ್ತಿಯನಾಡುವನು ಪುರಾಂಗನೆಗೆ ಶ್ರೇಯೋಪಮನೆನಿಸುವನು
ತೋಯಜನೇತ್ರ ವಿಬುಧ ನಾರಿಯರಿಗಚ್ಚರಿಯ ತೋರಿಸಿ ಮೋಹಿಪನು
ಈಯನುಸಂಧಾನದಿ ಸಭೆಯಲಿ ಸಾಧ್ವಿಯರು ಭಾಷಿಸಲಾಗೆ
ಶ್ರೀಯದುಪತಿ ಖಳನನು ಸಂಹರಿಪ ಉಪಾಯ ಮಾಡಿದನಾಗ ೧೯

ಆಗಚ್ಯುತನಿಗೆ ಕಲಿ ಚಾಣೂರನೊಳು ಯೋಗಿಸಿತು ಮಹಾಯುದ್ಧ
ನೇಗಿಲಗೈಯಗೆ ಮುಷ್ಟಿಕಗೆ ಯುದ್ಧಾಗಲು ರಂಗದ ಮಧ್ಯ
ಘೋಗಣಸ್ಥರಿಗಚ್ಚರಿಯಂ ಮದನಾಗಂಗಳ ಯುದ್ಧದಂತೆ
ಯೋಗೀಶೇಶ್ವರ ಚಾಣೂರನ ಮೈ ತಾಗಿದನು ಸಿಡಿಲಂತೆ ೨೦

ವಜ್ರೋಪಮಶ್ರೀಯಚ್ಯುತಗಾತ್ರದಿ ಜಜ್ಜಿಸಿಕೊಂಡ ಚಾಣೂರ
ಗರ್ಜಿಸಿ ಕೋಪದಿ ಗಗನಕೆ ಹಾರಿ ಬಂದಬ್ಜಾಕ್ಷನ್ನೈದಿದನಾದಿರ
ದುರ್ಜಯಸೇನನ ತೆರದಲಿ ಮುಷ್ಟಿಯಿಂ ಘರ್ಷಿಸೆ ರೋಷದಿ ಖಳನು
ನಿರ್ಜರರೊಡೆಯಗೆ ನೋವಾಗುವದುಂಟೆ ನಿರ್ಜೀವಖುಲ್ಲನು ಅವನು ೨೧

ಹರಿಯುಂ ಸೃಜಾಹತ ಕರಿಯಂತೊಪ್ಪುತ ದುರುಳನ ತೋಳ್ಗಳ ಹಿಡಿದ
ಗಿರಿಗಿರಿ ತಿರುಗಿಸಿ ಧರೆಗಪ್ಪಳಿಸಿದ ಸುರರಿಪುಹರ ಗೋವಿಂದ
ಸುರವರ ಚಾಪದೋಲ್ ಕೆಡೆದನು ಚಾಣೂರ ತ್ವರಿಯದಿ ಸೊಕ್ಕಿದ ಮಂದ
ಎರಡನೆ ಮುಷ್ಟಿಕ ಮೊದಲೆ ಬಲನ ಗಟ್ಟಿಸಿರಲು ಬಲನು ಕೋಪದಿಂದ ೨೨

ಕರದಲಿ ಬಡಿದನು ಕೋಪದಿಂ ಮುಷ್ಟಿಕ ಅರುಣಜಲವ ಕಾರುತಲಿ
ಹರಣವ ನೀಗಿದ ಉರುಳಿದ ಭುವಿಹೊಂದಿ ತರುಗಾಳಿ ಬಡಿದಂದದಲಿ
ಮರಳಿ ಕೂಟಾಖ್ಯನು ಬರಲು ಬಡಿದ ವಾಮಕರದಿಂದ ಬಾಲಲೀಲೆಯಲಿ
ಉರುಬಲ ತೋಸಲ ಶಾಸಲ ಛಲರನು ಚರಣದಿ ಕೆಡಹಿ ಶಿರಗಳ ೨೩

ತುಡಿದ ಕತ್ತರಿಸಿದ ಕರದಲಿ ತ್ರುಟಿಯೊಳು ಮುರ ಪೀತಾಂತಕ ಶೌರಿ
ಒದಗಲು ನಾಲ್ವರು ಪ್ರಮುಖರು ಮಲ್ಲರು ಸೋರಜುಮಲ್ಲರು ಓಡಿದರು
ಹರಿ ಗೋಪಕರೊಳುತ್ಸವದಲಿ ಕ್ರೀಡಿಸೆ ಚರಣನೂಪುರ ರಘಣತ್ಕರಿಸೆ
ಊರು ನಟಿಸಿದ ಹುತ್ತುರಿ ತಾಳದ ರವಹರಿ ಲಯವನು ಅನುಕರಿಸಿ ೨೪

ಶಿಷ್ಟರು ಕಂಡರಕ್ಲಿಷ್ಟರ ಕರ್ಮಕೆ ತುಷ್ಟಿಸಿ ಸಾಧು ಸಾಧು ಎನುತ
ದುಷ್ಟಕಂಸನ ಸಂಬಂಧಿಗಳೆಲ್ಲರು ಕಷ್ಟಿಸಿದರು ಬಳಲುತ
ವೃಷ್ಟಿಯಲಿ ನೋಡಿದ ಭೋಜಪ ಮಲ್ಲರ ನಷ್ಟರಾದರು ಓಡಿದರು
ಹೃಷ್ಟಿಗಳೆಮು ನಿಲ್ಲಿಸಿದ ವಾದ್ಯಂಗಳನಷ್ಟು ಪೇದಿಸಿ ಚಿತ್ತಭೀರು ೨೫

ಹರಹರಿದ್ವೇಷಿಗಳಿಗೆ ಜಯ ಸ್ವಪ್ನವು ದುರುವೃತ್ತನು ಭೋಜಪನು
ಹರಿದ್ವೇಷದ ಫಲವೊದಗಿತು ಎದೆ ಧಗಿಲ್‌ಗರೆದು ನಿಟ್ಟುಸಿರ ಬಿಡುವನು
ಒರೆ ವಿಟ್ಟತನದಲಿ ದುರ್ಬುದ್ಧಿಯುಳ್ಳಿದ ಸರಿದು ಪೋಗಿಹುದಾಯುಷ್ಯವು
ನೆರೆ ಉದ್ಧಟತನ ಬಿಡನು ಪಾಪಾತ್ಮನು ಮರುಳಿಟ್ಟು ಮರುಗುತೆ ಮನವು ೨೬

ಈ ದಿವ್ಯಾಮೃತ ಭಾಗವತ ದಶಮ ಬಾದರಾಯಣಿ ಪೇಳಿದನು
ಆದರದಲಿ ಸಮಿತ್ ಪಾಣಿಯು ಪರೀಕ್ಷಿತ ಬೋಧಕೆ ತಲೆದೂಗಿದನು
ಶ್ರೀಧವ ಪ್ರಸನ್ನವೆಂಕಟಕೃಷ್ಣನಗಾಧ ಲೀಲಾನ್ವಯ ಶ್ರವಣ
ಬೋಧಕರಿಗೆ ಬೋಧಿಸಿಕೊಂಡವರಿಗೆ ಮೋದಾಬ್ಧಿ ಸ್ನಾನ ಪಾನ ೨೭

## ೬೫

ರಾಗ : ಸೌರಾಷ್ಟ್ರ ತಾಳ : ಏಕತಾಳ

ಜಾತ ಕಂಸವಧಾರ್ಥನು ಪಾತಕಹರ ಸಮರ್ಥ
ಪೂತ ಚಾರಿತ್ರ ಲಕ್ಷ್ಮಿಯನಾಥ
ಘಾತಿಸಿದ ಕೌತುಕದಿ ಮಾತುಳನ ಭ್ರಾತರೊಡನೆ
ಆತತಾಯಿಯ ಭ್ರಾತೃಸಹನಾಥ ೧

ಭೋಜಪತಿ ತನ್ನ ಸೇವಕಜನಕೆ ಆಜ್ಞೆಯಿತ್ತ
ಗೋಜಂಗುಳಿಯ ಕಾವ ಅರ್ಭಕರೀ
ರಾಜಧಾನಿಯಿಂದ ನೂಕಿರೋ ಸತ್ವರೆ ೨

ನಂದಗೋಪನ ಗಟ್ಟಿ ಬಂಧಿಸಿರಿ ವಾರ್ಷ್ಣಿಯನು
ಎಂದ ಕಂಸ ಪಾಪಿಯು ದುರಾತ್ಮ
ತಂದೆ ಉಗ್ರಸೇನನವನ ಬಂಧು ಸಹ ಗೋಪಾಲ ಪಕ್ಷ
ಹೊಂದಿದವರನೊಂದನು ಪಾಪಾತ್ಮ ೩

ಕೊಂದು ಬಿಸುಟಿ(ಡಿ?) ಅಹಿತರನು ಎಂದು ಕಂಸ ಕತ್ತಿಸೆ
ಇಂದಿರೇಶ ಕೇಳಿದವ್ಯಯಾತ್ಮ
ನಿಂದ ರಂಗವ ಬಿಟ್ಟು ಹಾರ್ದು ಮುಂದವುತಿ ಭೋಜಪನು
ಹೊಂದಿದ ಮಂಚಕೆ ಪರಮಾತ್ಮ ೪

ಮೃತ್ಯು ಬಳಿಗೆ ಬಂದಿತೆಂದು ಕತ್ತಿವಿಡಿದು ಚರ್ಮಸಹ
ಸತ್ವರದಿ ಕಾವಲಸುವಾದ
ಅತ್ತ ಇತ್ತ ಎಡಬಲಕೆ ಸುತ್ತಾಡಿದ ಗಿಡಗನಂತು
ನೃತ್ಯನ ತೆಕ್ಕೆಯಲಿ ಹರಿ ಹಿಡಿದ ೫

ನಾಗನ್ನ ಕೊಂಡೋಡುವ ಗರುಡನ್ಹಾಗೆ ಕೇಶವನ ಮೇಲೆ
ಆಗೆ ಕೈಲಿ ಅವಚಿ ಅವನಿಯ ಮೇಲೆ
ಬೇಗುರುಳುಗೆಡಹಿದನು ಯೋಗಿನಾಥ ಅವನ ಮುಗುಟ
ನೀಗಿಸಿದನು ಕಬರಿವಿಡಿದನು ಕೃಷ್ಣ ೬

ಮಂಚದಿಂದ ರಂಗಭೂಮಿಗಿಳಿಕಿದ ಕೇಸರಿಯು ಮದ
ಅಂಚಿತ ಕರಿಯನು ಕೆಡಹಿದಂತೆ
ಮುಂಚಿಸಿದ ಕಂಸನಸುವ ಪಂಚಬಾಣನಯ್ಯ ಕೃಷ್ಣ
ಪಂಚಮಹಾಪಾತಕಿಯಂತೆ ೭

ಅಸುರಹರನ ಭಾರವಮಗೆ ವಿಶ್ವದಷ್ಟು ಭಾರವಾಗೆ
ಅಸುವ ನೀಗಿದನು ಶಿಕ್ಷೆಹೊಂದಿ
ವಸುಧೆಯಲ್ಲಿ ಬಿದ್ದವನ ಬಿಸಜನೇತ್ರ ಕಟ್ಟಿ ಎಳೆಸಿ
ಬಿಸುಡಿಸಿದ ಲೋಕವರ್ಯ ಜವದಿ ೮

ಖಳನು ಕೆಡೆದ ಬಳಿಕ ಜನದ ಕಳಕಳವು ಹೆಚ್ಚಿ ಹಾಹಾ
ಇಳೆಯ ಕಂಟಕವು ಹೋಯಿತೆಂದು
ಗೆಲುವಂಬಿವು ಸುಜನರಿಗೆ ಅಳುಮುಖಿವು ದುರ್ಜನರಿಗೆ
ಖಳಕಂಸಗೆ ಹರಿಭಯ ಹೀಗೆಂದು ೯

ನಳಿನಾಕ್ಷನ ಭಯದ ಧ್ಯಾನ ಬಲಿದಿಹುದು ಇರುಳು ಹಗಲು
ಜಲಪಾನದಿ ಉಣುತ ಉಡುತ ನಿಲುತ
ಮಲಗಿ ಸ್ವಪ್ನದಲ್ಲಿ ಮಾತುಗಳನು ಆಡುವಲ್ಲಿ ಚಕ್ರ
ಜಲಜಧರನ ಮುಂದೆ ಕಾಂಬ ನಿರುತ ೧೦

ಬಲು ಪಟುತರಾಭ್ಯಾಸದ ಬಲದಿಂದ ಭೃಗುಮುನೀಂದ್ರ
ಲಲಿತಗತಿಗೈದಿದ ಮಹಾತ್ಮಾ
ಸಲೆ ಹರಿಯ ವೈರಭಾವ ಬಲಿದ ಪಾಪಿ ಕಾಲನೇಮಿ
ನಿಲದೆ ತಮಸಕ್ಕೈದಿದ ದುರಾತ್ಮ ೧೧

ಅವನಿಪತಿ ಬೀಳಲಿಕ್ಕೆ ಅವನ ಬಂಧುಗಳೆಂಟು ಮಂದಿ
ಜವದಿ ಬರಲು ಬಲನು ಕೈಯಿಂದ
ಜವನ ಮನೆಗೆ ಕೊಂಪಟ್ಟಿದ ಬವಡೊಳಗೆ ಪರಿಘದಿಂದ
ಸವರಿಸಿದ ಉಳಿದ ಖಳರನ್ನೆಂದ ೧೨

ಪಶುಗಳನು ಸಿಂಹ ಕೊಂದು ಮೆಸೆವಂತೆ ನ್ಯಗ್ರೋಧಕಂಕ
ರಸುವ ಕಳೆಯೆ ಸುರರು ಅಂಬರದಿ
ಕುಸುಮವೃಷ್ಟಿ ಕರೆದರಾಗ ಅಸಮಾನ ತುಷ್ಟಿಯಹೊಂದಿ
ಲಸದ ದುಂದುಭಿ ಘೋಷಿಸಿದರ್ ಛಂದದಿ ೧೩

ಅಜಭವೇಂದ್ರಾದ್ಯಖಿಳರು ಅಂಬುಜನಾಭನ ಸ್ತೋತ್ರ ಮಾಡಿ
ಸುಜನರು ತೋಷಾಬ್ಧಿಯೊಳೋಲಾಡೆ
ತ್ರಿಜಗಾಧಾರ ಮುರಾರಿ ಕುಜನ ಕಾಂತಾರ ಕುಠಾರಿ
ಭಜಕರಭೀಷ್ಟೆಯ ಪೂರಣ ಮಾಡೆ ೧೪

ಕಂಸನಂಗನೇರು ಮತ್ತೆ ಧ್ವಂಸಿತ ಖಳಾಂಗನೇರು
ಹಿಂಸಿತ ಪತಿಗಳ ಬಳಿಗೆ ಬಂದು
ಪಾಂಸುಗಳ ತಮ್ಮ ತಲೆಗೆ ಹೊಸಿ ಹೊಯ್ದುಕೊಂಡು ಮರುಗಿ
ಶಂಸಕರ ಮೇಲೆ ಹೊರಳಿ ನೊಂದು ೧೫

ನೆತ್ತಿಗಳ ಭುವಿಗೆ ಗಟ್ಟಿಸುತ್ತ ಬಹುಶೋಕದಿಂದ
ಸತ್ತವರನು ಅಪ್ಪಿ ಗೋಳಿಡುತ
ಅತ್ತರು ಸಮಯದಶ್ರು ಒತ್ತಿಬರುತ ಕಂಗಳಿಂದ
ಸತ್ತೆವು ಕೆಟ್ಟೆವೆಂದು ಹೊರಳಾಡುತ ೧೬

ತರಿದಾಗಿ ಸತಿಯರೆಲ್ಲ ಉರವ ಜಠರ ಬಡಿದುಕೊಂಡು
ಮೊರೆಯೆ ಮರಳಿ ಮರಳಿ ದುಃಖಿರವ ಮರಳೆ
ಕರುಣವಿಲ್ಲವೆ ನಮ್ಮಲ್ಲಿ ಆರಸೆ ಸುಮ್ಮನೇಕಿರುವೆ
ತೆರೆದು ಕಣ್ಣ ಮಾತನಾಡು ತ್ವರಿಯ ೧೭

ಹಾ ಪತೆ ಪ್ರಿಯೋತ್ತಮನೆ ಕೋಪವೇಕೆ ತವ ವಿಯೋಗ
ದೀಪರಾವು ಭರ್ತೃಹೀನರಾಗಿ
ದೀಪಿಸುತಿದೆ ಅವನಿಪತೆ ಧರ್ಮಜ್ಞಪ್ರಭೊ
ಈ ಪರಿಯವಜ್ಞೆ ನಮಗೇಕೆ ೧೮

ಅಪರಾಧವಿಲ್ಲವರ್ಗೆ ತಾಪವಿತ್ತು ಬಾಧಿಸಿದುದಕೆ
ಈ ಫಲವನುಂಡೆ ಕೈಯಮೇಲೆ
ಪಾಪಬುದ್ಧಿಯಿಂದ ಕಾಲನ ಪಟ್ಟಣಕೆ ಐದಿಹೋದೆ
ಭೂಪನಾಗಿ ಪ್ರಾಣಿಗಳ ಮೇಲೆ ೧೯

ದಯವಿರಲು ಬೇಕು ನೀ ನಿರ್ದಯನಾಗಿ ಮಡಿದೆಯಲಾ ನಿ
ಶ್ಚಯವೈ ಜನನ ಮರಣ ದೇಹಿಗಳ್ಗೆ
ಅಯ್ಯೋ ವ್ಯರ್ಥ ಸತ್ತೆಯಲಾ ತ್ವದೀಯ ಜನ್ಮಭೂತದ್ರೋಹ
ವೈಯುಂಡು ಪೋದೆಯಲೊ ನರಕಕೀಗ ೨೦

ಜನಕಗೆ ದುಃಖವಿತ್ತ ನೃಪಗೆ ಕನಸಿನಲಿ ತೋರದು ಸುಖ
ವೆನುತ ರೋದಿಸಲು ಶ್ರೀಕೃಷ್ಣ
ಘನ ಕೃಪೆಯ ನುಡಿಗಳಿಂದ ವನಿತೆಯರ್ ಶೋಕ ನಿಲಿಸಿದನು
ಜನಕಜನನಿಯರ್ ಬಂಧ ಮೋಚಿಸಿದ ೨೧

ದಿನಕೆ ಹಿರಿಯರಿಗೆ ನಮಿಸಿ ವಿನಯವಾಕ್ಯಾಮೃತವನುಣಿಸೆ
ಜನನಿ ಜನಕ ಜನರೆಲ್ಲ ತಿಳಿದರು
ತನಯರಿವರು ಭುವನೇಶರು ಮನುಜರಲ್ಲ ನಮ್ಮ ಮಕ್ಕ
ಳೆನುವ ಸ್ನೇಹವನ್ನೆ ಮರೆದರು ೨೨

ತನಯರನ್ನು ಅಪ್ಪಿದರು ಮನದಿ ಭಯವ ಹಿಡಿದು ಜಗ
ಜ್ಜನಕರೆಂದು ತಿಳಿದು ಮಾತನಾಡೆ
ಸನಕಾದೀಡ್ಯ ತನ್ನ ಮಾಯವನು ತಳೆದು ಮೋಹಿಸಿದ
ವಿನಯಮತಿಯು ವಾಕ್ಯದಲ್ಲಿ ಹುಚ್ಚುಮಾಡಿ ೨೩

ಜನವಿಡಂಬ ವಿಶ್ವಬಿಂಬ ತನಯರೆಂಬ ಹಂಬಲಿತ್ತ
ಘನಸ್ನೇಹವ ತೋರ್ದನು ಮುರಾರ್ದ
ಜನಕ ಜನನಿಯ ಧ್ಯಾನವು ಜನಿಸೆ ನೀವು ನೊಂದಿರಲ್ಲ
ಜನಿಸಿದಂದಿಗಿಂದಿಗೆಂದ ದಯಾರ್ದ್ರ ೧೪

ವಂದಿಸಿದ ಬಲನ ಕೂಡಿ ತಂದೆ ತಾಯಿಗಳಡಿಗಳಿಗೆ
ಹೊಂದಿ ವಿನಯವಾಂತ ಸಾತ್ವತೇಶ
ನಂದಜೋದ್ಭವೇಂದುವಂಶೀವೀಂದ್ರಾಹೀಂದ್ರ ಇಂದ್ರಸ್ಮರ
ರಿಂದ ಮುಕ್ತಾಮುಕ್ತರ್ಗೀಶ ೧೫

ಅಂಬ ತಾತ ಎಂದು ತನ್ನ ಹಂಬಲವ ಪಟ್ಟ ಕೃಷ್ಣ
ಕುಂಭಿನಿಯ ಲೋಕಕ್ಕೆಲ್ಲ ದೇವ
ಲಂಬಿಸಿದ ಸುಜ್ಞಾನಿಕುರುಂಬಕೆ ತೋರಿತು ಈ ವಿ
ಡಂಬು ಅಂಬುಜನೇತ್ರನ ಭಾವ ೧೬

ಕಷ್ಟಿಸಿದಿರಲ್ಲ ನಾವು ಹುಟ್ಟಿದಂದಿಂದೀಗೆ ನೀವು
ದುಷ್ಟಕಂಸ ನಷ್ಟವಾಗಿ ಹೋದ
ಕಷ್ಟಬಡಿಸಿದನು ನಿಮ್ಮದಿಷ್ಟ್ಯ ಹತನಾದ ನಮ್ಮ
ಪುಟ್ಟ ಪೌಗಂಡ ಕೈಶೋರತನದಿ ೧೭

ಲೀಲೆಯ ನೋಡುವ ಭಾಗ್ಯ ವೇಳೆ ವೇಳೆ ತಂದೆತಾಯಿಗೆ
ಮೂಲ ಸುಕೃತದ ಫಲವೆಲ್ಲ
ಬಾಲನಾವು ಪರಾಧೀನದಿ ಕಾಲಗಳೆದೆವು ವನದಲ್ಲಿ
ಲಾಲಿಸಿಕೊಂಬುವ ಭಾಗ್ಯವಿಲ್ಲ ೧೮

ಸ್ವರ್ಗಸುಖವು ಜನನಿಜನಕರ್ಗೆ ಮಕ್ಕಳಾಟ ನೋಡಿ
ಹಿಗ್ಗುವುದು ಪೂರ್ವಪುಣ್ಯಫಲವು
ಅಗ್ರಜನ್ನಕೂಡಿ ವನದಿ ಅನರ್ಘ್ಯಆಟವಾಡಿದೆವು
ದೃಗ್ಗಳಿಂದ ಕಾಣಲಿಲ್ಲ ನೀವು ೧೯

ಪಾಲು ಬೆಣ್ಣೆ ಇಕ್ಕಿ ಆಭರಣಗಳನ್ನಿಟ್ಟು ಬರುವಂತಂಬೆ
ಗಾಲಿಕ್ಕಿಸಿ ವಲ್ಗುವಾಕ್ಯ ಕೇಳಿ
ಲಾಲಾಂಕಿತ ವದನರದನಸಾಲು ನೋಡಿ ಮುದ್ದುಕೊಡುವ
ಬಾಲೆ ಧನ್ಯಳು ಪುಣ್ಯಸುಶೀಲೆ ೨೦

ಇಂಥ ತಾಯಿತಂದೆಗಳಿಗೆ ಅಂತ್ಯಕಾಲ ವಾರ್ಧಕ್ಯದಿ
ಸಂತೋಷದಲಿಟ್ಟವನೆ ಪುತ್ರ
ಸಂತವುಪಂತರೊಳತ್ಯಂತ ಪೂಜ್ಯನಹನವನು
ಚಿಂತಿಸಿದರ್ ನಾವು ಹುಟ್ಟಿ ವ್ಯರ್ಥ ೩೧

ಪಿತೃವರ್ಗ ಬಹು ಸುಖವಿತ್ತವನೆ ಜೀವನ್ಮುಕ್ತ
ಚಿತ್ತ ಖೇದ ಪಾಳ್ವ ಜೀವತ್ತ್ರೀತ
ಹತ್ತೆಂಟು ಸಾವಿರವರುಷ ತುತ್ತಿಟ್ಟು ಸ್ವಮಾಂಸವನುಂಬ
ಓತ್ತೇಳಂತ ನಿರಯದಲ್ಲಿ ವಂಘ ೩೨

ವೃದ್ಧಾಪ್ಯಕಾಲದಿ ಪಿತೃ ವೃದ್ಧರನ್ನು ಗುರುಗಳನ್ನು
ಸಾಧ್ವಿಪತ್ನಿ ಶಿಶುಗಳ ವಿಪ್ರರನ್ನು
ಇದ್ದಷ್ಟು ಪ್ರಪನ್ನರನ್ನು ಪೊದ್ದಿದವರ ಸಾಕದಿಪ್ಪ
ಬುದ್ಧಿಹೀನ ಸೇರುವನು ನರಕವನು ೩೩

ಭೋಜಪನುಪದ್ರವಕೆ ಪೂಜಿಸಲಿಲ್ಲ ನಿಮ್ಮನು
ಈ ಜನ್ಮ ವ್ಯರ್ಥವಾಯಿತಯ್ಯ
ಆ ಜನನಿ ಜನಕರಿಗೆ ತೇಜೋಮಯ ಕ್ಷಮಿಸಿರೆಂದು
ರಾಜೀವಜಜನಕ ಮುಗಿದ ಕೈಯ ೩೪

ನಿಮ್ಮ ಶುಶ್ರೂಷಣವ ಮಾಡಿ ಒಮ್ಮೆ ತುಷ್ಟಿಬಡಿಸಲಿಲ್ಲ
ನಮ್ಮ ಸ್ವಾತಂತ್ರ್ಯವಿಲ್ಲದೆ ಅಂದು
ನಮ್ಮಧರ್ಮ ಕ್ಷಮಿಸಿರೆಂದು ಅಪ್ಪ ದೇವಕಿ ವಸುದೇವನಿಗೆ
ನಮ್ಮಿಸಿದ ಕೃಷ್ಣ ಅಗ್ರಜನಿಂದ ೩೫

ವಿಧಿಭವೇಶ ವಿಶ್ವಾಂತರ್ಯ ವದಿಸಿದ ಮನುಷ್ಯಜನರು
ವದಿಸಿದಂತೆ ತಾಯಿತಂದೆಗಳಿಗೆ
ಸದಮಲ ಮಾಯದಳೆದು ಮೋಹಿಸಿದ ದೇವಕಿಗೆ
ಮುದವಿತ್ತಂಕದಲ್ಲಿ ಕುಳಿತ ಬ್ಯಾಗೆ ೩೬

ತೋಷಾಬ್ಧಿಯಲಿ ಮುಳುಗಿದರು ಶೈಶುಲೀಲೆಯ ಮಕ್ಕಳಪ್ಪಿ
ಮೂಸಿನೋಡಿದರು ಮಸ್ತಕವನು
ಸೂಸಿದರು ಅಶ್ರುಸ್ನೇಹಪಾಶದಿಂದ ಬಾಷ್ಪಕಂಠ
ಭಾಷೆ ಗದ್ಗದದಂತೆ ಮೋಹಿಸಿದರು ೩೭

ಅಶ್ರುಧಾರೆ ಸುರಿಸುತ್ತ ಆ ಶೌರಿ ದೇವಕಿವೇಪಿ
ಶಾಶ್ವತ ಮಕ್ಕಳೆಂದು ತಿಳಿದರು
ವಾಸುದೇವ ಬಲರಾಮರು ಕೂಸುಗಳಂತೊಂದಿಸಿದರು
ವಿಶ್ವವಂದ್ಯರ್ ವಿಶ್ವಕೆ ಮೋಹಕರು ೩೮

ದುಷ್ಟಮಥನ ಪುಣ್ಯಕಥನ ಶಿಷ್ಟಪಾಲ ಶ್ರೀಭೂಲೋಲ
ಕೃಷ್ಣಬಲರು ಉಗ್ರಸೇನನಿಗೆ
ತುಷ್ಟಿಯಿಂದ ವಂದಿಸಲು ಅಷ್ಟು ಜನಕಾಶ್ಚರ್ಯ
ವೃಷ್ಟಿಗಾಗೆ ಸೃಷ್ಟಿಕರ್ತನಾಗೆ ೩೯

ಈ ಸತ್ಕಥೆಯ ಪೇಳಿದನು ವ್ಯಾಸಸೂನು ನೃಪವರಗೆ
ಶ್ರೀಶನೊಲುಮೆ ಅತುಲಾಭವಾಗೆ
ಪ್ರಸನ್ವೆಂಕಟದಾಸರಿಗೆ ಲೇಸು ಲೇಸು ಲೇಸು ಸರ್ವ
ದಾ ಸುಖವು ಹೇಳಿ ಕೇಳಿದವರಿಗೆ ೪೦

## ೬೬

**ರಾಗ : ಶಂಕರಾಭರಣ** **ತಾಳ : ಅಟ್ಟ**

ಅಮ್ಮಮ್ಮ ಹರಿಯ ವಿಚಿತ್ರ ಚರಿತ್ರ
ಧರ್ಮರಕ್ಷಕ ಭಕ್ತಸಮೂಹಮಿತ್ರ ಪ.

ಬ್ರಹ್ಮರುದ್ರೇಂದ್ರಾದಿ ಸುಮನಸರಿಗೆಲ್ಲ ಉಮ್ಮಯ ಪದವೀವ ರಮ್ಮೇಶನು
ತಮ್ಮ ಮಾತ್ರದ್ಯೆಗೆ ಹೆಮ್ಮೆಯನಿತ್ತನು ತಾ ಮತ್ತೆ ದೌತ್ಯದ ಕರ್ಮ ವಹಿಸಿದ ೧

ಉರ್ವಿಮಂಡಲಕರಸನ ಮಾಡಿ ಪಟ್ಟವಿತ್ತೂರ್ವಿಪಾಲಕರು ಕಪ್ಪವನೀವಂತೆ
ಸರ್ವೇಶ್ವರ ಕೃಷ್ಣ ಸರ್ವರಿಗಾಜ್ಞಾಪಿಸಿದ ಗರ್ವ ಖಂಡಿಸಿದನು ಗರ್ವದ ಖಳರ ೨

ಪೂರ್ವದಿ ಯಯಾತಿಯು ಶಾಪದಿಂ ಯದುವಂಶಕರ್ಹತೆಯಿಲ್ಲರಸುತನಕೆಂದು
ಸರ್ವಜ್ಞತ್ವ ವ್ಯಕ್ತ ಮಾಡಿದ ಪುರಹರ ನಿರ್ವಾಣೀಯ ಸಮರ್ಥ ಪರಾರ್ಥ ೩

ಹೀಗೆ ನೇಮಿಸಿ ಪವನಂಗೆ ಯೋಗಿಸಿ ಶತಯಾಗಗೆ ಆಜ್ಞೆ ನಿರೂಪಿಸುತ
ಬೇಗನೆ ತರಿಸಿದ ಸುಧರ್ಮ ಸಭೆಯ ನಿಯೋಗಿಸಿ ನೃಪಶಾಸನವಿತ್ತಜ್ಜನಿಗೆ ೪

ಪಾತಕಿ ಕಂಸನ ಭಯದಿಂದೋಡಿಹೋದ ಪೂತಜೀವರ ಯಾದವರನ್ನೆಲ್ಲ
ಆತುರದಿ ಕರೆಸಿದ ದೀನವತ್ಸಲ ಕೃಷ್ಣ ಪ್ರೀತಿಯಲಿ ಸ್ವಸ್ಥಾನದಲ್ಲಿಟ್ಟನವರ ೫

ದಾಶಾರ್ಹ ವೃಷ್ಣಿ ಅಂಧಕ ಮಧು ಕುಕ್ಕುರರು ಸಾತ್ವತರು ಕುಲಬಂಧುಗಳು
ದೇಶಾಂತರದಿ ಬಳಲಿ ಕರೆಸಿ ತಂದವರ ವಾಸುದೇವ ಸೌಖ್ಯದಲ್ಲಿಟ್ಟು ಬದಳ ೬

ಶ್ರೀಶನ ನೇಮದಿ ಸೌಖ್ಯದ ಕಂಡು ಶಯ್ಯಾಸನ ಮೃಷ್ಟಾನ್ನಪಾನದಲಿ
ಈಶನಾಸ್ಯಾಬ್ಜಪೀಯೂಷದ ದಾವಾಗ ಆಸ್ವಾದಿಸಿದರು ಜೀವನ್ಮುಕ್ತರವರು ೭

ಸಂಸೃತಿ ಭಯವೇಕೆ ದ್ವೇಷಿಗಳಾತಂಕ ಲೇಶ ಕಾಣಲಿಲ್ಲ ಸ್ವಪ್ನದಲ್ಲಿ
ತೋಷವೆಗ್ಗಳ ದಿನದಿನದಲಿ ಕೃಷ್ಣ ಸಂಭಾಷಣೆ ಸಹವಾಸ ಅಪವರ್ಗವಾಸ ೮

ಅನಂತಗುಣನಾಮ ಪೂರ್ಣನು ಮುಕ್ತೇಶ ತಾ ನಾಲಿಗೆಯಲಿ ನಿಂತು ನುಡಿಸಿದನು
ಪ್ರಾಣೇಶ ಪ್ರೇರಣೆಯ ಪ್ರಾಕೃತಪದ ಜ್ಞಾನಿಗಳಿಗೆ ಸಮ್ಮತ ಖಳರಿಗಲ್ಲ ೯

ಈ ದಶಮಸ್ಕಂಧ ಭಾಗವತ ಪೂರ್ವಾರ್ಧವು ಮೇದಿನಿಯಲಿ ಹೇಳಿಕೇಳಿದರ್ಗೆ
ಯಾದವಕುಲರತ್ನ ಸರ್ವಪುರುಷಾರ್ಥವ ಸಾಧಿಸಿಕೊಡುವ ಸತ್ಯವು ನಿತ್ಯ ೧೦

ಪ್ರಸನ್ನಚಾರಿತ್ರ ಪ್ರಸನ್ನಶೋಭನವಕ್ತ್ರ ಪ್ರಸನ್ನಾಪಾಂಗನೇತ್ರ ಪ್ರಸನ್ನಗಾತ್ರ
ಪ್ರಸನ್ನವೆಂಕಟಕೃಷ್ಣ ಪ್ರಸನ್ನನಾದರೆನಿತ್ಯಪ್ರಸನ್ನತರೋಕ್ತಿಬಾಹವು ಭಕ್ತ
ಜನಕೆ ೧೧

## ೬೭

ರಾಗ : ಮಾಳವ ಶ್ರೀ ತಾಳ : ಅಟ್ಟ

ಜಯ ಜಯ ರಂಗಗೆ ಜಯ ದೇವೋತ್ತುಂಗಗೆ
ಜಯ ಯದುಪುಂಗವಗೆ ಜಯ ಶ್ರೀಸಂಗಗೆ ಪ.

ಪೊದ್ದಿ ಯದುಕುಲ ಸಾರ್ದ ಗೋಕುಲ ಶುದ್ಧ ತಾಯಿಮೊಲೆ ಮೆದ್ದ
ಶೀರ್ದ ಬಕಿಯನು ಬಿದ್ದ ಶಕಟನ ಉದ್ಧಟನಿಲನ ಮರ್ದ
ಮುದ್ದುವದನದಿ ತೋರ್ದ ಭುವನವ ಸಿದ್ಧ ಗೋರಸ ಕದ್ದ
ವರ್ಧಿಸಿದ ಬಲಭದ್ರನೊಡನೆ ಅಲ್ಲಿದ್ದ ನಿತ್ಯ ಪ್ರವೃದ್ಧ ೧

ಗೋಪಿಯಶೋದೆಗೆ ಗೋಪನಂದಗೆ ಮಹಾಪರಮಲೀಲೆ ತೋರ್ಪ
ಗೋಪಜನರಿಗೆ ಗೋಪಿಕೆಯರಿಗೆ ಶ್ರೀಪತಿ ಸುಖನು ಅಪ್ಪ
ಶಾಪದಲಿ ತರುರೂಪರಾದ ಧನದಪುತ್ರರ ಉದ್ಧರಿಪ
ಸುಪವಿತ್ರ ರೋಮಕೂಪದಿ ವೃಕ್ಷಚಕೂಪವಮ ಪೊತ್ತಾಧಿಪ ೨

ವೃಂದಾವನದಲಿ ನಂದರಾಜನ ಬಂಧುಗಳ ಸಹ ನಿಂದ
ಚಂದದಲಿ ವತ್ಸವೃಂದ ಕಾಯಿದ ಬಂದ ವತ್ಸಬಕ[ರ] ಕೊಂದ
ಮಂದ ಧೇನುಕನ ಛೇದಿಸಿದ ಸವಿರಿಂದ ತಾಳ್ಪಣ್ಣು ತಿಂದ
ಅಂದದಲಿ ಗೋಪರ್ ತಂದ ಬರ್ಹಾಪೂಗಳಿಂದ ಪೂಜಿತಗಂಧ ೩

ಶ್ರೀಶ ನಟನಟವೇಷ ಗೋಗಣಪೋಷಕಾನಂದಕೋಶ
ಆಶೀವಿಷನತಿಕ್ಲೇಶಬಡಿಸಿ ಸಂತೋಷವಿತ್ತ ಗತಾಯುಸ
ವಶನಾದಂದದಿ ಯೋಷಿಜ್ಜನರ ಮೋಹಿಸಿ ಕಾಮಜ್ವರನಾಶ
ಗ್ರಾಸವಮಾಡಿ ಹುತಾಶನನ ಗೋಪಗೋಸಮೂಹ ರಕ್ಷಕೇಶ ೪

ಚಂಡ ಪ್ರಲಂಬನ ದಂಡಿಸಿದ ವ್ರಜ ಮಂಡಲೇಶ್ವ ಯದುಶೌಂಡ
ಹಿಂಡು ಗೋವರ್ಸಹ ಉಂಡು ಯಾಜಿಗಳ ಹೆಂಡಿರನು ತಂಡ ತಂಡೆ
ಚಂಡಿಕಾರ್ಚಕ ಮಿಂಡೆರ್ ವಸನೆತ್ತಿಕೊಂಡು ಮರವೇರ್ದ ಪುಂಡ
ಖಂಡಲನ ಮದ ಖಂಡಿಸಿದ ಗಿರಿಚಂಡು ಮಾಡಿದ ಪ್ರಚಂಡ ೫

ಇಂದಿರೇಶ ಸುಧಾಸಾಂದ್ರ ವೇಣುಸ್ವನದಿಂದ ಗೋಪೇರೆಲ್ಲರ ತಂದ
ಚಂದ್ರನುದಯದಿ ಚಂದ್ರಮುಖಿಯರು ಕಂದರ್ಪನ ಶರದಿಂದ
ನೊಂದು ಮೋಹಿಸಲಂದು ರಾಸಕ್ರೀಡೆ ಹೊಂದಿಸಿದ ಪೂರ್ಣಾನಂದ
ಬಂದಿಗೆಂದಿಗೆ ದೊಂದ ಸ್ವರೂಪ ಶ್ರೀಮುಕುಂದ ಸಚ್ಚಿದಾನಂದ ೬

ತಂದೆಯನು ನುಂಗಬಂದಜಗರಗೆ ನಂದವಿತ್ತ ಗೋವಿಂದ
ಚಂದ್ರಿಕೆಯೊಳು ಮದಾಂಧ ಶಂಖಚೂಡ ಇಂದುಮುಖಿಯರೊಯ್ಬಂದ
ಅಂದವ ಸೀಳಿ ಮುದಗಮನೆರ ಚಂದದ ವೇಣುಗೀತೆಯಿಂದ
ನಂದಿಸಿದ ಚಿದಾನಂದ ಕೇಶಿವ್ಯೋಮರ್ ಛೇದಿಸಿದ ಸುಖಸಾಂದ್ರ ೭

ನಾರದೇಡ್ಯನಕ್ರೂರ ಮತದಲಿ ತೇರನೇರಿ ಮಧುರಾ
ಪುರಕೈದಿದ ಧೀರ ದಾಮ ಮನೋಹರ ತ್ರಿವಕ್ರೋದ್ಧಾರ
ಘೋರ ಧನುಷವಿದಾರ ಗಜಚಾಣೂರಮಲ್ಲಸಂಹಾರ
ಕ್ರೂರ ಕಂಸಕುದಾರ ವಸುಧಾಭಾರಹರ ಯದುವೀರ ೮

ಪೆತ್ತವರ ಆಪತ್ತುಹರ ತನ್ನ ಮುತ್ತನಿಗೆ ಪದವಿತ್ತ
ಮತ್ತೆ ಯಾದವ ಮೊತ್ತಕತಿಸುಖದಾತ ಘನಸಮರ್ಥ
ಇತ್ತ ನಂದನ ಹಟ್ಟಿಗಟ್ಟಿದ ಉತ್ತಮೋದ್ಧವಕರ್ತ
ಪಾರ್ಥ ಕುಶಲಗೆ ಹಸ್ತಿನಾಗರಕೆ ಅತ್ತಕ್ರೂರಗಾಜ್ಞೆಯನಿತ್ತ ೯

ಕ್ರೂರಯವನಸಂಹಾರ ಮುಚುಕುಂದೋದ್ಧಾರ ದ್ವಾರಕಮಂದಿರ
ಧಾರುಣಿಯ ನೃಪವೀರರನು ಗೆದ್ದು ಭೂರಿದ್ರವ್ಯಾಪಹಾರ
ನಾರಕ ಮುರಾದಿ ಚೋರರ ಬಡಿದ್ಹೊಂತಕಾರಿ ನಿಜರ್ಗುಪಕಾರಿ
ವಿಹಾರಿದ್ವ್ಯಷ್ಟ ಸಾಸಿರ ನೂರೆಂಟು ನಾರೇರಾಳ್ದ ಗಂಭೀರ ೧೦

ಪಾರಿಜಾತ ಸತ್ಯಾರಮಣಿಗಿತ್ತು ಭೂರಿನೇತ್ರಮದಹರ
ಘೋರ ನೃಗಪಾಪಹಾರ ಸ್ಯಮಂತಪ ಕ್ರೂರಗಿತ್ತ ಉದಾರ
ಹಾರುವರಿಗೆ ಕುಮಾರರನು ಕೊಟ್ಟ ಕಾರುಣಿಕ ಸುಖಿಸಾರ
ವಾರಿಜೋದ್ಭವ ಕೌರವರಹರ ಮಾರಾದ್ಯಖಿಳಾಧಾರ ೧೧

ದಂತವಕ್ರ ಪೌಂಡ್ರಕಾಂತಕ ಖಿಳಧ್ವಾಂತ ಭಾನು ಪ್ರಕಾಶಾಂತ
ಕುಂತಿಪುತ್ರರತ್ಯಂತ ಸಂರಕ್ಷಕಚಿಂತ್ಯ ಶಕ್ತ್ಯಾನಂತ
ಕಾಂತ ರಾಜಸೂಯಾಂತಪೂಜ್ಯ ಸ್ವತಂತ್ರ ಮೋಕ್ಷ ಸುಪಂಥ
ಭ್ರಾಂತ ಚೈದ್ಯ ನಿಕೃಂತ ಸಂತತದಾಂತ ವಿಶ್ವನಿಯಂತ ೧೨

ಹೀನಕೌರವ ಕ್ಷೀಣಕಾರಣ ಕ್ಷೋಣಿಭಾರಘ್ನ ಪ್ರವೀಣ
ಜ್ಞಾನಾನಂದ ಬಲಾನ್ಯೂನ ಅನಾದ್ಯಸಮಾನವರ್ಧಿತ ದೀನ
ಮೌನಿಜನಪ್ರಿಯ ಧ್ಯಾನಪ್ರಿಯ ಸತ್‌ಗಾನಪ್ರಿಯ ಪೂರಣ
ಧೇನುಗಿರಿಪತಿ ವೇಣುಗೋಪ ಪ್ರಸನ್ನವೆಂಕಟ ಕಾರಣ ೧೩

## ಅನುಬಂಧ ೧

# ಪೂರ್ವಕಥೆಗಳು ಮತ್ತು ಟಿಪ್ಪಣಿಗಳು

**ದಾಶಾರ್ಹ :** (ಕೀ. ೧, ನು. ೩)

ದಾಶಾರ್ಹನೆಂಬ ಯಾದವ ವಂಶದಲ್ಲಿ ಹುಟ್ಟಿದವನು, ಕೃಷ್ಣ.

**ಗೃಹತ್ರಯ** (ಕೀ. ೨, ನು. ೪)

ವೈಕುಂಠ, ಅನಂತಾಸನ, ಶ್ವೇತದ್ವೀಪಗಳೆಂಬ ಮೂರು ಮನೆಗಳುಳ್ಳವನು ವಿಷ್ಣು.
(ಕೀ. ೨೬, ನು. ೧)

**ನ್ಯಗ್ರೋಧ ಪತ್ರಾಸನ :** (ಕೀ. ೩, ನು. ೧)

ಪ್ರಳಯ ಕಾಲದಲ್ಲಿ ವಿಷ್ಣು ತನ್ನ ಸೃಷ್ಟಿಯೆಲ್ಲವನ್ನು ತಾನೇ ನುಂಗಿ ಮುಂದೆ ಸೃಷ್ಟಿ ಕಾಲದವರೆಗೂ ಅವರನ್ನು ತನ್ನ ಹೊಟ್ಟೆಯಲ್ಲಿ ನಿದ್ರಾವಸ್ಥೆಯಲ್ಲಿಟ್ಟಿರುತ್ತಾನೆ. ಲಕ್ಷ್ಮೀದೇವಿ ವಟಪತ್ರರೂಪಿಯಾಗಿ ಅವನನ್ನು ಸೇವಿಸುತ್ತಿರುತ್ತಾಳೆ. ಆ ಎಲೆಯಲ್ಲಿ ಬಾಲರೂಪಿ ವಿಷ್ಣು ತನ್ನ ಕಾಲ ಹೆಬ್ಬೆರಳನ್ನು ಚೀಪುತ್ತ ಮಲಗಿರುತ್ತಾನೆಂಬ ಕಲ್ಪನೆ. (ಹ. ಘೀ. ಹಾ, ಪ್ರ. ೬೦೦)
(ಕೀ. ೧೩, ನು. ೧೪)

**ಪಂಚಾತ್ಮ :** (ಕೀ. ೩, ನು. ೨)

ಪ್ರದ್ಯುಮ್ನ, ಅನಿರುದ್ಧ, ಸಂಕರ್ಷಣ, ವಾಸುದೇವ, ನಾರಾಯಣ-ಈ ಐದು ರೂಪಗಳುಳ್ಳ ವಿಷ್ಣು.

**ದ್ವಿಷಡಾತ್ಮ :** (ಕೀ. ೩, ನು. ೨)

ಕೇಶವಾದಿ ೧೨ ರೂಪಗಳುಳ್ಳ ವಿಷ್ಣು. (ಮು. ೫೨, ಕೀ. ೬೭ ಟಿಪ್ಪಣಿ)

**ದಶಶತಸಹಸ್ರಾಂಶದಿ :** (ಕೀ. ೩, ನು. ೨)

ಮತ್ಸ್ಯ, ಕೂರ್ಮ, ವರಾಹಾದಿ ಹತ್ತು ರೂಪಗಳಿಂದ, ನಾರಾಯಣಾದಿ ನೂರು ರೂಪಗಳಿಂದ ವಿಶ್ವ, ವಿಷ್ಣು ಮೊದಲಾದ ಸಾವಿರ ರೂಪಗಳಿಂದ ಇರುವವನು.

(ವಿವರಗಳಿಗೆ ನೋಡಿ : ಶ್ರೀ ವಿಷ್ಣು ಸಹಸ್ರನಾಮ)

**ಘನಶ್ರುತಿಹರನೊದ್ದ :** (ಕೀ. ೩, ನು. ೪)

ಬ್ರಹ್ಮನು ನಿದ್ದೆಯಲ್ಲಿದ್ದಾಗ ಆತನ ನಾಲ್ಕು ಬಾಯಿಗಳಿಂದ ಹೊರಬರುತ್ತಿದ್ದ ವೇದರಾಶಿಯನ್ನು ಹಯಗ್ರೀವನೆಂಬ ರಾಕ್ಷಸನು ಅಪಹರಿಸಿ ಪ್ರಳಯಜಲದಲ್ಲಿ ಅಡಗಿದ್ದಾಗ ಹರಿಯು ಮತ್ಸ್ಯರೂಪದಿಂದ ಬಂದು ಅವನನ್ನು ಕೊಂದು ವೇದಗಳನ್ನು ಮರಳಿ ತಂದನು. ಹರಿಯ ದಶಾವತಾರಗಳಲ್ಲಿ ಇದು ಮೊದಲನೆಯ ಅವತಾರ. (ಭಾ. ಸ್ಕಂ. ೮, ಅ. ೨೪)
(ಕೀ. ೮, ನು. ೫) (ಕೀ. ೧೯, ನು. ೪) (ಕೀ. ೫೭, ನು. ೨೩)

**ಗಹನಾಬ್ಧಿ ಮಥಿಸಿದ :** (ಕೀ. ೩, ನು. ೪)

ಹರಿಯು ಕೂರ್ಮಾವತಾರವನ್ನು ಕುರಿತು ಈ ಮಾತು ಬಂದಿದೆ. ಅಮೃತಕ್ಕಾಗಿ ದೇವಾಸುರರು ಕ್ಷೀರಸಮುದ್ರವನ್ನು ಕಡೆಯುತ್ತಿದ್ದಾಗ, ಕಡಗೋಲಾಗಿದ್ದ ಮಂದರಪರ್ವತ ಭಾರದಿಂದ ಮುಳುಗಲಾರಂಭಿಸಿತು. ಆಗ ಹರಿ ಕೂರ್ಮಾವತಾರಿಯಾಗಿ ಬಂದು ಮಂದರಪರ್ವತವನ್ನು ತನ್ನ ಬೆನ್ನ ಮೇಲೆತ್ತಿಕೊಂಡು ನಿಂತು ಸಮುದ್ರಮಥನಕ್ಕೆ ಸಹಾಯಕನಾದನು. (ಭಾ. ಸ್ಕಂ. ೮, ಅ. ೭)

(ಕೀ. ೮, ನು. ೫) (ಕೀ. ೧೯, ನು. ೪) (ಕೀ. ೫೭, ನು. ೨೪)

**ಅವನಿಯ ಕದ್ದನ ಸೀಳ್ದ :** (ಕೀ. ೩, ನು. ೪)

ಇದು ಹರಿಯ ಮೂರನೆಯ ಅವತಾರವನ್ನು ಕುರಿತ ಮಾತಾಗಿದೆ. ಹಿರಣ್ಯಾಕ್ಷನೆಂಬ ರಾಕ್ಷಸ ಭೂಮಿಯನ್ನು ಚಾಪೆಯಂತೆ ಸುತ್ತಿಕೊಂಡು ಸಮುದ್ರದ ತಳಕ್ಕೆ ಒಯ್ದಾಗ ಹರಿ ವರಾಹರೂಪದಿಂದ ಬಂದು, ಅವನನ್ನು ಕೊಂದು ಭೂಮಿಯನ್ನು ತನ್ನ ಕೋರೆದಾಡೆಗಳಿಂದ ಎತ್ತಿ ತಂದನು.

(ಭಾ. ಸ್ಕಂ. ೩, ಅ. ೧೩)

(ಕೀ. ೮, ನು. ೫) (ಕೀ. ೧೯, ನು. ೪) (ಕೀ. ೫೭, ನು. ೨೫)

**ಅಮರರಿಪುಮರ್ದ :** (ಕೀ. ೩, ನು. ೪)

ಹರಿದ್ವೇಷಿಯಾಗಿದ್ದ ಹಿರಣ್ಯಕಶಿಪುವಿನ ಮಗನಾದ ಪ್ರಹ್ಲಾದ ಹರಿಭಕ್ತನಾಗಿದ್ದ. ಹಿರಣ್ಯಕಶಿಪು ಹೇಗಾದರೂ ಮಗನನ್ನು ತನ್ನ ದಾರಿಗೆ ತರಬೇಕೆಂದು ಹಠದಿಂದ ಎಷ್ಟೇ ಪ್ರಯತ್ನಪಟ್ಟರೂ ಸಾಧ್ಯವಾಗಲಿಲ್ಲ. ಆಗ ಅವನನ್ನು ಕೊಂದಲ್ಲದೆ ತನಗೆ ಸುಖವಿಲ್ಲವೆಂದು ಭಾವಿಸಿ ಖಡ್ಗವನ್ನೆತ್ತಿದಾಗ, ಮುಂದಿದ್ದ ಸಭಾಸ್ತಂಭದಿಂದ ಹರಿಯು ನರಸಿಂಹಾವತಾರಿಯಾಗಿ ಹೊರಬಂದು ಹಿರಣ್ಯಕಶಿಪುವನ್ನು ಕೊಲ್ಲುತ್ತಾನೆ.

(ಭಾ. ಸ್ಕಂ. ೭. ಅ. ೮)

(ಕೀ. ೮, ನು. ೫) (ಕೀ. ೧೯, ನು. ೪) (ಕೀ. ೫೭. ನು. ೨೫)

**ಮುನಿಕಶ್ಯಪನ ಕಂದ :** (ಕೀ. ೩, ನು. ೫)

ಬಲಿಚಕ್ರವರ್ತಿಯ ಸೊಕ್ಕನ್ನು ಮುರಿಯುವುದಕ್ಕಾಗಿ ಹರಿಯು ಅದಿತಿ ಕಶ್ಯಪರಲ್ಲಿ ವಾಮನರೂಪದಿಂದ ಅವತರಿಸುತ್ತಾನೆ. ಬಲಿಚಕ್ರವರ್ತಿ ನರ್ಮದಾ ತೀರದಲ್ಲಿ ಅಶ್ವಮೇಧಯಾಗ ಮಾಡತೊಡಗಿದಾಗ, ವಾಮನ ವಟುವೇಷದಿಂದ ಅವನಲ್ಲಿಗೆ ಬಂದು ಮೂರು ಹೆಜ್ಜೆ ಭೂಮಿಯನ್ನು ದಾನವಾಗಿ ಬೇಡಿ ಆ ನೆವದಿಂದ ಅವನನ್ನು ಸುತಳಕ್ಕೆ ಮೆಟ್ಟಿದನು. (ಭಾ. ಸ್ಕಂ. ೮, ಅ. ೧೮-೨೨)

(ಕೀ. ೮, ನು. ೬) (ಕೀ. ೧೯, ನು. ೪) (ಕೀ. ೫೭, ನು. ೨೬)

**ಮತ್ತನೃಪರಕೊಂದ :** (ಕೀ. ೩, ನು. ೪)

ಉನ್ಮತ್ತರಾದ ಕ್ಷತ್ರಿಯರ ಕುಲವನ್ನೇ ನಾಶಗೊಳಿಸುವ ಉದ್ದೇಶದಿಂದ ವಿಷ್ಣುವು ಜಮದಗ್ನಿ ರೇಣುಕೆಯರ ಪುತ್ರ ಪರಶುರಾಮನಾಗಿ ಜನಿಸಿ, ಇಪ್ಪತ್ತೊಂದು ಸಾರಿ ಕ್ಷತ್ರಿಯರನ್ನು ಕೊಂದು ಅವರ ರಕ್ತದಿಂದ ಪಿತೃಗಳಿಗೆ ತರ್ಪಣ ಕೊಟ್ಟನು. (ಪುನಾಚೊ, ಪು. ೩೯೩, ೩೯೪)

(ಕೀ. ೮, ನು. ೭) (ಕೀ. ೧೯, ನು. ೪) (ಕೀ ., ನು. ೨೭)

**ಅನಿಮಿಷಾಪದ್ದುರ** : (ಕೀ. ೩, ಸು. ೪)

ರಾವಣನೇ ಮೊದಲಾದ ರಾಕ್ಷಸರನ್ನು ಸಂಹರಿಸಲು ವಿಷ್ಣುವು ಇಕ್ಷ್ವಾಕು ವಂಶದಲ್ಲಿ ರಾಮನಾಗಿ ಅವತರಿಸಿದನು. (ಭಾ. ಸ್ಕ. ೨, ಅ. ೭)

(ಕೀ. ೮, ಸು. ೬) (ಕೀ. ೧೯, ಸು. ೪) (ಕೀ. ೫೭, ಸು. ೨೭)

**ಅರ್ಜುನಹಿತಕರ** : (ಕೀ. ೩, ಸು. ೪)

ದುಷ್ಟ ಕ್ಷತ್ರಿಯರ ಮದೋನ್ಮತ್ತತೆಯಿಂದ ಹೆಚ್ಚಿದ ಭೂಭಾರವನ್ನು ಪರಿಹರಿಸಲು ವಿಷ್ಣುವು ಯಾದವಕುಲದಲ್ಲಿ ಕೃಷ್ಣನಾಗಿ ಅವತರಿಸುತ್ತಾನೆ. (ಭಾ. ಸ್ಕಂ. ೧೦, ಅ. ೩) ಪಾಂಡವರಿಗೆ ಅವರಲ್ಲಿಯೂ ಅರ್ಜುನನಿಗೆ ಆತ್ಮೀಯ ಸ್ನೇಹಿತನಾಗಿದ್ದು ಅನೇಕ ಸಂದರ್ಭಗಳಲ್ಲಿ ಅವನಿಗೆ ಸಹಾಯಕನಾಗಿ ನಿಲ್ಲುತ್ತಾನೆ. (ಮಹಾಭಾರತ)

(ಕೀ. ೮, ಸು. ೬) (ಕೀ. ೧೯, ಸು. ೪) (ಕೀ. ೫೭, ಸು. ೨೭)

**ದನುಜಮೋಹನಕರ** : (ಕೀ. ೩, ಸು. ೪)

ವೈದಿಕಮಾರ್ಗದಲ್ಲಿ ಬಹಳ ಶ್ರದ್ಧೆಯಿಂದ ಇದ್ದ ತ್ರಿಪುರಾಸುರರನ್ನು ಮೋಸಗೊಳಿಸಲೆಂದು ವಿಷ್ಣುವು ಪಾಷಂಡವೇಷಿಯಾಗಿ, ಅವರಿಗೆ ಪಾಷಂಡಧರ್ಮವನ್ನು ಉಪದೇಶಿಸುತ್ತಾನೆ.

(ಭಾ. ಸ್ಕಂ. ೨, ಅ. ೭)

(ಕೀ. ೮, ಸು. ೭) (ಕೀ. ೧೯, ಸು. ೪) (ಕೀ. ೫೭, ಸು. ೨೮)

**ದುರುಳಕಲಿಮಲಹರ** : (ಕೀ. ೩, ಸು. ೪)

ಕಲಿಯುಗದಲ್ಲಿ ಅನಾಚಾರಗಳು ಮೇರೆ ಮೀರಿದಾಗ ಕರ್ಮಭ್ರಷ್ಟರನ್ನು ಶಿಕ್ಷಿಸಲು ವಿಷ್ಣುವು ಕಲ್ಕಿಯ ರೂಪದಿಂದ ಕುದುರೆಯೇರಿ ಬರುತ್ತಾನೆ. ಇದು ಹರಿಯ ಹತ್ತನೆಯ ಅವತಾರ.

(ಭಾ. ಸ್ಕಂ. ೨, ಅ. ೭)

(ಕೀ. ೮, ಸು. ೭) (ಕೀ. ೧೯, ಸು. ೪) (ಕೀ. ೫೭, ಸು. ೨೮)

**ಕಾಲನೇಮಿ** : (ಕೀ. ೪, ಸು. ೪)

ನೂರು ತಲೆಗಳುಳ್ಳ ಈ ರಾಕ್ಷಸ ಇಂದ್ರಪದವಿಯನ್ನೇರಿ ಮೆರೆಯುತ್ತಿದ್ದ. ಅವನನ್ನು ವಿಷ್ಣು ತನ್ನ ಚಕ್ರಾಯುಧದಿಂದ ಸಂಹರಿಸುತ್ತಾನೆ. (ಪುನಾಚೂ, ಪು. ೧೦೭) ಇವನೇ ಮತ್ತೆ ಕಂಸನಾಗಿ ಜನಿಸಿದನೆಂಬ ವಿಚಾರ ಇಲ್ಲಿ ಬಂದಿದೆ.

(ಕೀ. ೬೫, ಸು. ೧೦)

**ಶ್ರೀವತ್ಸ, ಕೌಸ್ತುಭ** : (ಕೀ. ೪, ಸು. ೮)

ಶ್ರೀವತ್ಸ ಎನ್ನುವುದು ಭೃಗುಮಹರ್ಷಿ ವಿಷ್ಣುವಿನ ಎದೆಯ ಮೇಲೆ ಒದ್ದಾಗ ಉಂಟಾದ ಗುರುತು. ದೇವದಾನವರು ಕ್ಷೀರಸಮುದ್ರವನ್ನು ಮಥಿಸಿದಾಗ ಹುಟ್ಟಿದ ಒಂದು ರತ್ನ ಕೌಸ್ತುಭ. ಇದನ್ನು ವಿಷ್ಣು ತನ್ನ ಎದೆಯಲ್ಲಿ ಧರಿಸಿದನು. (ಪುನಾಚೂ, ಪು. ೧೬೭)

**ಆನಕದುಂದುಭಿ** : (ಕೀ. ೪, ಸು. ೯)

ಕೃಷ್ಣನ ತಂದೆಯಾದ ವಸುದೇವನ ಜನನಕಾಲದಲ್ಲಿ ಆನಕದುಂದುಭಿಗಳೆಂಬ ದೇವವಾದ್ಯ

**ಗಹನಾಬ್ಧಿ ಮಥಿಸಿದ :** (ಕೀ. ೩, ನು. ೪)

ಹರಿಯ ಕೂರ್ಮಾವತಾರವನ್ನು ಕುರಿತು ಈ ಮಾತು ಬಂದಿದೆ. ಅಮೃತಕ್ಕಾಗಿ ದೇವಾಸುರರು ಕ್ಷೀರಸಮುದ್ರವನ್ನು ಕಡೆಯುತ್ತಿದ್ದಾಗ, ಕಡಗೋಲಾಗಿದ್ದ ಮಂದರಪರ್ವತ ಭಾರದಿಂದ ಮುಳುಗಲಾರಂಭಿಸಿತು. ಆಗ ಹರಿ ಕೂರ್ಮಾವತಾರಿಯಾಗಿ ಬಂದು ಮಂದರಪರ್ವತವನ್ನು ತನ್ನ ಬೆನ್ನ ಮೇಲೆತ್ತಿಕೊಂಡು ನಿಂತು ಸಮುದ್ರಮಥನಕ್ಕೆ ಸಹಾಯಕನಾದನು. (ಭಾ. ಸ್ಕಂ. ೮, ಅ. ೭)

(ಕೀ. ೮, ನು. ೫) (ಕೀ. ೧೯, ನು. ೪) (ಕೀ. ೫೭, ನು. ೨೪)

**ಅವನಿಯು ಕದ್ದನ ಸೀಳ್ದ :** (ಕೀ. ೩, ನು. ೪)

ಇದು ಹರಿಯ ಮೂರನೆಯ ಅವತಾರವನ್ನು ಕುರಿತ ಮಾತಾಗಿದೆ. ಹಿರಣ್ಯಾಕ್ಷನೆಂಬ ರಾಕ್ಷಸ ಭೂಮಿಯನ್ನು ಚಾಪೆಯಂತೆ ಸುತ್ತಿಕೊಂಡು ಸಮುದ್ರದ ತಳಕ್ಕೆ ಒಯ್ದಾಗ ಹರಿ ವರಾಹರೂಪದಿಂದ ಬಂದು, ಅವನನ್ನು ಕೊಂದು ಭೂಮಿಯನ್ನು ತನ್ನ ಕೋರೆದಾಡೆಗಳಿಂದ ಎತ್ತಿ ತಂದನು.

(ಭಾ. ಸ್ಕಂ. ೩, ಅ. ೧೩)

(ಕೀ. ೮, ನು. ೫) (ಕೀ. ೧೯, ನು. ೪) (ಕೀ. ೫೭, ನು. ೨೫)

**ಅಮರರಿಪುಮರ್ದ :** (ಕೀ. ೨, ನು. ೪)

ಹರಿದ್ವೇಷಿಯಾಗಿದ್ದ ಹಿರಣ್ಯಕಶಿಪುವಿನ ಮಗನಾದ ಪ್ರಹ್ಲಾದ ಹರಿಭಕ್ತನಾಗಿದ್ದ. ಹಿರಣ್ಯಕಶಿಪು ಹೇಗಾದರೂ ಮಗನನ್ನು ತನ್ನ ದಾರಿಗೆ ತರಬೇಕೆಂದು ಹಾದಿಂದ ಎಷ್ಟೇ ಪ್ರಯತ್ನಪಟ್ಟರೂ ಸಾಧ್ಯವಾಗಲಿಲ್ಲ. ಆಗ ಅವನನ್ನು ಕೊಂದಲ್ಲದೆ ತನಗೆ ಸುಖವಿಲ್ಲವೆಂದು ಭಾವಿಸಿ ಖಡ್ಗವನ್ನೆತ್ತಿದಾಗ, ಮುಂದಿದ್ದ ಸಭಾಸ್ತಂಭದಿಂದ ಹರಿಯು ನರಸಿಂಹಾವತಾರಿಯಾಗಿ ಹೊರಬಂದು ಹಿರಣ್ಯಕಶಿಪುವನ್ನು ಕೊಲ್ಲುತ್ತಾನೆ.

(ಭಾ. ಸ್ಕಂ. ೭. ಅ. ೮)

(ಕೀ. ೮, ನು. ೫) (ಕೀ. ೧೯, ನು. ೪) (ಕೀ. ೫೭. ನು. ೨೫)

**ಮುನಿಕಶ್ಯಪನ ಕಂದ :** (ಕೀ. ೩, ನು. ೫)

ಬಲಿಚಕ್ರವರ್ತಿಯ ಸೊಕ್ಕನ್ನು ಮುರಿಯುವುದಕ್ಕಾಗಿ ಹರಿಯು ಅದಿತಿ ಕಶ್ಯಪರಲ್ಲಿ ವಾಮನ ರೂಪದಿಂದ ಅವತರಿಸುತ್ತಾನೆ. ಬಲಿಚಕ್ರವರ್ತಿ ನರ್ಮದಾ ತೀರದಲ್ಲಿ ಅಶ್ವಮೇಧಯಾಗ ಮಾಡತೊಡಗಿದಾಗ, ವಾಮನ ವಟುವೇಷದಿಂದ ಅವನಲ್ಲಿಗೆ ಬಂದು ಮೂರು ಹೆಜ್ಜೆ ಭೂಮಿಯನ್ನು ದಾನವಾಗಿ ಬೇಡಿ ಆ ನೆವದಿಂದ ಅವನನ್ನು ಸುತಳಕ್ಕೆ ಮೆಟ್ಟಿದನು. (ಭಾ. ಸ್ಕಂ. ೮, ಅ. ೧೮-೨೨)

(ಕೀ. ೮, ನು. ೯) (ಕೀ. ೧೯, ನು. ೪) (ಕೀ. ೫೭, ನು. ೨೬)

**ಮತ್ತನೃಪರಕೊಂದ :** (ಕೀ. ೩, ನು. ೪)

ಉನ್ಮತ್ತರಾದ ಕ್ಷತ್ರಿಯರ ಕುಲವನ್ನೇ ನಾಶಗೊಳಿಸುವ ಉದ್ದೇಶದಿಂದ ವಿಷ್ಣುವು ಜಮದಗ್ನಿ ರೇಣುಕೆಯರ ಪುತ್ರ ಪರಶುರಾಮನಾಗಿ ಜನಿಸಿ, ಇಪ್ಪತ್ತೊಂದು ಸಾರಿ ಕ್ಷತ್ರಿಯರನ್ನು ಕೊಂದು ಅವರ ರಕ್ತದಿಂದ ಪಿತೃಗಳಿಗೆ ತರ್ಪಣ ಕೊಟ್ಟನು. (ಪುನಾಚೂ, ಪು. ೩೯೩, ೩೯೪)

(ಕೀ. ೮, ನು. ೬) (ಕೀ. ೧೯, ನು. ೪) (ಕೀ. ೫೭, ನು. ೨೬)

**ಸುಪ್ರತೀಕ : (ಕೀ. ೧೮, ಪ. ೧)**

ಅಷ್ಟದಿಗ್ಗಜಗಳಲ್ಲಿ ಒಂದು. ಈಶಾನ್ಯ ದಿಕ್ಕಿನಲ್ಲಿರುವುದು. (ಪುನಾಚೂ, ಪು. ೬೨೭)

**ಸುರಮುನಿಶಾಪದಿ ನಳಕೂಬರರನ್ನು : (ಕೀ. ೨೧. ಪ. ೩)**

ಕುಬೇರನ ಮಕ್ಕಳಾದ ಮಣಿಗ್ರೀವ ನಳಕೂಬರರು ಒಮ್ಮೆ ಗಂಗೆಯಲ್ಲಿ ಯಕ್ಷಿಯರೊಂದಿಗೆ ಜಲಕೇಳಿಯಾಡುತ್ತಿದ್ದಾಗ, ನಾರದಮುನಿ ಅಲ್ಲಿಗೆ ಬರುತ್ತಾನೆ. ಮದ್ಯಪಾನದಿಂದ ಮತ್ತರಾಗಿದ್ದ ಅವರಿಬ್ಬರು ಮುನಿಯನ್ನು ಲಕ್ಷಿಸದಿದ್ದಾಗ, ಕುಪಿತನಾದ ನಾರದಮುನಿ ಅವರಿಬ್ಬರಿಗೂ ಮತ್ತಿ ಮರಗಳಾಗಿ ಜನಿಸುವಂತೆ ಶಾಪಕೊಡುತ್ತಾನೆ. ತಕ್ಷಣ ಆ ಇಬ್ಬರೂ ಎಚ್ಚೆತ್ತು, ಮುನಿಯ ಮರೆ ಹೊಕ್ಕಾಗ 'ನೂರು ವರ್ಷ ಮತ್ತಿ ಮರಗಳಾಗಿದ್ದು ಕೃಷ್ಣನ ಮೂಲಕ ಶಾಪವಿಮೋಚನೆ ಪಡೆಯುವಿರಿ' ಎಂದು ಅನುಗ್ರಹಿಸುತ್ತಾನೆ. ನಂತರ ಅವರಿಬ್ಬರೂ ಗೋಕುಲದಲ್ಲಿ ನಂದನ ಮನೆಯ ಅಂಗಳದಲ್ಲಿ ಮತ್ತಿಯ ಮರಗಳಾಗಿ ಜನಿಸುತ್ತಾರೆ. ಒಂದು ದಿನ ಯಶೋದೆ ಸಣ್ಣ ಬಾಲಕನಾದ ಕೃಷ್ಣನನ್ನು ಒರಳಿಗೆ ಕಟ್ಟಿದ್ದಾಗ, ಕೃಷ್ಣ ಆ ಒರಳನ್ನು ಎಳೆದುಕೊಂಡು ಈ ಮರಗಳ ಮಧ್ಯೆ ನುಗ್ಗಿದಾಗ ಆ ಮರಗಳು ಉರುಳಿ ಬಿದ್ದು, ಧನದಪುತ್ರರು ಶಾಪ ವಿಮೋಚನೆ ಪಡೆಯುತ್ತಾರೆ. ಮೂಲದಲ್ಲಿ ವಿವರವಾಗಿ ಬರುವ ಈ ಶಾಪ ಕೊಡುವ ಭಾಗದ ಸೂಚನೆಯನ್ನು ಮಾತ್ರ ಇಲ್ಲಿ ಕೊಡಲಾಗಿದೆ.

(ಭಾ. ಸ್ಕಂ. ೧೦. ಅ. ೧೦)

**ಸನಕ : (ಕೀ. ೨೬. ಪ. ೧೩)**

ಸೃಷ್ಟಿಯ ಆದಿಯಲ್ಲಿ ಬ್ರಹ್ಮನ ಮಾನಸಪುತ್ರ. ಯಾವಾಗಲೂ ಕೌಮಾರಾವಸ್ಥೆಯಲ್ಲೇ ಇರುವ ಈ ಮುನಿ ಮಹಾತಪಸ್ವಿ ಹಾಗೂ ಜ್ಞಾನಸಂಪನ್ನನು. (ಪುನಾಚೂ, ಪು. ೬೨೮)

**ಸುರಧೇನು (ಕಾಮಧೇನು) : (ಕೀ. ೨೬. ಪ. ೧೫)**

ಇಂದ್ರನ ಆಕಳು. ಅಮೃತಮಥನ ಕಾಲದಲ್ಲಿ ಕ್ಷೀರಸಮುದ್ರದಲ್ಲಿ ಹುಟ್ಟಿತು. ಬೇಡಿದುದನ್ನೆಲ್ಲ ಕೊಡುವ ಸಾಮರ್ಥ್ಯವುಳ್ಳದ್ದು. (ಪುನಾಚೂ, ಪು. ೧೨೧)

(ಕೀ. ೨೭. ಪ. ೧. ಪ. ೬) (ಕೀ. ೨೮, ಪ. ೭)

**ವೀರಗರುಡನಮ್ಮೃತದ ಕುಂಭ ಹೇರಿ........ : (ಕೀ. ೨೮. ಪ. ೨)**

'ಕಾಳಿಯ ಮದಹರಣ' ಪ್ರಸಂಗದಲ್ಲಿ ಈ ಮಾತುಗಳು ಬಂದಿವೆ. ಕಾಳಿಯನ ವಿಷದಿಂದ ಕಾಳಿಂದಿ ಮಡುವಿನ ನೀರೆಲ್ಲ ವಿಷಮಯವಾಗಿ, ತೀರದ ಹುಲ್ಲು ಪೊದೆ ಮರಗಳೆಲ್ಲ ಆ ವಿಷದ ಝಳಕ್ಕೆ ಸುಟ್ಟು ಹೋದರೂ ಒಂದು ಕದಂಬ ವೃಕ್ಷ ಮಾತ್ರ ಹಾಗೆಯೇ ಉಳಿದಿತ್ತಂತೆ. ಇದಕ್ಕೆ ಕಾರಣ, ಹಿಂದೊಮ್ಮೆ ಗರುಡನು ಅಮೃತ ಕುಂಭವನ್ನು ಒಯ್ಯುತ್ತಿರುವಾಗ ಅದನ್ನು ಈ ಕದಂಬ ವೃಕ್ಷದ ಮೇಲೆ ಕೆಲಕಾಲ ಇಟ್ಟಿದ್ದನಂತೆ. ಈ ವಿಚಾರ ಮೂಲ ಸಂಸ್ಕೃತ ಭಾಗವತದಲ್ಲಿಲ್ಲ.

**ಮುರಮಥನ : (ಕೀ. ೩೦. ಪ. ೧೭)**

ಮುರ ಎನ್ನುವವನು ನರಕಾಸುರನ ಪರಿವಾರದ ಒಬ್ಬ ರಾಕ್ಷಸ. ನರಕಾಸುರವಧೆಯ ಸಂದರ್ಭದಲ್ಲಿ ಕೃಷ್ಣ ಈತನನ್ನು ಕೊಲ್ಲುತ್ತಾನೆ. ಹೀಗಾಗಿ ಕೃಷ್ಣನಿಗೆ ಮುರಹರ, ಮುರಮಥನ, ಮುರಾರಿ ಎಂಬ ಹೆಸರುಗಳು ಬಂದಿವೆ. (ಭಾ. ಸ್ಕಂ. ೧೦, ಅ. ೫೯)

(ಕೀ. ೬೫, ಪ. ೨೪) (ಕೀ. ೬೬, ಪ. ೩)

**ವಾಸವನ್ನಪ್ರದಿ ಗಿರಿ ಕಿಡಿದೋಲ್ :** (ಕೀ. ೩೦, ಸು. ೨೩)

ಕೃತಯುಗದಲ್ಲಿ ಪರ್ವತಗಳಿಗೆ ರೆಕ್ಕೆಗಳಿದ್ದದ್ದರಿಂದ ಅವು ವಾಯುವಿನಂತೆ ಗರುಡನಂತೆ ವೇಗವಾಗಿ ಎಲ್ಲ ದಿಕ್ಕುಗಳಿಗೂ ಹಾರಿಹೋಗುತ್ತಿದ್ದವು. ಅವು ಹಾಗೆ ಹಾರಾಡುತ್ತಿದ್ದಾಗ ದೇವತೆಗಳಿಗೂ, ಋಷಿಗಳಿಗೂ, ಎಲ್ಲ ಪ್ರಾಣಿಗಳಿಗೂ ಅವು ಎಲ್ಲಿ ತಮ್ಮ ಮೇಲೆ ಬೀಳುವುವೋ ಎಂದು ಭೀತಿಯುಂಟಾಯಿತು. ಆಗ ಇಂದ್ರನು ತನ್ನ ವಜ್ರಾಯುಧದಿಂದ ಹಾರುತ್ತಿದ್ದ ಅವುಗಳ ರೆಕ್ಕೆಗಳನ್ನು ಕತ್ತರಿಸಿ ಅವು ಚಲಿಸದಂತೆ ಮಾಡಿದನು. (ರಾಮಾಯಣ, ಸುಂದರಕಾಂಡ, ಸರ್ಗ ೧)

**ಭಾಂಡೀರವನ :** (ಕೀ. ೩೦, ಸು. ೧೨)

ಒಂದು ವನದ ಹೆಸರು.

**ಸುಬಲವಿಶಾಲ....ರುಕ್ಷಾ :** (ಕೀ. ೩೯, ಸು. ೨)

ಇವೆಲ್ಲವೂ ಗೋಪಾಲಕರ ಹೆಸರುಗಳು.

**ಅವಸ್ಥಾತ್ರಯ :** (ಕೀ. ೩೭. ಸು. ೧)

ಸ್ವಪ್ನ, ಜಾಗೃತಿ, ಸುಷುಪ್ತಿ ಎಂಬ ಮೂರು ಅವಸ್ಥೆಗಳು.

**ಕರಣತ್ರಯ :** (ಕೀ. ೩೭, ಸು. ೨)

ಮನ, ಕಾಯ, ವಾಕ್ ಎಂಬ ಮೂರು ಕರಣಗಳು.

**ಸತ್ತಾತ್ರಯ :** (ಕೀ. ೩೭, ಸು. ೨)

ಸ್ವರೂಪ ಸತ್ತಾ, ಪ್ರವೃತ್ತಿ ಸತ್ತಾ ಮತ್ತು ಪ್ರಮಿತಿ ಸತ್ತಾ,

**ಹಿಂದೆ ವಿದ್ಯಾಧರ ತಾನು ಮುನಿಯ ಶಾಪದಿಂದಹಿಯಾಗಿರಲು :** (ಕೀ. ೪೭, ಸು. ೩)

ಸುದರ್ಶನನೆಂಬ ವಿದ್ಯಾಧರ ಸಕಲೈಶ್ವರ್ಯಗಳಿಂದ ಕೂಡಿ ವಿಮಾನದಿಂದಲೇ ದಿಕ್ಕುಗಳನ್ನೆಲ್ಲ ಸಂಚರಿಸುತ್ತ, ಸೌಂದರ್ಯದಿಂದ ಗರ್ವಿತನಾಗಿ, ಒಮ್ಮೆ ಕುರೂಪಿಗಳಾಗಿದ್ದ ಅಂಗಿರಸ ಋಷಿಗಳನ್ನು ಕಂಡು ಪರಿಹಾಸಮಾಡಿ ನಗುತ್ತಾನೆ. ಆಗ ಆ ಋಷಿ ಕೊಟ್ಟ ಶಾಪದ ಫಲವಾಗಿ ಹೆಬ್ಬಾವಾಗಿ ಹುಟ್ಟುತ್ತಾನೆ. ಕೃಷ್ಣಪಾದ ಸ್ಪರ್ಶದಿಂದ ಶಾಪವಿಮೋಚನೆಯಾಗುತ್ತದೆ. ಸಂಸ್ಕೃತ ಭಾಗವತದ ದಶಮಸ್ಕಂಧ, ಅಧ್ಯಾಯ ೩೪ರಲ್ಲಿ ಬರುವ ಈ ಪ್ರಸಂಗವನ್ನು ದಾಸರು ಇಲ್ಲಿ ಸಂಗ್ರಹಿಸಿ ಹೇಳಿದ್ದಾರೆ.

**ಮಧುಹರ :** (ಕೀ. ೫೧, ಸು. ೧೨)

ಕಲ್ಪಾದಿಯಲ್ಲಿ ವಿಷ್ಣು ವಟಪತ್ರಶಾಯಿಯಾಗಿ ಮಲಗಿದ್ದಾಗ ಆತನ ಕಿವಿಯ ಮಲದಿಂದ ಮಧು ಕೈಟಭರೆಂಬ ಇಬ್ಬರು ರಾಕ್ಷಸರು ಜನಿಸಿ, ನಾಭಿಕಮಲದಲ್ಲಿದ್ದ ಬ್ರಹ್ಮನನ್ನು ಪೀಡಿಸತೊಡಗಿದಾಗ, ಬ್ರಹ್ಮ ವಿಷ್ಣುವಿನ ಮರೆಹೊಗಲು, ವಿಷ್ಣು ಉಪಾಯದಿಂದ ಅವರನ್ನು ತನ್ನ ತೊಡೆಯ ಮೇಲೆಯೇ ಕೊಲ್ಲುತ್ತಾನೆ. ಹೀಗೆ ಅವರಿಬ್ಬರನ್ನು ಕೊಂದದ್ದರಿಂದ ಅವನಿಗೆ ಮಧುಹರ, ಕೈಟಭಾರಿ ಇತ್ಯಾದಿ ಹೆಸರುಗಳು ಬಂದವು. (ಪುನಾಚೂ, ಪು. ೧೬೨)

(ಕೀ. ೫೭. ಸು. ೨೪) (ಕೀ. ೬೪, ಪ.)

**ಮಾಗಧ :** (ಕೀ. ೫೧, ಮ. ೨೨)

ಮಗಧ ದೇಶಾಧಿಪತಿಯಾದ ಬೃಹದ್ರಥ ರಾಜನ ಮಗ. ಈತ ಅರಸನಾದ ನಂತರ ದಿಗ್ವಿಜಯ ಮಾಡಿ ಶತ್ರುಗಳನ್ನೆಲ್ಲ ಗೆದ್ದು ಅನೇಕ ಮಂದಿ ರಾಜಪುತ್ರರನ್ನು ಸೆರೆಯಲ್ಲಿರಿಸಿ ನಿರ್ಘೃಣನಾಗಿದ್ದ. ಆ ರಾಜಪುತ್ರರೆಲ್ಲ ರಹಸ್ಯವಾಗಿ ಕೃಷ್ಣನಿಗೆ ತಮ್ಮನ್ನು ರಕ್ಷಿಸುವಂತೆ ಹೇಳಿಕಳುಹಿಸಿದಾಗ ಕೃಷ್ಣನು ಭೀಮನಿಂದ ಇವನನ್ನು ಕೊಲ್ಲಿಸುತ್ತಾನೆ. (ಭಾ. ಸ್ಕಂ. ೧೦, ಅ. ೭೨)

**ಬಾಣ :** (ಕೀ. ೫೧, ಮ. ೨೨)

ಬಾಣ ಶಿವಭಕ್ತಿಸಂಪನ್ನನಾದ ಒಬ್ಬ ರಾಕ್ಷಸ. ಶಿವನನ್ನು ತಾಂಡವದಿಂದ ಮೆಚ್ಚಿಸಿ, ಶಿವನ ರುದ್ರಗಣಗಳಲ್ಲಿ ಒಬ್ಬ ತನ್ನ ಪಟ್ಟಣವನ್ನು ಕಾಪಾಡುವಂತೆಯೂ, ತನಗೆ ಸಾವಿರ ತೋಳುಗಳನ್ನು ಅನುಗ್ರಹಿಸುವಂತೆಯೂ ವರವನ್ನು ಪಡೆದು ಮಹಾಮಹಿಮಸಂಪನ್ನನಾಗಿದ್ದ. ಅನಂತರದಲ್ಲಿ ಇವನ ಮಗಳು ಉಷೆಯನ್ನು ಕೃಷ್ಣನ ಮೊಮ್ಮಗ ಅನಿರುದ್ಧ ಕದ್ದು ಮದುವೆಯಾಗುತ್ತಾನೆ. (ಪ್ರಾಚೀ. ಪು. ೪೬೮)

**ಶಂಬರ :** (ಕೀ. ೫೧, ಮ. ೨೨)

ದಕ್ಷಪುತ್ರನಾದ ಈತ ಪಾತಾಳವಾಸಿಯಾಗಿದ್ದ. ಮಹಾಮಾಯಾವಿ. ಕೃಷ್ಣನ ಮಗನಾದ ಪ್ರದ್ಯುಮ್ನನಿಂದ ತಾನು ಸಾಯುವೆನೆಂದು ತಿಳಿದು ಆತನನ್ನು ಕೊಲ್ಲಲು ಪ್ರಯತ್ನಿಸಿ ತಾನೇ ಆತನಿಂದ ಹತನಾಗುತ್ತಾನೆ. (ಭಾ.ಸ್ಕಂ. ೧೦, ಅ. ೫೫)

**ಶಂಖ :** (ಕೀ. ೫೪, ಸ. ೪)

ಶಂಖರೂಪದಲ್ಲಿದ್ದ ಪಂಚಜನನೆಂಬ ರಾಕ್ಷಸ. ಪ್ರಹ್ಲಾದನ ತಮ್ಮನಾದ ಸಂಹ್ಲಾದನ ಮಗ. ಕೃಷ್ಣ ತನ್ನ ಗುರುವಾದ ಸಾಂದೀಪನಿಗೆ ಗುರುಕಾಣಿಕೆಯನ್ನು ಕೊಡುವ ಸಂದರ್ಭದಲ್ಲಿ ಈತನನ್ನು ಕೊಲ್ಲುತ್ತಾನೆ. (ಭಾ. ಸ್ಕಂ. ೧೦, ಅ. ೪೫)

**ಸತ್ಯಾದೇವಿಗಮರತರು ತರುವೆ :** (ಕೀ. ೫೬, ಸ. ೪)

ಒಮ್ಮೆ ನಾರದ ಒಂದು ಪಾರಿಜಾತದ ಹೂವನ್ನು ತಂದು ಕೃಷ್ಣನಿಗೆ ಕೊಡಲಾಗಿ, ಆತ ಅದನ್ನು ರುಕ್ಮಿಣಿಗೆ ಕೊಟ್ಟ. ಇದರಿಂದ ಸಿಟ್ಟುಗೊಂಡ ಸತ್ಯಭಾಮೆ ಕ್ರೋಧಾಗಾರವನ್ನು ಹೊಕ್ಕಳು. ಕೃಷ್ಣ ಆಕೆಯನ್ನು ಸಮಾಧಾನಪಡಿಸಿ ಸ್ವರ್ಗದಿಂದ ಪಾರಿಜಾತ ವೃಕ್ಷವನ್ನು ಕಿತ್ತುತಂದು ಸತ್ಯಭಾಮೆಯ ಮನೆ ಎದುರು ಇರಿಸಿದ. (ಪ್ರಾಚೀ. ಪು. ೭೨೫)

(ಕೀ. ೬೭, ಮ. ೧೧)

**ಸ್ಯಮಂತಕ :** (ಕೀ. ೫೪, ಮ. ೫)

ಯದುವಂಶದ ನಿಮ್ನನ ಮಗನಾದ ಸತ್ರಾಜಿತ ಸೂರ್ಯನ ಭಕ್ತನೂ ಮಿತ್ರನೂ ಆಗಿದ್ದು ಸೂರ್ಯನಿಂದ ಸ್ಯಮಂತಕವೆಂಬ ರತ್ನವನ್ನು ಪಡೆದ. ಕೃಷ್ಣ ಇದರ ಮಹಿಮೆಗೆ ಮರುಳಾಗಿ ಅದನ್ನು ತನಗೆ ಕೊಡುವಂತೆ ಸತ್ರಾಜಿತನನ್ನು ಕೇಳಿದ. ಆದರೆ ಅವನು ಕೊಡಲಿಲ್ಲ. ಒಂದುದಿನ ಸತ್ರಾಜಿತನ ತಮ್ಮನಾದ ಪ್ರಸೇನ ಆ ರತ್ನವನ್ನು ಧರಿಸಿ ಕೃಷ್ಣನ ಜೊತೆಯಲ್ಲಿ ಬೇಟೆಗೆ ಹೋಗಿದ್ದಾಗ ಒಂದು ಸಿಂಹ ಪ್ರಸೇನನನ್ನು ಕೊಂದಿತು. ಕೃಷ್ಣನ ಮೇಲೆ ಅಪವಾದ ಬರಲು ಆತ ಅರಣ್ಯಕ್ಕೆ ಹೋಗಿ ಪ್ರಸೇನನ ಶವವನ್ನು ಗುರುತಿಸಿ ಮುಂದೆ ನಡೆದು, ಜಾಂಬವಂತನ ಸಂಗಡ ಯುದ್ಧಮಾಡಿ ಆ ರತ್ನವನ್ನು ತಂದು ಸತ್ರಾಜಿತನಿಗೆ

ಕೊಟ್ಟು ಸತ್ಯಭಾಮೆಯನ್ನು ಮದುವೆಯಾಗುತ್ತಾನೆ. (ಭಾ. ಸ್ಕಂ. ೧೦. ಅ. ೫೬)

(ಕೀ. ೬೭, ಸು. ೧೧)

**ಭೂಸುರಗೆ ಸತ್ತ ಮಗನ್ನಿತ್ತು :** (ಕೀ. ೫೩, ಸು. ೪)

ಅವಂತಿ ನಗರದಲ್ಲಿ ವಾಸವಾಗಿದ್ದ ಸಾಂದೀಪನಿ ಮಹರ್ಷಿಯ ಬಳಿಯಲ್ಲಿ ಬಲರಾಮ ಕೃಷ್ಣರು ವಿದ್ಯಾಭ್ಯಾಸ ಮಾಡಿದರು. ಗುರುಗಳು ಗುರುದಕ್ಷಿಣೆಯಾಗಿ ತಮ್ಮ ಸತ್ತ ಮಗನನ್ನು ಬದುಕಿಸಿ ತಂದು ಕೊಡುವಂತೆ ಹೇಳಿದಾಗ, ಕೃಷ್ಣ ಯಮಲೋಕಕ್ಕೆ ಹೋಗಿ, ಅವರ ಮೃತನಾಗಿದ್ದ ಮಗನನ್ನು ಮರಳಿ ಕರೆತಂದು ಒಪ್ಪಿಸುತ್ತಾನೆ. (ಭಾ. ಸ್ಕಂ. ೧೦, ಅ. ೪೫) ಮೂಲದಲ್ಲಿ ವಿವರವಾಗಿ ಬರುವ ಈ ಪ್ರಸಂಗ ವನ್ನು ಇಲ್ಲಿ ಒಂದೇ ಮಾತಿನಲ್ಲಿ ಸೂಚಿಸಿ ಕೈ ಬಿಡಲಾಗಿದೆ.

**ಪೌಂಡ್ರಕ :** (ಕೀ. ೫೩. ಸು. ೫)

ಪುಂಡ್ರವಂಶದ ವಸುದೇವನೆಂಬ ರಾಜನ ಮಗ. ಕೃಷ್ಣನಂತೆಯೇ ಕೀರ್ತಿವಂತನಾಗುವ ದುರಾಸೆ ಯಿಂದ ಅವನಂತೆಯೇ ಶಂಖ, ಚಕ್ರಗಳನ್ನು ಧರಿಸಿ ಕೃಷ್ಣನ ಮೇಲೆ ಯುದ್ಧಕ್ಕೆ ಹೋಗಿ ಸೋತು, ಶಿವನಿಂದ ಪಡೆದ ಶಸ್ತ್ರಾಸ್ತ್ರಗಳೂ ವ್ಯರ್ಥವಾಗಲು ಕೊನೆಗೆ ಕಾಶಿರಾಜನನ್ನು ಮರೆಹೊಕ್ಕು ಆತ ನೊಂದಿಗೆ ತಾನೂ ಕೃಷ್ಣನಿಂದ ಹತನಾದ. (ಪುನಾಚೂ, ಪು. ೪೨೦)

(ಕೀ. ೬೭. ಸು. ೧೨)

**ಕಾ[ಶಿ]ಯನು ದೀಪಿಸುವೆ :** (ಕೀ. ೫೩, ಸು. ೫)

ಹರಿದ್ವೇಷಿಯಾದ ಪೌಂಡ್ರಕನ ಜೊತೆಗೆ ಆತನಿಗೆ ಬೆಂಬಲ ವ್ಯಕ್ತಪಡಿಸಿ ಕೃಷ್ಣನ ವಿರುದ್ಧ ಯುದ್ಧಕ್ಕೆ ಬಂದ ಕಾಶೀರಾಜನೂ ಯುದ್ಧದಲ್ಲಿ ಕೃಷ್ಣನಿಂದ ಹತನಾಗುತ್ತಾನೆ. ಆಗ ಕಾಶೀರಾಜನ ಮಗನಾದ ಸುದಕ್ಷಿಣ ಕೃಷ್ಣನ ಮೇಲೆ ಹಗೆ ತೀರಿಸಿಕೊಳ್ಳುವ ಉದ್ದೇಶದಿಂದ ರುದ್ರನನ್ನು ಆರಾಧಿಸಿ, ಆತನ ಸೂಚನೆಯಂತೆ ಅಭಿಚಾರ ಹೋಮವನ್ನು ನಡೆಸುತ್ತಾನೆ. ಅಗ್ನಿಕುಂಡದಿಂದ ಎದ್ದ ಅಭಿಚಾರಾಗ್ನಿ ದ್ವಾರಕೆಯನ್ನು ಸುಟ್ಟುಹಾಕುವಂತೆ ಬಂದಾಗ ಕೃಷ್ಣ ಸುದರ್ಶನ ಚಕ್ರದಿಂದ ಅದನ್ನು ನಿಗ್ರಹಿಸುತ್ತಾನೆ. ಸುದರ್ಶನ ಚಕ್ರ ಆ ಅಗ್ನಿಯನ್ನು ಬೆನ್ನಟ್ಟುತ್ತ ಹೋಗಿ ಇಡೀ ಕಾಶೀನಗರವನ್ನು ಸುಟ್ಟು ಹಾಕಿದ ನಂತರ ಕೃಷ್ಣನ ಬಳಿಗೆ ಹಿಂದಿರುಗುತ್ತದೆ. (ಭಾ. ಸ್ಕಂ. ೧೦, ಅ. ೬೬)

**ಚೈದ್ಯನ ಮಥಿಸುವೆ :** (ಕೀ. ೫೩, ಸು. ೫)

ಚೇದಿ ದೇಶದ ಅರಸನಾದ ಶಿಶುಪಾಲನಿಗೆ ಚೈದ್ಯನೆಂಬ ಹೆಸರೂ ಇದೆ. ರಾಜಸೂಯಯಾಗದ ಸಂದರ್ಭದಲ್ಲಿ ಭೀಷ್ಮ ಕೃಷ್ಣನಿಗೆ ಅಗ್ರಪೂಜೆ ಮಾಡಿಸಿದ್ದರಿಂದ ರೋಷಭರಿತನಾಗಿ ಭೀಷ್ಮನನ್ನೂ ಕೃಷ್ಣನನ್ನೂ ನಿಂದಿಸುತ್ತಾನೆ. ಕೃಷ್ಣ ಶಿಶುಪಾಲನ ತಾಯಿಗೆ ಭಾಷೆಕೊಟ್ಟಂತೆ ಆತನ ನೂರು ತಪ್ಪು ಗಳನ್ನು ಕ್ಷಮಿಸುತ್ತಾನಾದರೂ ಶಿಶುಪಾಲ ಮತ್ತೂ ಉದ್ಧಟತನವನ್ನೇ ತೋರಿದಾಗ ಆತನನ್ನು ಕೊಲ್ಲು ತ್ತಾನೆ. (ಮಹಾಭಾರತ, ಸಭಾಪರ್ವ)

(ಕೀ. ೬೭, ಸು. ೧೨)

**ಜಯವಿಜಯ :** (ಕೀ. ೫೬, ಸು. ೪೩)

ವಿಷ್ಣುವಿನ ವೈಕುಂಠದ ದ್ವಾರಪಾಲಕರು. ಒಮ್ಮೆ ವಿಷ್ಣುವನ್ನು ನೋಡುವುದಕ್ಕೆ ಬಂದ ಸನ

ಕಾದಿ ಮುನಿಗಳನ್ನು ಅಡ್ಡಗಿಸಿ, ಭೂಲೋಕದಲ್ಲಿ ರಾಕ್ಷಸರಾಗಿ ಜನಿಸುವಂತೆ ಶಾಪವನ್ನು ಪಡೆದು, ಮೊದಲನೆಯ ಜನ್ಮದಲ್ಲಿ ಹಿರಣ್ಯಾಕ್ಷ, ಹಿರಣ್ಯಕಶಿಪುಗಳೆಂಬ ಹೆಸರಿನಿಂದ ಹುಟ್ಟಿ ವರಾಹ, ನರಸಿಂಹರಿಂದ ಹತರಾಗಿ. ಎರಡನೆಯ ಬಾರಿ ರಾವಣ ಕುಂಭಕರ್ಣರಾಗಿ ಜನಿಸಿ ಶ್ರೀರಾಮನಿಂದ ಮಡಿದು, ಮೂರನೆಯ ಸಲ ಶಿಶುಪಾಲ, ದಂತವಕ್ತ್ರರಾಗಿ ಜನ್ಮವೆತ್ತಿ, ಕೃಷ್ಣನಿಂದ ಹತರಾದರು.

(ಭಾ.ಸ್ಕಂ. ೩, ಅ. ೧೬)

**ನಂದ ಸುನಂದ :** (ಕೀ. ೫೭, ನು. ೪೩)

ವಿಷ್ಣುಕಿಂಕರರು. (ಭಾ. ಸ್ಕಂ. ೮, ಅ. ೨೧)

**ಹಯವದನ :** (ಕೀ. ೫೭, ನು. ೨೪)

ಮಧುಕೈಟಭರೆಂಬ ದಾನವರನ್ನು ವಿಷ್ಣು ಹಯವದನಾವತಾರಿಯಾಗಿ ಸಂಹರಿಸುತ್ತಾನೆ.

(ಭಾ. ಸ್ಕಂ. ೧೦, ಅ. ೪೦)

**ಹನುಮದಂಸಗಮನ :** (ಕೀ. ೫೭, ನು. ೨೭)

ರಾಮರಾವಣರ ಯುದ್ಧದ ಸಂದರ್ಭದಲ್ಲಿ ರಾವಣನು ರಥದಲ್ಲಿಯೂ, ರಾಮನು ನೆಲದ ಮೇಲೂ ನಿಂತಿದ್ದಾಗ, ಹನುಮಂತನು ರಾಮನನ್ನು ಹೆಗಲಲ್ಲಿ ಹೊತ್ತುಕೊಂಡು ಆ ಮೂಲಕ ಅವನ ವಾಹನವಾಗಿ ತನ್ನ ಭಕ್ತಿಯನ್ನು ವ್ಯಕ್ತಪಡಿಸಿದ. (ಆನಂದ ರಾಮಾಯಣ, ಸಾರ ಕಾಂಡ, ಸರ್ಗ ೧೦)

**ಗಜಪಾಲ :** (ಕೀ. ೬೩, ಪ.)

ಪಾಂಡ್ಯದೇಶದ ಅರಸನಾದ ಇಂದ್ರದ್ಯುಮ್ನ ವಿಷ್ಣುಭಕ್ತ. ಒಮ್ಮೆ ಈತನು ನಿಷ್ಠೆಯಲ್ಲಿದ್ದಾಗ ತನ್ನಲ್ಲಿಗೆ ಬಂದ ಅಗಸ್ತ್ಯಮಹರ್ಷಿಯನ್ನು ಗೌರವಿಸದ ಕಾರಣ, ಆನೆಯ ಜನ್ಮವನ್ನು ಪಡೆಯುವಂತೆ ಶಾಪಗ್ರಸ್ತನಾಗಿ ಆನೆಯಾಗುತ್ತಾನೆ. ಒಂದು ದಿನ ಪದ್ಮಸರೋವರದಲ್ಲಿ ನೀರು ಕುಡಿಯುತ್ತಿದ್ದಾಗ ಒಂದು ಮೊಸಳೆ ಆನೆಯ ಕಾಲನ್ನು ಹಿಡಿಯಿತು. ಆಗ ಆನೆ ವಿಷ್ಣುವನ್ನು ಪ್ರಾರ್ಥಿಸಲು ಅವನು ಓಡಿ ಬಂದು ಚಕ್ರಾಯುಧದಿಂದ ಮೊಸಳೆಯನ್ನು ಕೊಂದು ಆನೆಯನ್ನು ರಕ್ಷಿಸುತ್ತಾನೆ.

(ಭಾ. ಸ್ಕಂ. ೮, ಅ. ೩)

**ಅಷ್ಟದಿಗ್ಗಜಗಳು :** (ಕೀ. ೬೩, ಪ.)

ಐರಾವತ, ಪುಂಡರೀಕ, ವಾಮನ, ಕುಮುದ, ಅಂಜನ, ಪುಷ್ಪದಂತ, ಸಾರ್ವಭೌಮ, ಸುಪ್ರತೀಕ.

**ಗಜವದನಜನಕಪಾಲ :** (ಕೀ. ೬೩, ಪ.)

ಶಿವನ ವರದಿಂದಾಗಿ ಭಸ್ಮಾಸುರನು ಯಾರ ತಲೆಯ ಮೇಲೆ ಕೈ ಇಟ್ಟರೂ ಅವರು ಸುಟ್ಟು ಭಸ್ಮವಾಗುತ್ತಿದ್ದರು. ಹೀಗೆ ವರವನ್ನು ಪಡೆದ ಆ ರಾಕ್ಷಸ ಶಿವನಿಗೇ ಮೃತ್ಯುಪ್ರಾಯನಾದಾಗ ಶಿವನು ವಿಷ್ಣುವನ್ನು ಪ್ರಾರ್ಥಿಸುತ್ತಾನೆ. ಆಗ ವಿಷ್ಣು ಮೋಹಿನಿಯ ರೂಪ ಧರಿಸಿ, ಭಸ್ಮಾಸುರನ ಮನಸ್ಸನ್ನಾಕರ್ಷಿಸಿ, ಆಚಮನ ಸಂಕಲ್ಪದ ನೆವದಿಂದ ಭಸ್ಮಾಸುರನು ಹಿಂದೆ ಮುಂದೆ ಆಲೋಚಿಸದೆ ತನ್ನ ಕೈಯನ್ನು ತಲೆಯ ಮೇಲಿಟ್ಟುಕೊಂಡು ಸುಟ್ಟು ಬೂದಿಯಾಗುವಂತೆ ಮಾಡಿದನು.

(ಶ್ವೇತಾದ್ರಿ ಸಂದೇಶ, ಶ್ವೇತಾಚಲ ಮಹಾತ್ಮೆ, ೪-೫ನೆಯ ಅಧ್ಯಾಯಗಳು)

**ಯಯಾತಿಯ ಶಾಪದಿಂ ಯದುವಂಶಕರ್ಕತೆಯಿಲ್ಲರಸುತನಕೆಂದು :** (ಕೀ. ೬೭, ಪ. ೩)

ಯಯಾತಿ ರಾಜನ ಮಗ ಯದು. ಯದುವಿನ ತಾಯಿ ಶುಕ್ರಾಚಾರ್ಯನ ಮಗಳಾದ ದೇವಯಾನಿ. ಶುಕ್ರಾಚಾರ್ಯನ ಶಾಪದಿಂದ ಯಯಾತಿಗೆ ವೃದ್ಧಾಪ್ಯ ಬಂದಾಗ, ಯದುವು ಅವನ ಒಡಹುಟ್ಟಿದವನಾದ ತುರ್ವಸುವೂ ಯಯಾತಿಯ ವೃದ್ಧಾಪ್ಯವನ್ನು ಸ್ವೀಕರಿಸಲು ಒಪ್ಪದಿದ್ದುದರಿಂದ ರಾಜ್ಯಾಧಿಕಾರವನ್ನು ಕಳೆದುಕೊಳ್ಳುತ್ತಾರೆ. ಈ ಕಾರಣದಿಂದಲೇ ಯದುವಂಶದಲ್ಲಿ ಜನಿಸಿದ ಕೃಷ್ಣ, ಕಂಸನನ್ನು ಕೊಂದ ಬಳಿಕ ತಾನು ಸಿಂಹಾಸನವನ್ನೇರದೆ ಕಂಸನ ತಂದೆಯಾದ ಉಗ್ರಸೇನನಿಗೆ ಪಟ್ಟ ಕಟ್ಟುತ್ತಾನೆ. (ಪ್ರನಾಚೂ. ಪೃ. ೫೦೬)

**ಕ್ರೂರಯವನಸಂಹಾರ ಮುಚುಕುಂದೋದ್ಧಾರ :** (ಕೀ. ೬೭. ಸು, ೧೦)

ಕಾಲಯವನ ಗರ್ಗಮಹರ್ಷಿಯ ಮಗ. ಮುಚುಕುಂದ ಸೂರ್ಯವಂಶದ ಮಾಂಧಾತನ ಮಗ. ಕೃಷ್ಣನನ್ನು ಕೊಲ್ಲಲು ಬೆನ್ನಟ್ಟಿಬಂದ ಕಾಲಯವನ ಮುಚುಕುಂದನಿಂದ ಭಸ್ಮವಾದ. ಮುಚುಕುಂದ ಕೃಷ್ಣನ ಅನುಗ್ರಹಕ್ಕೆ ಪಾತ್ರನಾದ. (ಪ್ರನಾಚೂ. ಪೃ. ೧೦೭, ೧೦೮)

**ನಾರಕ........ಬಡಿದ್ಮೊಂತಕಾರಿ :** (ಕೀ, ೬೭, ಸು. ೧೦)

ವಿಷ್ಣು ವರಾಹಾವತಾರಿಯಾಗಿದ್ದಾಗ ಆತನ ದೇಹದಿಂದ ಒಂದು ತೊಟ್ಟು ಬೆವರು ನೆಲದ ಮೇಲೆ ಬೀಳಲಾಗಿ ಭೂದೇವಿಯಲ್ಲಿ ನರಕಾಸುರ ಜನಿಸಿದ. ಭೂದೇವಿ ವಿಷ್ಣುವನ್ನು ಪ್ರಾರ್ಥಿಸಿ ಇವನಿಗೆ ವೈಷ್ಣವಾಸ್ತ್ರವನ್ನು ಕೊಡಿಸಿದಳು. ಇದರಿಂದ ದುರ್ಜಯನಾದ ನರಕಾಸುರ ಲೋಕಕಂಟಕನಾದಾಗ ಕೃಷ್ಣ ಅವನನ್ನು ಕೊಂದು ಅವನ ಅಂತಃಪುರದಲ್ಲಿದ್ದ ಹದಿನಾರುಸಾವಿರ ಮಂದಿ ಸ್ತ್ರೀಯರನ್ನೂ ವಿವಾಹವಾದನು. (ಭಾ. ಸ್ಕಂ. ೧೦, ಅ. ೫೯)

**ನೃಗಪಾಪಹಾರ :** (ಕೀ. ೬೭, ಸು. ೧೧)

ಸೂರ್ಯವಂಶದ ಅರಸು. ಒಂದುಬಾರಿ ಒಬ್ಬ ಬ್ರಾಹ್ಮಣನಿಗೆ ದಾನಮಾಡಿದ್ದ ಆಕಳು ಹೇಗೊ ತಪ್ಪಿಸಿಕೊಂಡು ಮತ್ತೆ ಇವನ ಆಕಳುಗಳ ಮಂದೆಯನ್ನೇ ಸೇರಿತು. ನೃಗ ಅರಿಯದೆ ಅದನ್ನು ಬೇರೊಬ್ಬ ಬ್ರಾಹ್ಮಣನಿಗೆ ದಾನ ಕೊಡುತ್ತಾನೆ. ಮೊದಲ ಬಾರಿ ದಾನ ಪಡೆದವ ಅದನ್ನು ಗುರುತಿಸಿ. ಆ ಇಬ್ಬರು ಬ್ರಾಹ್ಮಣರೂ ಅರಸನ ಬಳಿಗೆ ಹೋಗಿ ಬಹಳ ಕಾಲ ಕಾದಿದ್ದರೂ ಅರಸನ ದರ್ಶನ ದೊರೆಯದಿದ್ದಾಗ, ಅರಸನಿಗೆ ಓತಿಯ ಜನ್ಮ ಬರಲೆಂದು ಶಾಪಕೊಡುತ್ತಾರೆ. ನೃಗ ಬ್ರಾಹ್ಮಣರ ಶಾಪ ಕೇಳಿ ಮರೆಹೊಕ್ಕಾಗ ಕೃಷ್ಣನಿಂದ ಶಾಪವಿಮೋಚನೆಯಾಗುವುದೆಂದು ಹೇಳುತ್ತಾರೆ. ಓತಿಯಾಗಿ ತನ್ನ ಉದ್ಯಾನದ ಬಿಲವೊಂದರಲ್ಲಿದ್ದ ಈ ಅರಸ, ಕೃಷ್ಣ ಅಲ್ಲಿಗೆ ಬಂದಾಗ ತನ್ನ ಪೂರ್ವಜನ್ಮದ ಕಥೆಯನ್ನು ಹೇಳಿ ಶಾಪವಿಮುಕ್ತನಾಗುತ್ತಾನೆ. (ಪ್ರನಾಚೂ. ಪೃ. ೩೮೬)

**ಹಾರುವರಿಗೆ ಕುಮಾರರನು ಕೊಟ್ಟ :** (ಕೀ. ೬೭, ಸು. ೧೧)

ಅರ್ಜುನನ ಪ್ರತಿಜ್ಞೆಯ ಪೂರೈಕೆಗಾಗಿ ಶ್ರೀಕೃಷ್ಣನು ಪುತ್ರಶೋಕದಿಂದ ಮರುಗುತ್ತಿದ್ದ ಬ್ರಾಹ್ಮಣನೊಂದಿಗೆ ಕೂಡಿ ಅನಂತಾಸನಕ್ಕೆ ಹೋಗಿ ಅಲ್ಲಿದ್ದ ಆ ಬ್ರಾಹ್ಮಣನ ನಾಲ್ವರು ಮಕ್ಕಳನ್ನು ತಂದು ಅವನಿಗೆ ಒಪ್ಪಿಸಿದನು. (ಶ್ರೀಜ, ಪೃ. ೨೦೦)

**ದಂತವಕ್ರ(ಕ್ರ)** : (ಕೀ. ೬೭, ಪ. ೧೨)

ಇವನು ವೃದ್ಧಶರ್ಮ-ಶ್ರುತದೇವಿಯರ ಮಗ. ಶಿಶುಪಾಲ, ಸಾಳ್ವ, ಪೌಂಡ್ರಕರ ಆಪ್ತಮಿತ್ರ. ಕೃಷ್ಣನಿಂದ ಶಿಶುಪಾಲ ವಧೆಯಾದುದನ್ನು ಕೇಳಿ. ದ್ವಾರಕೆಯ ಮೇಲೆ ದಂಡೆತ್ತಿ ಬರುತ್ತಾನೆ. ಕೃಷ್ಣನನ್ನು ಎದುರಿಸಿ ಆತನ ಕೌಮೋದಕಿಯೆಂಬ ಗದೆಗೆ ಆಹುತಿಯಾಗುತ್ತಾನೆ.

(ಭಾ. ಸ್ಕಂ. ೧೦; ಅ. ೭೮)

## ಅನುಬಂಧ ೨

# ಕಠಿಣ ಶಬ್ದಗಳ ಅರ್ಥ

ಅಂಕ—ತೊಡೆ
ಅಂಕುರ—ಮೊಳಕೆ, ನೀರು
ಅಂಚಲು—ಸೆಡಹು ಕೆಳಗೆ ಒತ್ತಲು
ಅಂಚಿತ—ಹೊಳೆಯುವ
ಅಂತಶ್ಚುಚ್ಚ—ಅಂತಃಕರಣಕ್ಕೆ ಹಚ್ಚಿಕೊಂಡು
ಅಂಬಕ—ಕಣ್ಣು
ಅಂಬರ—ವಸ್ತ್ರ
ಅಂಬಷ್ಟ—ಮಾವುತ
ಅಂಸ—ಹೆಗಲು
ಅಕೂಪಾರ—ಆಮೆ
ಅಗ್ಗರಜ, ಅಗ್ರಜ—ಅಣ್ಣ
ಅಘಮರ್ಷಣ—ಪಾಪನಾಶಕವಾದ ಋಗ್ವೇದದ ಒಂದು ಸೂಕ್ತ
ಅಜಾತ—ವಿಷ್ಣು, ಹುಟ್ಟು ಇಲ್ಲದ
ಅಟಣೆ—ತಿರುಗಾಟ
ಅಟ್ಟುಳಿ—ಕಾಟ
ಅಣುಗ—ಮಗ
ಅಧೋಕ್ಷಜ—ಕೃಷ್ಣ
ಅನಡುಹ < ಅನಡ್ವ?—ಎತ್ತು
ಅನಭಿಜ್ಞರು—ಅರಿಯದವರು
ಅನ್ನಕ್ಕೆ ಮೊದಲೆ—ಊಟಕ್ಕೆ ಮೊದಲೆ
ಅನ್ವಯ—ವಂಶ
ಅಪತ್ಯ—ಮಕ್ಕಳು
ಅಪವರ್ಗ—ಮೋಕ್ಷ
ಅಪಸರ್ಪಣ—ಹಿಂದಕ್ಕೆ ಹೋಗುವುದು
ಅಪಾಂಗ—ಕಡೆಗಣ್ಣನೋಟ
ಅಬ್ದ—ವರ್ಷ, ಮೋಡ
ಅಭ್ರ—ಮೋಡ
ಅಭಿಜ್ಞ—ಚೆನ್ನಾಗಿ ತಿಳಿದವನು
ಅಮರ್ದು—ಆಕ್ರಮಿಸಿ
ಅಮರೋತ್ತಂಸ—ಅಮರ ಶ್ರೇಷ್ಠ
ಅರ್ದಿತರಾಗಿ—ನೆನೆದು
ಅರ್ಭಕ—ಎಳೆಯ ಮಗು
ಅರಾತ್ನಿ < ಅರತ್ನಿ—ಮೊಳಕೈ
ಅರೆ—ಚಕ್ರ
ಅವಜ್ಞ—ಅಲಕ್ಷ್ಯ
ಅಶನ—ಆಹಾರ
ಅಸಂಪ್ರಜ್ಞಾತರು—ಕೇವಲ ಪರಮಾತ್ಮನ ಧ್ಯಾನದಲ್ಲಿ ರತರಾಗಿ ಹೊರಗಿನ ಅರಿವಿಲ್ಲದವರು
ಅಸಿಯರು—ಚಿಲುವೆಯರು
ಅಹಸ್ಸು—ಹಗಲು
ಅಹಿಪ—ಆದಿಶೇಷ
ಅಳಕ—ಮುಂಗುರುಳು
ಆಜ್ಯ—ತುಪ್ಪ
ಆತತಾಯಿ—ಕೊಲೆಪಾತಕಿ, ದುಷ್ಟ
ಆತಪತ್ರ—ಕೊಡೆ
ಆಪಣ—ಅಂಗಡಿ
ಆಮಯ—ರೋಗ
ಆಮೋದ—ಸುವಾಸನೆ
ಆರ್ತಿ, ಆರ್ತ—ಸಂಕಟ
ಆವು—ಹಸು
ಆಶೀವಿಷ—ಹಲ್ಲಿನಲ್ಲಿ ವಿಷವುಳ್ಳದ್ದು, ಹಾವು

ಆಸ್ಯ—ಮುಖ
ಇಂಚಿದ—ಕೆಳಕ್ಕೆ ಹಾರಿದ
ಇಂದ್ರಚಾಪ—ಕಾಮನಬಿಲ್ಲು
ಇಚ್ಚೈಸೆ—ಇಷ್ಟಪಟ್ಟು
ಇಭ—ಆನೆ
ಇರಸಲ್ಮಳೆ—ಎರಚಲು ಮಳೆ
ಇರುಕಳು < ಇರಿಕುಳಿ—ಜೋರಿ ಮುಂತಾದ ಕೊಂಬಿನ ಪ್ರಾಣಿ
ಇಸು—ಬಾಣ ಪ್ರಯೋಗ ಮಾಡು
ಈಡ್ಯ—ಹೊಗಳಲ್ಪಟ್ಟ
ಈಪ್ಸಿತ—ಇಚ್ಛಿತ
ಉಕ್ಕು—ಸೊಕ್ಕು
ಉಗ್ಗಡ—ಶ್ರೇಷ್ಠ
ಉಚ್ಚಿಲೀಂದ್ರ—ನಾಯಿಕೊಡೆ
ಉತ್ತಮಾಂಗರುಹ—ತಲೆಕೂದಲು
ಉತ್ಪಲ—ಕನ್ನೈದಿಲೆ
ಉತ್ಸರ್ಪಣ—ಮೇಲಕ್ಕೆ ಹೋಗುವುದು
ಉತ್ಥಾಪನ—ಏಳುವುದು
ಉತ್ಪಾತ—ಅಪಶಕುನ
ಉದ್ದಂಡ—ಪರಾಕ್ರಮಿ
ಉಪಾಯನ—ಕಾಣಿಕೆ
ಉಪೇತ—ಕೂಡಿದ
ಉಮ್ಮಯ—ಶ್ರೇಷ್ಠ, ಆನಂದ
ಉರ—ಎದೆ
ಉರೋಜ—ಸ್ತನ
ಊಡು—ಉಣಿಸು
ಊರ್ಮಿ—ದೊಡ್ಡ ಅಲೆ
ಊರು—ತೊಡೆ
ಋಕ್ಷ—ನಕ್ಷತ್ರ
ಎರಳೆ—ಜಿಂಕೆ
ಎಲರ್—ಗಾಳಿ
ಏಕಾಂತಿಗಳು—ವಿಷ್ಣುವಿನ ಹೊರತಾಗಿ ಅನ್ಯರನ್ನು ಭಜಿಸದವರು
ಏತತ್ಪೂರ್ವಾದಿ—ಈ ಪೂರ್ವದಲ್ಲಿ
ಐದಿರಿ—ಹೋಗಿರಿ
ಐದೆತನ—ಮುತ್ತೈದೆತನ
ಒಕ್ಕಲು—ಪ್ರಜೆಗಳು
ಓತಪ್ರೋತ—ಎಲ್ಲ ಕಡೆಗೆ ಹಬ್ಬು
ಓಷ್ಠ—ತುಟಿ
ಔಕಸ—ಮನೆ, ವಾಸಸ್ಥಳ
ಔದುಂಬರ—ಅತ್ತಿಮರ
ಕಂಧರ—ಕುತ್ತಿಗೆ
ಕಕ್ಷಾಶವ—ಅಗ್ನಿ
ಕಕುದಿ—ಗೂಳಿ
ಕಟಕ—ಬಳೆ
ಕಟಿ—ನಡು
ಕಣ್ಣ—ಹಗ್ಗ
ಕದನಚೌಪಟ < ಕದನ ಚೌಪಟಮಲ್ಲ ?—ಮಹಾ ಪರಾಕ್ರಮಿ
ಕಪಿಪ್ಲವನ—ಮರಕೋತಿಯಾಟ
ಕಬರಿ—ಹೆರಳು
ಕಮನೀಯ—ಮನೋಹರ
ಕರ್ಕಟಿಕ ಫಲ—ಕರಬೂಜದ ಹಣ್ಣು
ಕರಜ—ಬೆರಳು
ಕರಿಕರ(ರಾ)ಭ—ಆನೆಯ ಸೊಂಡಿಲಿನಂತಿರುವ
ಕರಿಶಾವಕ—ಆನೆಯಮರಿ
ಕಲತ್ರ—ಹೆಂಡತಿ
ಕಲಧೌತಾಂಬರ—ಪೀತಾಂಬರ
ಕಲವಿಂಕ—ಗುಬ್ಬಚ್ಚಿ
ಕಲಿಹರ್ತ—ಕಲಿಯನ್ನು ಕೊಂದವನು, ಕಲ್ಕಿ
ಕಲೋಚ್ಚಾರ—ಮಧುರ ಧ್ವನಿ
ಕವೇರಕುವರಿ—ಕಾವೇರಿ
ಕಸವು—ಹಾಸಿಗೆ

ಕಾಂಚೀದಾಮ—ಚಿನ್ನದ ಡಾಬು
ಕಾಕಪಕ್ಷ—ಚಂಡಿಕೆ
ಕಾಮ್ಯಕರ್ಮ-ಫಲಾಪೇಕ್ಷೆಯಿಂದ ಮಾಡುವ ಕರ್ಮ
ಕಾರಂಡ—ಒಂದು ಬಗೆಯ ನೀರುಹಕ್ಕಿ
ಕಾರಣಿಕ—ಅವತಾರ ಪುರುಷ
ಕಾರುಕ—ಶಿಲ್ಪಿ
ಕಾಶ—ಕಾಂತಿ
ಕಾಳಿಂದಿ—ಯಮುನಾ ನದಿ
ಕಿಂಕಿಣಿ—ಕಿರುಗೆಜ್ಜೆ
ಕಿಂಶುಕ—ಮುತ್ತುಗದ ಮರ
ಕಿತವ—ಸುಳ್ಳುಗಾರ
ಕೀರ—ಗಿಳಿ
ಕುಂದ—ಕೋಲು ಮಲ್ಲಿಗೆ ಹೂ
ಕುಕ್ಷಿ > ಕುಕ್ಕಿ—ಹೊಟ್ಟೆ
ಕುಕ್ಕುರ—ನಾಯಿ
ಕುಠಾರ—ಕೊಡಲಿ
ಕುಣಪ—ಮರಿ
ಕುದಾರ < ಕುದ್ದಾರ—ಗುದ್ದಲಿ
ಕುರಂಗ—ಜಿಂಕೆ
ಕುರರಿ—ಹೆಣ್ಣು ಮರಕೂಟವಕ್ಕಿ
ಕುರವಕ—ಗೋರಂಟಿಮರ
ಕ್ಷುಧೆ—ಹಸಿವು
ಕೂಲ—ದಡ
ಕ್ಷುರಶೃಂಗ—ಚೂಪಾದ ಕೋಡುಳ್ಳವನು
ಕೃಷ್ಣಸಾರ—ಚಿಗರೆ
ಕೆಲದಿ—ಗೆಳತಿ
ಕೇತು—ಬಾವುಟ
ಕೇಯೂರ—ತೋಳುಬಂದಿ
ಕೇಸರ—ಕುಂಕುಮ ಕೇಸರಿ
ಕೈತವ—ವಂಚನೆ
ಕೋಟರ—ಡೊಗರು
ಕೋಲ—ಹಂದಿ

ಕೋವಿದರು—ಪಂಡಿತರು
ಕೋವಿದಾರ—ಮದ್ದುಗಣಿಕೆಯ ಗಿಡ
ಕೌಮುದಿ—ಬೆಳದಿಂಗಳು
ಕೌಸ್ತುಭ—ವಿಷ್ಣುವಿನ ಎದೆಯಲ್ಲಿರುವ ಒಂದು ರತ್ನ.
ಖರ—ಕತ್ತೆ
ಖಳವಿದಾರಣ—ದುಷ್ಟನಾಶಕ
ಗಂಡ—ಕೆನ್ನೆ
ಗವ್ಯಾಮೃತ—ಹಾಲು
ಗಹಣ—ತೊಂದರೆ
ಗಳ—ಕೊರಳು
ಗಾಥಾ > ಗಾಥೆ—ಹಾಡು
ಗ್ರೀವ—ಕುತ್ತಿಗೆ
ಗುಂಡಿಗೆ—ಎದೆ
ಗುಡಾಳಕ—ಗುಂಗುರು ಗುಂಗುರಾದ ಮುಂಗುರುಳು
ಗೃಹಮೇಧಿ—ಗೃಹಸ್ಥಾಶ್ರಮಿ
ಗೇಹ—ಮನೆ
ಗೈರಿಕ—ಕಾವಿಕಲ್ಲು
ಗೊಂದಣ—ಗುಂಪು
ಗೋಖುರ—ಗೋವಿನ ಕಾಲಿನ ಗೊರಸು
ಗೋದೋಹನ—ಆಕಳು ಕರೆಯುವುದು
ಗೋಪ್ತ—ರಕ್ಷಿಸುವವನು
ಗೋರಸ—ಹಾಲು
ಗೋವೆರು—ಗೊಲ್ಲಸ್ತ್ರೀಯರು
ಗೋಷ್ಠ—ಗೋಕುಲ
ಘರಟ್ಟ—ಬೀಸುವ ಕಲ್ಲು
ಚಂಚುಪುಟ—ಹಕ್ಕಿಯ ಕೊಕ್ಕು
ಚಕ್ಷುಪುಟ—ಕಣ್ಣು
ಚತ್ವಾರಿ < ಚತ್ವರ ?—ಯಜ್ಞಕ್ಕಾಗಿ ಚೌಕವಾಗಿ ಸಮತಟ್ಟು ಮಾಡಿದ ನೆಲ
ಚತುರ್ದಶ—ಹದಿನಾಲ್ಕು
ಚರ್ಮ—ಗುರಾಣಿ
ಚಷಕ—ಪಾನ ಪಾತ್ರೆ

ಚುನ್ನ—ನಿಂದೆ
ಚುಬುಕ—ಗಲ್ಲ
ಚೂರ್ಣಿಸು—ನಾಶಮಾಡು
ಚೈದ್ಯ—ಶಿಶುಪಾಲ
ಛಂದಸ್ಸು—ವೇದ
ಜಂಘೆ—ಕಿರುದೊಡೆ
ಜಂಬು—ನೇರಳೆ ಹಣ್ಣು
ಜಗತಿ—ಜಗಲಿ
ಜಗುಳಿಸಿ—ಜಾರಿಸಿ
ಜರಠ—ವೃದ್ಧ
ಜವ—ಯಮ, ಬೇಗ
ಜಾತ—ಹುಟ್ಟಿದ
ಜಾತಿ—ಜಾಜಿ ಮಲ್ಲಿಗೆ
ಜಾನು—ಮೊಳಕಾಲು
ಜೀಮೂತ—ಮೋಡ
ಝಷ—ಮೀನು
ಟವಟವಿಸು—ಮಿಂಚು
ಡೆಂಡಣಿಸು—ಬೆದರಿಕೆಯಿಂದ ನಡುಗು
ತಟಿತ್—ಮಿಂಚು
ತಣಿರು, ತಳಿಲು, ತಳಿರು—ಚಿಗುರು
ತಮಸು—ಕತ್ತಲೆ
ತವ—ನಿನ್ನ
ತ್ವಚೆ—ತೊಗಟೆ
ತ್ವರಿಯ—ವೇಗವಾಗಿ
ತಾಂಡವ—ನೃತ್ಯದ ಒಂದು ಪ್ರಭೇದ
ತಾಮ್ರ—ಕೆಂಪುಬಣ್ಣ
ತಾಳಹಸ್ತ—ತಾಳೆ ವೃಕ್ಷವನ್ನು ಹಿಡಿದ ಕೈ
ತ್ರಾಸ—ಕಷ್ಟ
ತ್ರಾಹಿ—ರಕ್ಷಿಸು
ತಿಗ್ಮ—ತೀಕ್ಷ್ಣವಾದ
ತಿತ್ತಿರಿ—ಒಂದು ಜಾತಿಯ ಪಕ್ಷಿ
ತಿರ್ಯಕ್‌ಜಾತಿ—ಪಶುಪಕ್ಷಿ ಮುಂತಾದ ಪ್ರಾಣಿವರ್ಗ

ತ್ರಿವಳಿ—ಹೊಟ್ಟೆಯ ಮೇಲಿನ ಮೂರು ಗೆರೆಗಳು
ತೀವಿದ—ತುಂಬಿದ
ತುಂಡ—ಮೂತಿ
ತುಡುಗಲಿ—ತುಂಟತನದಿಂದ, ಕಳ್ಳತನದಿಂದ
ತುಪ್ಪಿರಿ, ತೂಟರಿ—ಧ್ವನಿಮಾಡು
ತುಷ್ಟ—ತಣಿದ
ತ್ರುಟಿ—ಕ್ಷಣ
ತೋಕರು—ಮಕ್ಕಳು
ದಂಭ—ಮೋಸ, ಮೋಸಗಾರ
ದಂಭೋಳಿ—ಇಂದ್ರನ ವಜ್ರಾಯುಧ, ಇಂದ್ರ?
ದಟ್ಟಡಿ, ದಟ್ಟಸಾಲು—ತಪ್ಪುಹೆಜ್ಜೆ
ದಧಿಮಥನ—ಮೊಸರು ಕಡೆಯುವುದು
ದಧ್ಯೋದನ—ಮೊಸರನ್ನ
ದಶಪ್ರಮತಿ—ಮಧ್ವಾಚಾರ್ಯರು
ದಾಂತ—ಉದಾರ
ದಾಂತ—ಒಂದು ಮರದ ಹೆಸರು
ದಾಡಿಮ—ದಾಳಿಂಬೆ
ದಾಮ—ಡಾಬು, ಹಾರ
ದಾಮಕರ್ತ—ಮಾಲೆಗಾರ
ದಿಕ್ಷು—ದಿಕ್ಕು
ದಿಷ್ಟ್ಯ—ಶತ್ರು?
ದ್ವಿಜ—ಹಕ್ಕಿ, ಬ್ರಾಹ್ಮಣ, ನಕ್ಷತ್ರ
ದ್ವಿಪ—ಆನೆ
ದುಗ್ಧಾಬ್ಧಿ—ಹಾಲಿನ ಸಮುದ್ರ
ದುಷ್ಟಜನಾರ್ದನ—ದುಷ್ಟಜನರನ್ನು ನಾಶ ಮಾಡುವವನು
ದ್ಯುಗರು—ದೇವತೆಗಳು
ದ್ರುಮ—ಮರ
ದೂವಾಳಿಸು—ಮುಂದಕ್ಕೆ ಹೊಡೆ
ದೃಕ್ಕು—ಕಣ್ಣು
ದೃಪ್ತ—ಸೊಕ್ಕಿದ
ದೇದೀಪ್ಯ—ಪ್ರಕಾಶಮಾನ

ದೇಹಿಕರು—ಬೇಡುವವರು
ದೈವಜ್ಞ—ಜ್ಯೋತಿಷಿ
ದೋರ್ದಂಡ—ತೋಳು
ದ್ರೋಣಿ—ಕಣಿವೆ, ಗುಹೆ
ಧರ್ಮಾನುಜಾ—ಯಮುನೆ
ಧವ—ಗಂಡ
ಧ್ವಸ್ತ—ನಾಶ
ಧಾತ್ರಿ—ದಾಸಿ
ಧ್ವಾಂತ—ಕತ್ತಲೆ
ಧೂರ್ಯ<ಧುರ್ಯ—ಮುಂದಾಳು
ಧೇನುಕ—ಕತ್ತೆ
ಧೇನುಪಳ್ಳಿ—ಗೋಕುಲ
ನತಿಸು—ಬಾಗು
ನಪ್ತೃ—ಮೊಮ್ಮಗ
ನರ್ಮ—ಚೇಷ್ಟೆ
ನ್ಯಗ್ರೋಧ ಪತ್ರ—ಆಲದ ಎಲೆ
ನಾಗ—ಆನೆ, ಲವಂಗದ ಗಿಡ
ನಾಗವಲ್ಲಿ—ವೀಳ್ಯದೆಲೆ
ನಿಕೃಂತ<ನಿಕೃತ ?—ತೆಗೆದುಹಾಕಿದ
ನಿಭ—ಸದೃಶ, ಕಪಟ
ನಿರ್ಘೃಣಿ—ಕ್ರೂರಿ
ನಿರ್ವಾಣ—ಮುಕ್ತಿ
ನಿರಯ—ನರಕ
ನಿರಸ್ತ—ಚದುರಿಸಲ್ಪಟ್ಟ
ನಿಸ್ಸೃತ—ಹೊರಬಿದ್ದ
ನೀಕರಿಸು—ನಿರಾಕರಿಸು
ನೀಪ—ಕಡಡದ ಮರ
ನೀರಾಜಿಸು—ಆರತಿಯನ್ನು ಎತ್ತು
ನೀಲಾಂಬುದ—ಕರಿಮೋಡ
ನೀವಿ—ನೆರಿಗೆಕಟ್ಟು
ನೃಶಂಸ—ಕ್ರೂರಿ
ನೂರಜು—ಸಣ್ಣ ಜಾತಿಯ ಸೊಳ್ಳೆ

ಪಕ್ಷ್ಮ—ಕಣ್ಣಿನ ರೆಪ್ಪೆ
ಪಠರ—ಮಣ್ಣಿನ ಪಾತ್ರೆ
ಪಪ್ಪಡ—ಹಪ್ಪಳ
ಪಯೋದ—ಮೋಡ
ಪಯೋಧರ—ಸ್ತನ
ಪರಲಾಪಿಸೆ—ಪ್ರಲಾಪಿಸೆ
ಪರಾಣ್ಬು<ಪರಾಯಣ?—ಆಸಕ್ತಿ
ಪರಾಮೃಶ—ಉಪಚಾರ
ಪರಿಖಿ<ಪರಿಖಾ—ಕಂದಕ
ಪರಿಘ—ಗದೆ
ಪರಿರಂಭ—ಅಪ್ಪುಗೆ
ಪರಿವೇಷಣ—ಸುತ್ತು
ಪಶ್ಚಾತ್—ಅನಂತರ
ಪ್ರವಣರು—ಭಕ್ತರು
ಪ್ರವಾಳ—ಚಿಗುರು
ಪ್ರಸೂನ—ಹೂ
ಪಾಂಡುರ—ಹಳದಿ ಮಿಶ್ರಿತ ಬಿಳಿ ಬಣ್ಣ
ಪಾಂಸು—ಧೂಳು
ಪಾಟಲ—ಪಾದರಿಯ ಹೂ
ಪಾಣಿ—ಕೈ
ಪಾದಸಂಹನ—ಪಾದವನ್ನು ತೊಳೆಯುವುದು
ಪಾರ್ಷದ—ಸೇವಕ
ಪಾರಾವತ—ಪಾರಿವಾಳ
ಪಾಳೆಯ—ಬೀಡು
ಪ್ರಾಕ್—ಪೂರ್ವಕಾಲ
ಪ್ರಾವೃಟ್—ಮಳೆಗಾಲ
ಪ್ರಾವೃತರು—(ಸಂಸಾರದಿಂದ) ಮುತ್ತಲ್ಪಟ್ಟವರು
ಪಿಕ—ಕೋಗಿಲೆ
ಪಿಪ್ಪಲ—ಅರಳಿಮರ
ಪೀನ—ತುಂಬಿದ
ಪೀವರ—ದೊಡ್ಡ, ಪುಷ್ಟ
ಪುಂಡರೀಕ—ಬಿಳಿಯ ತಾವರೆ

ಪುಂಸ–ಪುರುಷ
ಪುನ್ನಾಗ–ಬಿಳಿಯ ಕಮಲ, ಸುರಹೊನ್ನೆ
ಪುಷ್ಕರಿಣಿ–ಸರೋವರ
ಪುಳಿಂದೆ–ಬೇಡತಿ
ಪುಳಿನ ಸ್ಥಳ–ಮರಳಿನ ದಡ
ಪೂತ–ಗರಿಗೆದರಿದ, ಪವಿತ್ರ
ಪೂವಳೆ–ಹೂವಿನ ಮಳೆ
ಪೃಥಕ್–ಬೇರೆ
ಪೃಥು–ದೊಡ್ಡ
ಪೇಶಲ, ಪೈಶಲ–ಸುಂದರವಾದ, ಪವಿತ್ರವಾದ
ಪ್ರೇಷ್ಠ–ಪ್ರಿಯತಮೆ
ಪೋಚ–ನೀಚ
ಪೌಗಂಡ, ಪೋಗಂಡ–ವಯಸ್ಸಿಗೆ ಬರದ ಬಾಲಕ
ಬಕ್ಕೆ–ಒಂದು ಜಾತಿಯ ಹಲಸಿನ ಹಣ್ಣು
ಬದರ–ಹತ್ತಿಗಿಡ
ಬರ್ಹ–ನವಿಲುಗರಿ
ಬರ್ಹಿ–ನವಿಲು
ಬವ್, ಬವ್ವ–ಗುಮ್ಮ
ಬಾಹನ್ನೆಗ–ಬರುವವರೆಗೆ
ಬಿತ್ತರಿಸಿ–ವಿಸ್ತರಿಸಿ
ಬಿಸ–ತಾವರೆಯ ದೇಟು
ಬಿಸಳಿಗೆ–ಗಡಿಗೆ
ಬಿಸಿಲದೊರೆ–ಬಿಸಿಲ್ಗುದುರೆ
ಬೆಜ್ಜರ–ಕಕ್ಕಾಬಿಕ್ಕಿ
ಬೇಕಾರ್ಚಣ–ಬೇಕಾದ ಪೂಜೆ
ಬೇಟ–ಪ್ರಣಯ
ಬೊಗರಿ–ಬುಗುರಿ
ಭಜಿಸು, ಭಜ್ಜಿಸು–ಭಾಗಮಾಡು
ಭಾಗಧೇಯ–ದೈವ
ಭಾಜನ–ಯೋಗ್ಯ
ಭಾನುಭಾ–ಸೂರ್ಯನಂತೆ ಹೊಳೆಯುವವನು
ಭಾಲ–ಹಣೆ
ಭಾವಕಿಯರು–ಸದಭಿರುಚಿಯುಳ್ಳವರು
ಭಾಸುರ–ಚೆಲುವಾದ
ಭಾಳ–ಬಹಳ
ಭ್ರಾಜತ್–ಹೊಳೆಯುವ
ಭೀರುನೇತ್ರೆ–ಬೆದರುಗಣ್ಣಿನವಳು
ಭುಕ್ತಿ–ಊಟ
ಭೂತ–ಪ್ರಾಣಿ
ಭೂಭುಜ–ಅರಸು
ಭೂರುಹ–ಭೂಮಿಯಲ್ಲಿ ಬೆಳೆಯುವುದು. ಮರ, ಗಿಡ ಇತ್ಯಾದಿ
ಭ್ರೂ, ಭ್ರುಕುಟಿ–ಹುಬ್ಬು
ಭೇಕ–ಕಪ್ಪೆ
ಮಂಡನ–ಆಭರಣ
ಮಚ್ಚು–ಪ್ರೀತಿ
ಮಡುಹು–ಕೊಲ್ಲು
ಮತ್–ನನ್ನ
ಮದ್ದಿಕಾಯಿ–ಮಕ್ಕಳಿಗೆ ಹಾಕುವ ಮತ್ತಿಕಾಯಿಯ ಆಕಾರದ ಒಂದು ಆಭರಣ
ಮನಸ್ವಿಯರು–ಮನಸ್ಸುಳ್ಳವರು
ಮನ್ಯರು–ಮಾನ್ಯರು
ಮರ್ದಿಸು–ಒತ್ತು, ನಾಶಮಾಡು
ಮರ್ಷಣ<ಮರ್ಷಣಂ–ತೊಳೆಯುವುದು
ಮರಾಳ–ಹಂಸ
ಮಲಯಜ–ಶ್ರೀಗಂಧ
ಮಹಿಜ, ಮಹೀಜ–ಭೂಮಿಯಲ್ಲಿ ಹುಟ್ಟಿದುದು. ಮರ, ಗಿಡ ಇತ್ಯಾದಿ
ಮಹೀಧ್ರ–ಪರ್ವತ
ಮಾ–ಲಕ್ಷ್ಮಿ
ಮಾಂಶಾವೇಶರು–ಲಕ್ಷ್ಮಿಯ ಅಂಶಾವೇಶವುಳ್ಳವರು
ಮಾತುಳ–ಸೋದರ ಮಾವ
ಮಾರ್ಗಣ–ಬಾಣ

ಮಿಸುನಿ, ಹಾಟಕ—ಚಿನ್ನ
ಮಿಸುಳಿಸಿ—ಸೇರಿಸಿ
ಮುಂಗೈ ಮುರಿಗೆ—ಕೈಗೆ ಧರಿಸುವ ಒಂದು ಆಭರಣ
ಮುಕ್ತಾಮುಕ್ತರು—ಮುಕ್ತರು ಮತ್ತು ನಿತ್ಯ ಸಂಸಾರಿಗಳು
ಮುಖವಾಸ—ಬಾಯಿಯನ್ನು ಸುಗಂಧಗೊಳಿಸುವ ಒಂದು ಬಗೆಯ ಸುಗಂಧ ದ್ರವ್ಯ
ಮುಷ್ಟಿಗೆ—ಹಿಡಿ
ಮುತ್ತ—ಅಜ್ಜ
ಮುನಿಕುಲಗೇಯ—ಮುನಿಗಳಿಂದ ಹಾಡಲ್ಪಡುವವನು
ಮೃಗಶಾವ—ಜಿಂಕೆಯ ಮರಿ
ಮೃತ್ತಿಕೆ—ಮಣ್ಣು
ಮೃಷ್ಟ—ಸವಿಯಾದ
ಮೇಗೆ—ಮೇಲೆ
ಮೇಧ—ಯಜ್ಞ
ಮೇಷ—ಕುರಿ
ಮೊಗುವ—ನೀರು ಹಾಕಿಕೊಳ್ಳುವ
ಮೌಳಿ—ಕಿರೀಟ
ಯಜ್ಞೇಶ್ವರ—ವಿಷ್ಣು
ಯವ—ಕೈಯಲ್ಲಿರುವ ಅನ್ನಸೂಚಕವಾದ ಒಂದು ರೇಖೆಯ ಹೆಸರು
ಯಾಜಿ—ಯಜ್ಞ ಮಾಡುವವನು
ಯಾಮಿನಿ, ನಿಶಿ, ನಿಶೀಥ—ರಾತ್ರಿ
ಯಾಮಕ—ಜೇಕಾರ
ಯಾವಸ < ಯವಸಂ—ಹುಲ್ಲು
ರಂಭಾ—ಬಾಳೆಯಗಿಡ
ರಂಹಸ—ವೇಗ
ರಜ—ಧೂಳು
ರಜತ—ನಿರ್ಮಲವಾದ
ರಥಚರಣ—ಚಕ್ರ
ರದನ—ಹಲ್ಲು
ರಾಕಾಚಂದ್ರ—ಹುಣ್ಣಿಮೆಚಂದ್ರ
ರಾಮೆ—ಲಕ್ಷ್ಮಿ
ರಾಮೆಯರು—ಸುಂದರಿಯರು
ರಾಸಭ—ಕತ್ತೆ
ರುಕ್ಷ—ಕ್ರೂರ
ರೇಣು—ಧೂಳಿನ ಕಣ
ರೋಚಿ—ಕಾಂತಿ
ಲಬ್ಧಸಂಜ್ಞದಲಿ—ಎಚ್ಚರಹೊಂದಿ
ಲವ—ವೇಳೆಯ ಕಿರಿಯಳತೆ
ಲಸತ್—ಪ್ರಕಾಶವುಳ್ಳ (ಶ್ರೇಷ್ಠ)
ಲಾಂಗೂಲ—ಬಾಲ
ಲಾಜ—ಬತ್ತದ ಅರಳು
ಲುಂಠಿಸು—ಉರುಳು
ಲೇಹನ—ನೆಕ್ಕುವುದು
ಲೋಲನೇತ್ರ—ಚಂಚಲನೇತ್ರ
ಲೋಲೈಸು—ಚಮಕಿಸು
ಲೌಕಿಕೇಷಣರಿಕ್ತರು—ಐಹಿಕ ಇಚ್ಛೆಯನ್ನು ತೊರೆದವರು
ವಂಶ—ಕೊಳಲು
ವಕ್ತ್ರ—ಮುಖ
ವಟಪತ್ರ—ಆಲದೆಲೆ
ವತ್ಸ—ಕರು
ವದಕಳಿ—ಕಾಲಿನಿಂದಾಡುವ ಒಂದು ಆಟ
ವದಿಸು—ಮಾತನಾಡು
ವನ—ನೀರು
ವನಸ್ರಕ್—ವನಮಾಲೆ
ವರ್ಯ, ವರಿಷ್ಠ—ಶ್ರೇಷ್ಠ
ವಲ್ಗು—ಮನೋಹರ
ವಹಿಲ—ವೇಗ
ವ್ಯಂಜನ—ನಂಚಿಕೊಳ್ಳುವ ಪದಾರ್ಥ
ವ್ಯಜನ—ಬೀಸಣಿಗೆ

ವ್ಯತಿಕರ—ಜೋಡಣೆ
ವ್ಯಸ್ತ—ಚೆಲ್ಲಿದ
ವಾಟಿ—ದಾರಿ
ವಾಮದೃಶಾ—ಸುಂದರವಾದ ಕಣ್ಣು
ವಾರ್ಷ್ಣಿ, ವಾರ್ಷ್ಣೇಯ—ಕೃಷ್ಣ
ವಾರಣ—ಆನೆ
ವಾರಿ—ನೀರು
ವ್ಯಾಜೆ, ವ್ಯಾಜ—ನೆಪ
ವ್ಯಾಸಸೂನು—ಶುಕಮುನಿ
ವಿಕ್ಷೇಪಣ—ಎಸೆಯುವಿಕೆ
ವಿಗಡ—ಕೆಟ್ಟ
ವಿಟಪ—ಪೊದೆ
ವಿತರಣ—ದಾನ
ವಿತ್ತ—ಐಶ್ವರ್ಯ
ವಿದ್ರುಮ—ಹವಳ
ವಿಷಾಣ—ಕೋಡು
ವಿಷ್ಟೆ—ಅಮೇಧ್ಯ
ವಿಷ್ಣುರಾತ<ವಿಷ್ಣುರತ—ವಿಷ್ಣುಭಕ್ತ
ವಿಹಂಗ—ಪಕ್ಷಿ
ವಿಹಂಗಪ,ವಿಹ—ಗರುಡ
ವೀಥಿ—ಬೀದಿ
ವೀರುಧೆ—ಬಳ್ಳಿ
ವೃಂದಾರಕರು—ದೇವತೆಗಳು
ವೃಜಿನ—ಪಾಪ
ವೃಷ, ವೃಷಭ—ಗೂಳಿ
ವೇಷ್ಟಿತ—ಸುತ್ತಲ್ಪಟ್ಟ
ಶಂಸನ—ಹೊಗಳುವಿಕೆ
ಶಕಟ—ಗಾಡಿ
ಶಕಲ—ತುಂಡು
ಶಕುಂತ—ಹಾಲಕ್ಕಿ
ಶರಚರ—ಮತ್ಸ್ಯಾವತಾರಿಯಾದ ಹರಿ
ಶರಧಿಜಾತ—ಚಂದ್ರ

ಶ್ರವಣ—ಕಿವಿ
ಶಾರ್ವರಿ—ರಾತ್ರಿ
ಶಾಸ್ತೃ—ಆಳುವವನು
ಶ್ಯಾಮ, ಶ್ಯಾಮೆ—ಮುಗ್ಧನೆ ಮುಟ್ಟಿಳ
ಶಿಖಿ, ಶಿಖೆ—ಜುಟ್ಟು
ಶಿಖಿ—ನವಿಲು
ಶ್ರೀನಯ—ಲಕ್ಷ್ಮಿಯನ್ನು ಪ್ರೀತಿಸುವವನು, ವಿಷ್ಣು
ಶ್ರುತಿ, ಶ್ರೋತ್ರ—ಕಿವಿ
ಶ್ಯೇನ>ಸೇನೆ—ಗಿಡುಗ
ಶ್ರೋಣಿ—ನಿತಂಬ
ಶೌಂಡ—ಶ್ರೇಷ್ಠ, ಶಕ್ತಿಯುಳ್ಳ
ಸಂದಣಿಸಿದ—ದಟ್ಟವಾಗಿದ್ದ
ಸಂಸೃತಿ—ಸಂಸಾರ
ಸಟಾಂಕ—ಕುದುರೆ
ಸಡಿ—ದೂಷಣೆ
ಸನ್ನಗದ್ಗದ—ಬಹಳ ಗದ್ಗದ (ಸ್ವರ)
ಸನ್ನಿಕರ್ಷಣ—ಸಾಮೀಪ್ಯ
ಸಮರ್ಹಣ—ಪೂಜೆ
ಸರ್ವರೋಗಸ—ಎಲ್ಲ ರೋಗಗಳನ್ನು ನಿವಾರಿಸುವವನು
ಸವ್ಯ—ಎಡಗಡೆ
ಸ್ಕಂದ—ಷಣ್ಮುಖ
ಸ್ಕಂಧ—ಹೆಗಲು
ಸ್ತವಿಸು—ಸ್ತುತಿಸು
ಸ್ಪೃಷ್ಟ—ಮುಟ್ಟಿದ
ಸ್ಪೃಹ, ಸ್ಪೃಹೆ—ಆಸೆ
ಸ್ಯಂದನ—ರಥ
ಸ್ವರ್ಧುನಿ, ಸುರನದಿ—ಗಂಗೆ
ಸಾಯಂತನಿ<ಸಾಯಂತನ—ಸಂಜೆ
ಸಾಯಕ—ಬಾಣ
ಸಾರಸ—ಕೊಕ್ಕರೆ
ಸಾಸಿರಫಣ—ಆದಿಶೇಷ

ಸ್ನಾತ–ಸ್ನಾನಮಾಡಿದ
ಸ್ವಾಪ–ನಿದ್ರೆ
ಸಿಂಗ–ಮಗು
ಸ್ನಿಗ್ಧ–ಮನೋಹರವಾದ
ಸೀಗುರಿ–ಚಾಮರ
ಸೀಮಂತ–ಬೈತಲೆ
ಸೀಮಂತಿನಿ–ಹೆಂಗಸು
ಸೀರ–ನೇಗಿಲು
ಸುಧೆನಿಭ–ಅಮೃತಸಮಾನ
ಸುಪ್ರಾಣ–ಶ್ರೇಷ್ಠವಾದ
ಸುಮಹತಿ–ನಾರದನ ವೀಣೆ
ಸುಯಿಲಡಿ ಇಡು–ಬಿಸುಸುಯ್ಯುತ್ತ ಹೆಚ್ಚಿಯುಸಿರಿಡು
ಸುರಭಿ–ಕಾಮಧೇನು
ಸೂದನ–ನಾಶಮಾಡುವವ
ಸೂನು–ಮಗ
ಸೂಸಕ–ಬೈತಲೆ ಆಭರಣ
ಸೃಜಾಹತ–ಮಾಲೆಯಿಂದ ಹೊಡೆಯಲ್ಪಟ್ಟ
ಸೃಷ್ಟಾರ–ಸೃಷ್ಟಿಸುವವನು
ಸ್ವೇದ–ಬೆವರು
ಸೋರ್ಮುಡಿ–ಜೋಲ್ಮುಡಿ
ಸೋಸಿಲಿ–ಸೌಶೀಲ್ಯದಿಂದ
ಸ್ತೋಭ–ಅವಹೇಳನೆ
ಸೌರಂಭ–ಸಂಭ್ರಮ
ಹಂಗಡ–ಹಗ್ಗ
ಹದರಿ, ಪಾದರಿ–ಪಾಟಲವೃಕ್ಷ
ಹರ್ಮ್ಯ–ಉಪ್ಪರಿಗೆಯ ಮನೆ, ಅರಮನೆ
ಹರವಿ–ಅಗಲಬಾಯಿಯ ಮಣ್ಣಿನ ಪಾತ್ರೆ
ಹರಿ–ಪರ್ವತ, ಕುದುರೆ
ಹರಿಚರ–ಕಲ್ಕಿ
ಹರಿಮಣಿ–ಪಚ್ಚೆ
ಹವಣು–ಪ್ರಮಾಣ

ಹವ್ಯಾನ್ನ–ನೈವೇದ್ಯದ ಅನ್ನ
ಹವಿರ್ಧಾನಿ–ಯಜ್ಞಕ್ಕೆ ಬೇಕಾಗುವ ಹಾಲು, ತುಪ್ಪ ಇತ್ಯಾದಿಗಳನ್ನು ಕೊಡುವವಳು, ಹಸು
ಹಸ್ತಿಪ–ಮಾವುತ
ಹಿಳ್ಳಿಸು–ಹಿಗ್ಗಿಸು
ಹುತಾಶನ–ಅಗ್ನಿ
ಹೂಸಿ–ಪೂಸಿ
ಹೃಷ್ಟೀಯ–ಆನಂದ
ಹೆಡಕು–ಕತ್ತಿನ ಹಿಂಭಾಗ
ಹೈಮಂತನ–ಹೇಮಂತ ಋತುವಿನ
ಹೈಯಂಗವೀನ–ಹೊಸಬೆಣ್ಣೆ
ಹೊಂತಕಾರಿ–ಪರಾಕ್ರಮಿ
ಹೊರೆ–ರಕ್ಷಿಸು

ಅಂಬುಜ, ಅಂಭೋಜ, ಅಂಭೋರುಹ, ಅಬ್ಜ, ಅರವಿಂದ, ಕಂಜ, ತೋಯಜ, ನಳಿನ, ಪಂಕಜ, ಪದ್ಮ, ಪುಷ್ಕರ, ಬಿಸಜ, ವನಜ,ಸರೋರುಹ –ತಾವರೆ

ಅಂಬುಜಸಖ, ಅವಸ್ಕರ, ಇನ, ಚಂಡ, ನೇಸರ್, ವ್ಯೋಮಕ್ರಾಂತ–ಸೂರ್ಯ

ಉಡುಪ, ಚಂದಿರ,ತಾರಾಪತಿ, ದುಗ್ಧಾಬ್ಧಿಯ ಜಾತ, ನಕ್ಷತ್ರಕುಲಪ, ನಿಶಾಕರಭಾ, ಭಾಪತಿ, ರಾಜ, ವಿಧು, ಶಶಾಂಕ, ಶೀತಾಂಶು, ಶಾರ್ವರೀಶ, ಸುಕಲಾನಿಧಿ, ಸೋಮ, ಹರಿಣಾಂಕ–ಚಂದ್ರ

ನಾಕಪ, ಶಕ್ರ, ಶತಯಾಗ, ಸಹಸ್ರಾಕ್ಷ, ಸುತ್ರಾಮ–ಇಂದ್ರ

ಅಧೋಕ್ಷಜ,ಊರುಶ್ರವ, ಕಂಸಾರಿ, ದಾಶಾರ್ಹ, ವಾರ್ಷ್ಣೇಯ, ವೃಷಭ, ಶೌರಿ–ಕೃಷ್ಣ

ಅಜ, ಅಬ್ಜಜ, ನಳಿನಭವ, ವಿಪಿನಸ, ವಿಧಿ, ವೇದೋದರ, ಸತ್ಯೇಶ, ಹಂಸವಾಹನ—ಬ್ರಹ್ಮ

ಅಂಗಜ, ಇನಿಗೋಲ, ಐದಂಬ, ಕಂದರ್ಪ, ಕಬ್ಬುಬಿಲ್ಲ, ದರ್ಪಕ, ಪೂಗಣೆಯ, ಪೂಗೋಲ, ಬಾಣಪಂಚಕ, ಮದನ, ಮನಜ, ಮಾರ, ಮೃಡನಹಿತ, ರತಿಪತಿ, ಸೀಬಿಲ್ಲ,ಸ್ಮರ—ಮನ್ಮಥ

ಕಂದುಗೊರಳ, ತ್ರಿನಯನ, ಪನ್ನಗಭೂಷಣ, ಪಿನಾಕಿ, ಭವ, ಶರ್ವ—ಶಿವ

ನಾಗೇಶನವತಾರ, ರೌಹಿಣೇಯ, ಶುಕ್ಲಕೇಶ, ಸಂಕರ್ಷಣ, ಸಾಸಿರಫಣನವತಾರ, ಸೀರಪಾಣಿ —ಬಲರಾಮ

ಗಾಂದಿನೇಯ, ದಾನಪತಿ, ದಾನೇಶ್ವರ, ಶ್ವಫಲ್ಕಿ —ಅಕ್ರೂರ

ಅಂತಕ, ಜವ, ದಂಡಪಾಣಿ—ಯಮ

ಅವನಿ, ಕ್ಷೋಣಿ, ಧಾರಿಣಿ, ಮಹಿ, ಮೇದಿನಿ —ಭೂಮಿ

ಅಜಗರ, ಅಹಿ, ಉರಗ, ದಂದಶೂಕ, ಭುಜಗ, ವ್ಯಾಳ—ಹಾವು

ಅಬ್ಧಿ, ಅರ್ಣವ, ಜಲಧಿ, ವಾರ್ಧಿ, ವಾರಿಧಿ, ಸಿಂಧು-ಸಮುದ್ರ

ಅಂಬುದ, ಅಬ್ದ, ಅಭ್ರ, ಘನ, ನೀರದ, ಮೇಘ-ಮೋಡ

ಅನೀಕ, ಓಘ, ಕದಂಬ, ಚಮೂ, ಜಂಗುಳಿ, ತತಿ, ನಿಕರ, ನಿಕುರುಂಬ, ನಿಚಯ, ಪ್ರತತಿ, ಮ್ಯಾಳ, ಮೋಹರ, ಯೂಥ, ವ್ರಾತ, ಸಂದೋಹ, ಸ್ತೋಮ-ಸಮೂಹ

## ಅನುಬಂಧ ೩

# ೧. ರಾಗಗಳ ಶಬ್ದಸೂಚಿ


೧ ಆನಂದ ಭೈರವಿ
ಕೀ. ೨೦

೨ ಕನ್ನಡ ಕಾಂಬೋಧಿ
ಕೀ. ೩, ೫೦, ೫೩

೩ ಕನ್ನಡಗೌಳ
ಕೀ. ೧೦, ೨೬, ೩೦, ೩೨

೪ ಕಲ್ಯಾಣಿ
ಕೀ. ೫೮

೫ ಕೇದಾರ
ಕೀ. ೪೨

೬ ಕೇದಾರಗೌಳ
ಕೀ. ೩೧, ೪೩, ೪೪

೭ ಗಾಂಧಾರಿ
ಕೀ. ೭

೮ ಘಂಟಾರವ
ಕೀ. ೨೧, ೩೬

೯ ಜಂಜೂಟಿ
ಕೀ. ೫೦

೧೦ ತೆಲುಗು ಕಾಂಬೋಧಿ
ಕೀ. ೬, ೧೧, ೨೫

೧೧ ತೋಡಿ
ಕೀ. ೩೭, ೫೫

೧೨ ದೇಶಾಕ್ಷಿ
ಕೀ. ೧೯

೧೩ ದೇಸ್
ಕೀ. ೪೯

೧೪ ನಾಟಿ
ಕೀ. ೧, ೨

೧೫ ಪಂತುವರಾಳಿ
ಕೀ. ೧೭, ೬೨

೧೬ ಪಹಡಿ
ಕೀ. ೬೧

೧೭ ಬೇಗಡಾ
ಕೀ. ೩೯

೧೮ ಭೈರವಿ
ಕೀ. ೧೪, ೨೯

೧೯ ಮಧ್ಯಮಾವತಿ
ಕೀ. ೬೦

೨೦ ಮಾಳವ ಶ್ರೀ
ಕೀ. ೬೭

೨೧ ಮುಖಾರಿ
ಕೀ. ೨೭, ೬೪

೨೨ ಮ್ಲೇಚ್ಛಬೌಳಿ
ಕೀ. ೧೨, ೪೭

೨೩ ಮೋಹನ ಕಲ್ಯಾಣಿ
ಕೀ. ೮, ೧೩, ೧೮, ೩೧, ೪೩

೨೪ ರಾಮಕ್ರಿಯಾ
ಕೀ. ೩೩, ೩೪

೨೫ ರೇಗುಪ್ತಿ
ಕೀ. ೧೫, ೨೨, ೨೩, ೨೪

೨೬ ವಸಂತ
ಕೀ. ೫೬

೨೭ ಶಂಕರಾಭರಣ

ಕೀ. ೯, ೫೪, ೬೬

೨೮ ಸಾರಂಗ

ಕೀ. ೨, ೫, ೫೯, ೬೩

೨೯ ಸಾವೇರಿ

ಕೀ. ೧೬, ೪೧, ೫೨

೩೦ ಸುರಟಿ

ಕೀ. ೫೭

೩೧ ಸೌರಾಷ್ಟ್ರ

ಕೀ. ೨೮, ೩೫, ೪೮, ೬೫

## ೨. ತಾಳಗಳ ಶಬ್ದಸೂಚಿ

೧ ಅಟ್ಟತಾಳ

ಕೀ. ೩, ೬, ೭, ೮, ೯, ೧೧, ೧೫, ೧೬, ೨೦, ೨೬, ೨೮, ೨೯, ೩೨, ೩೩, ೩೪, ೩೬, ೩೯, ೪೨, ೪೩, ೪೭, ೪೯, ೬೧, ೬೨, ೬೬, ೬೭.

೨ ಆದಿತಾಳ

ಕೀ. ೨೨, ೫೦

೩ ಏಕತಾಳ

ಕೀ. ೨, ೫, ೧೧, ೧೨, ೧೩, ೧೭, ೧೯, ೨೧, ೨೩, ೨೪, ೨೫, ೨೭, ೩೦, ೩೧, ೩೫, ೩೭, ೩೮, ೫೧, ೫೪, ೫೫, ೫೮, ೫೯, ೬೫.

೪ ಜಕ್ಕಣಿ ?

ಕೀ. ೧೮, ೨೨, ೩೮, ೪೪, ೪೬, ೪೮, ೫೨, ೬೦, ೬೪.

೫ ಝಂಪೆ

ಕೀ. ೧, ೪, ೫೩, ೫೬, ೫೭, ೬೩

೬ ತ್ರಿಪುಟ

ಕೀ. ೧೪, ೧೮

೭ ಮಠ್ಯ

ಕೀ. ೪೫

## ಅನುಬಂಧ ೪

# ಕೀರ್ತನೆಗಳ ಅಕಾರಾದಿ ಸೂಚಿ


| | ಕೀರ್ತನೆಗಳ ಮೊದಲ ಪಂಕ್ತಿ | ಪುಟಸಂಖ್ಯೆ |
|---|---|---|
| ೧ | ಅಂತರಿಕ್ಷಾದ್ಭುತ ನೋಡಿದ ಬಹು | ೭ |
| ೨ | ಅಮ್ಮಮ್ಮಚ್ಚರಿಯ ವಿಚಿತ್ರ ಚರಿತ್ರ | ೧೪೦ |
| ೩ | ಅವರೇ ಸುಖಿಗಳು ಅವರೇ ಧನ್ಯರು | ೮೦ |
| ೪ | ಆ ಸಖಿಯರ ಸುಖಕೆ ಸರಿಯುಂಟೆ | ೭೨ |
| ೫ | ಈ ತಮ್ಮನೆ ಪರಬೊಮ್ಮ | ೧೫ |
| ೬ | ಈ ಪರಿ ಗೋಪಿ ಚಮೂ ಪರಲಾಪಿಸೆ | ೭೦ |
| ೭ | ಏಕತ್ಪೂರ್ವದಿ ಮಧುರೆಲಿ ಮಹಾ | ೧೪ |
| ೮ | ಕರಚರಣಂಗಳ ಸ್ಪರುಶದಿ ಗೋಷ್ಪವ | ೧೮ |
| ೯ | ಕಾಮನಯ್ಯನ ಕಾಮಿನಿಯರ ಕಾಮುಕ ಭಕ್ತಿಯೆ ಮುಕ್ತಿ | ೬೩ |
| ೧೦ | ಕಾಲಕಾಲ ದುರಿತ ಕೋಲಾಹಲದಿಂ ವ್ರಜಾಜಗತ್ | ೪೫ |
| ೧೧ | ಕಾಳಿಯ ಫಣಿ ಮದಹರಣ ಕೃಪಾಳು ಸುಜನಾಭರಣ | ೪೨ |
| ೧೨ | ಕೃಷ್ಣನಾಶ್ರಿತರಿಗ್ಯೆಥೇಷ್ಟ ಜಯವು ಶ್ರೀ ವಿಷ್ಣು | ೮೯ |
| ೧೩ | ಕೃಷ್ಣನಾಶ್ರಿತ ಶಿಷ್ಟರೆಲ್ಲರು ತುಷ್ಟಿಲಿರಲು ಅರಿಷ್ಟನೆಂಬವ | ೮೮ |
| ೧೪ | ಕೆಣಕಿ ಕೆಟ್ಟಳು ಪೂತನಿಯು ಹರಿಗೆ | ೧೦ |
| ೧೫ | ಗಜಪಾಲ ಅಷ್ಟದಿಗ್ಗಜಪಾಲ ಗಜವದನಜನಕಪಾಲ | ೧೨೭ |
| ೧೬ | ಗೋಷ್ಪದ ಜನಕೆಲ್ಲ ಸೃಷ್ಟಿಕೋಟಿಗೆಲ್ಲ | ೮೦ |
| ೧೭ | ಜಯ ಜಯ ರಂಗಗೆ ಜಯ ದೇವೋತ್ತುಂಗಗೆ | ೧೪೦ |
| ೧೮ | ಜಯವ್ರಜಕೆ ನೀ ಜನ್ಮಿಸಧಿಕವು | ೬೮ |
| ೧೯ | ಜಾತಃ ಕಂಸವಧಾರ್ಥನು ಪಾತಕಹರ | ೧೩೪ |
| ೨೦ | ಜಾಣೆ ಗೋಪೇರೊಂದುಗೂಡಿ ವೇಣುಗೋಪತಿಯ | ೮೨ |
| ೨೧ | ಜೋ ಜೋ ನಂದನ್ನ ಕಂದ ಗೋವಿಂದ | ೨೦ |
| ೨೨ | ತಾಳಲಾರೆವಮ್ಮಾ ಉಪಟಳವ ನಂದನ್ನರಾಣಿ | ೨೨ |
| ೨೩ | ತೊರೆದ ಮೊಲೆಯಿಂದಲಿ ಕರೆದಳು | ೩೦ |
| ೨೪ | ತೋರಿದಾ ತನ್ನ ತೋರಿದಾ ತನ್ನ ಸಾರಿದ | ೭೧ |
| ೨೫ | ದುಸ್ಥ ನಿಮ್ಮಂಘ್ರಿರಜ ಮಸ್ತಕದಿ ಧರಿಸುತ | ೪ |
| ೨೬ | ಧನ್ಯ ಧನ್ಯ ಯಮುನೆ ಗೋವರ್ಧನ್ನ ಗಿರಿಪತಿ | ೩೮ |

| | | |
|---|---|---|
| ೨೭ | ಧ್ಯಾನವಿದು ಪರಾನಿಧ್ಯಾನವಿದು | ೨೦ |
| ೨೮ | ನಂದನ್ನ್ಯಧರ್ಮಂಗಿಯು ಬಳಿಗೆ ಬಂದು | ೨೨ |
| ೨೯ | ನಾಕೇಶನ ವನವೀ ವೃಂದಾವನ | ೪೬ |
| ೩೦ | ನಿತ್ಯೋತ್ಸವ ಪುಣ್ಯಸಂಕುಲ ನಂದಗೋಕುಲ | ೫೯ |
| ೩೧ | ನೆನೆದರು ಹರಿಯ ಗೆಳತಿಯರು ಸ್ಮರನ ಶರದುಟ್ಟುಳಿಗೆ | ೬೧ |
| ೩೨ | ಪಾದನ್ಯಾಸಗಳಿಂದಾ ಭುಜಗಳ ಒಳುಪಿಂ | ೬೫ |
| ೩೩ | ಪಾಹಿ ಗೋವಿಂದ ಪಾಹಿ ಮುಕುಂದ | ೩೨ |
| ೩೪ | ಪಿರಿದು ಸುಖ ಪೊಗಳೆ ಹರಿಯ ಮಹಿಮೆ | ೧೧೦ |
| ೩೫ | ಪುತ್ರಂಗೆ ಎರಡಾರನೆಯ ದಿನ ಗೋಪಿ | ೧೧ |
| ೩೬ | ಬಿಲ್ಲಹಬ್ಬವ ನೋಡುತ್ತೈದಲು ರಾಮಕೃಷ್ಣರುಲ್ಲಾಸದಿ | ೧೧೮ |
| ೩೭ | ಭಾಗ್ಯವನೆಣಿಸಿದರೆಣಿಕಿಲ್ಲ ಕುಬ್ಜೆಯೋಗ್ಯತೆ | ೧೨೨ |
| ೩೮ | ಮಧುಕೈಟಭ ಮರ್ದಕನೊಳು ಚಾಣೂರ | ೧೩೦ |
| ೩೯ | ಮಹಾಬಾಹುಶಾಲಿ ಕೇಳು ರಾಮಾ | ೫೭ |
| ೪೦ | ಮುಕ್ಕಣ್ಣನ ವರಧನುವನು ಕಂಸನು | ೧೨೪ |
| ೪೧ | ಮೊಸರು ಕಡೆದಳಮ್ಮ ತನಯಗೆ ಪೊಸಬೆಣ್ಣೆಗಾಗಮ್ಮ | ೨೮ |
| ೪೨ | ರಂಗಗೆ ನಮೊ ಪಾಂಡುರಂಗಗೆ ನಮೊ | ೧೩ |
| ೪೩ | ರಂಗ ಗೋಕುಲದೊಳಾಡಿದ | ೨೯ |
| ೪೪ | ರಾಮಕೃಷ್ಣರ ದ್ರೋಹದ ಫಲ ತತ್ಕಾಲ ಒದಗಿತು | ೧೨೫ |
| ೪೫ | ರಾಸಕ್ರೀಡೆಯಲಾ ಸಖಿರ್ಗೆ ವಾಸುದೇವನ | ೬೬ |
| ೪೬ | ಲಲಿತಲೀಲೆಯ ತೋರುವೆನೆಂದು ತಾ | ೧೭ |
| ೪೭ | ಲೀಲೆ ಘನ ಹರಿಲೀಲೆ ಘನ ಈ | ೨೭ |
| ೪೮ | ವರ್ಣಿಪ ಕವಿಗಳಿಂದ ಉಘೇ | ೫೬ |
| ೪೯ | ವಾಸುದೇವನ ಅಡಿದಾವರೆಯು ಆಶ್ರಿತ ಗೋಪಳರು | ೯೭ |
| ೫೦ | ವೃಷ್ಣಿವರ್ಯ ಕೃಷ್ಣನಂಘ್ರಿ ಸ್ಪೃಷ್ಟನಾದ ಗೋಷ್ಠಕೆಲ್ಲ | ೫೦ |
| ೫೧ | ವೇಣುಗೋಪಾಲನ ವೇಣು ವರ್ಣನವು | ೫೩ |
| ೫೨ | ಶ್ರೀಕೃಷ್ಣ ಒಮ್ಮಿಂದೊಮ್ಮಿರುಳೆ ತನ್ನಾಕೃತಿಯಡಗಿಸಿ | ೬೬ |
| ೫೩ | ಶ್ರೀ ಕೃಷ್ಣನ ಲೀಲಾವತಾರ ಘನ್ನ | ೨ |
| ೫೪ | ಶ್ರೀ ಕೃಷ್ಣಪಾದ ಸರೋರುಹ ಹೊಂದಿದ | ೧೧೭ |
| ೫೫ | ಶ್ರೀದೇವಿಯಾಳ್ದ ಶ್ರೀ ವೇದ್ಯಕವೇದ್ಯ ಜಯ | ೧ |
| ೫೬ | ಶ್ರೀ ಮಾಧವ ಬಲರಾಮರ ಸಖ ಶ್ರೀ ರಾಮ | ೪೦ |
| ೫೭ | ಶ್ರೀಯರಮಣ ಶ್ರೀ ಕೃಷ್ಣಪ್ರಿಯನಾದ ದಾನಪತಿ | ೧೦೨ |
| ೫೮ | ಶ್ರೀವಲ್ಲಭಮದಿಸಿದಾ ಕ್ಷಣದಿ ದುರ್ಗಾ | ೭ |

೫೯ ಶ್ರೋತವ್ಯವು ಇದೆ ಮಂತ್ರವ್ಯವು ಇದೆ ೧
೬೦ ಸ್ವರ್ಗಕೆ ಸಮ ವೃಂದಾವನವು ೩೫
೬೧ ಸಾರಿ ಸಾರಿಗೆ ಗೋವಿಂದ ಮಹಾ ೩೦
೬೨ ಸುಜ್ಞನಾರದ ತ್ರಿಕಾಲಜ್ಞ ಹೇಳಿದನು ೯೪
೬೩ ಹರಿಪ್ರವಣರು ಗೋಪಾಲಕರು ಶ್ರೀ ೬೦
೬೪ ಹರಿಭಟರಿಗೆ ಲವ ಭಯವಿಲ್ಲ ೯೭
೬೫ ಹರಿಯು ಪಾದಾಬ್ಜ ಪೊಕ್ಕವರಿಗೆ ದುರಿತದ ೯೩
೬೬ ಹರಿ ಹರಿ ಗೋವಿಂದ ವಿಳ ೩೪
೬೭ ಹೇಮಂತದ ಪ್ರಥಮ ಮಾಸದಿ ಶ್ರೀ ೫೪

# ಸಹಾಯಕ ಸಾಹಿತ್ಯ


೧ ದಾಸವರ್ಯ ಶ್ರೀ ಪ್ರಸನ್ನವೆಂಕಟರ ಭಾಗವತ (ಮು. ೫೨) (೧೯೨೮) : ಸಂ. ಕವಿಭೂಷಣ ಬೆಟಗೇರಿ ಕೃಷ್ಣರಾಯರು ಮತ್ತು ಕೌಜಲಗಿ ಬಂಡೇರಾಯರು.

೨ ದಾಸ ಸಾಹಿತ್ಯದಲ್ಲಿ ಸೃಷ್ಟಿ ಪ್ರಕರಣ (೧೯೮೪) : ವಿ. ಬಾದರಾಯಣ ಮೂರ್ತಿ.

೩ ಪ್ರಸನ್ನವೆಂಕಟದಾಸರ ಹಾಡುಗಳು (೧೯೭೬) : ಸಂ. ಕಾವ್ಯಪ್ರೇಮಿ.

೪ ಪುರಾಣನಾಮಚೂಡಾಮಣಿ (೧೯೫೯) : ಬೆನಗಲ್ ರಾಮರಾವ್, ಪಾಸ್ಯಂ ಸುಂದರಶಾಸ್ತ್ರೀ.

೫ ರಾಮಾಯಣ : ವಾಲ್ಮೀಕಿ

೬ ವಚನಭಾರತ (೧೯೫೦) : ಎ. ಆರ್. ಕೃಷ್ಣಶಾಸ್ತ್ರೀ.

೭ ಶ್ರೀ ಕರ್ನಾಟಕ ಭಕ್ತವಿಜಯ (ಭಾಗ ೨) (೧೯೩೭) : ಬೇಲೂರು ಕೇಶವದಾಸರು.

೮ ಶ್ರೀ ಜಗನ್ನಾಥದಾಸರು (೧೯೮೬) : ಲೇ. ಟಿ. ಕೆ. ವೇಣುಗೋಪಾಲದಾಸರು.

೯ ಶ್ರೀ ಪ್ರಸನ್ನವೆಂಕಟದಾಸರು ಮತ್ತು ಅವರ ಕೃತಿಗಳು (೧೯೫೬) : ಡಾ. ಎ. ಟಿ. ಪಾಟೀಲ.

೧೦ ಶ್ರೀಮದ್ಭಾಗವತ (ಹತ್ತನೆಯ ಸ್ಕಂಧ ಪೂರ್ವಾರ್ಧ) ಕನ್ನಡ ಅನುವಾದ ಸಹಿತ (೧೯೮೨) : ಅನುವಾದಕರು, ಮಹಾವಿದ್ವಾನ್ ಸುಗ್ಗೇಹಳ್ಳಿ ವೆಂಕಟನಾಥಾಚಾರ್ಯರು ಮತ್ತು ಪಂಡಿತ ರತ್ನಂ ಕೊತ್ತಮಂಗಲಂ ವರದಾಚಾರ್ಯರು.

೧೧ ಶ್ರೀ ಮದ್ಭಾಗವತವು (೧-೧೦ ಸ್ಕಂಧಗಳು) : ದೇವಶಿಖಾಮಣಿ ಅಳಸಿಂಗರಾಚಾರ್ಯ.

೧೨ ಶ್ರೀವತ್ಸ ನಿಘಂಟು (೧೯೭೧) : ಸಂ. ಡಾ. ಟಿ. ವಿ. ವೆಂಕಟಾಚಲಶಾಸ್ತ್ರೀ.

೧೩ ಶ್ರೀ ವಾದಿರಾಜರ ಕೃತಿಗಳು (೧೯೮೦) : ಸಂ. ಟಿ. ಎನ್. ನಾಗರತ್ನ.

೧೪ ಹರಪನಹಳ್ಳಿ ಭೀಮವ್ವನ ಹಾಡುಗಳು (೧೯೮೪) : ಸಂ. ಟಿ. ಎನ್. ನಾಗರತ್ನ.

# ಒಪ್ಪೋಲೆ

| ತಪ್ಪು | ಒಪ್ಪು | ಕೀರ್ತನೆಯ ಸಂಖ್ಯೆ | ಪಡಿಸಂಖ್ಯೆ |
|---|---|---|---|
| ಮೊಳಗಿದಪಂಬರಲಿ | ಮೊಳಗಿದವಂಬರದಲಿ | ೫ | ೨ |
| ಚರಿಪರು | ಸಂಚರಿಪರು | ೧೩ | ೧ |
| ಪರಂಜೀಪ | ಪರಜೀವ | ೨೦ | ೭ |
| ರಾಮಕೃಷ್ಣ | ರಾಮಕೃಷ್ಣರು | ೨೨ | ೧ |
| ಕೊಡಿದ | ಕೂಡಿಹ | ೨೩ | ೯ |
| ಗೃಹಮೇಧಿ | ಗೃಹಮೇಧಿ | ೨೬ | ೩ |
| ಬರುತಿಹ | ಬರುತಿಹ ಘನದಿ | ೨೭ | ೭ |
| ಹರಿದಾಸರೆನುತಿಹರು | ಹರಿದಾಸರೆನುತಿಹರು | ೩೭ | ೨ |
| ಮುಖ್ಮವು | ಮುಖ್ಯವು | ೩೮ | ೧೦ |
| ತನ್ನ ಕೃತಿ | ತನ್ನಾಕೃತಿ | ೩೯ | ಪ. |
| ರಜತ್ಯಣಾತ್ಮ | ರಜತ್ಯಣಾತ್ಮ | ೪೦ | ೧೧ |
| ಸೌಂದರ್ಯಸಾರಬಳೇರು | ಸೌಂದರ್ಯಸಾರಬಳೇರ(?) | ೪೨ | ೨ |
| ಸುಮ್ಮುಗೆ | ಸುಮ್ಮಗ | ೪೪ | ೯ |
| ಚುಂಚುಬಿ | [ಚುಚುಂಬಿ] | ೪೫ | ೬ |
| ಕಾಮನೋತ್ಸವದಿ | ತಾ ಮನೋತ್ಸವದಿ | ೪೮ | ೨ |
| ಘನಗಂಜಿ | [ಘನಗಳಂಜಿ] | ೪೯ | ೧೮ |
| ಶಿಷ್ಟಲೆಲ್ಲರು | ಶಿಷ್ಟರೆಲ್ಲರು | ೫೦ | ೧ |
| ಪಾತಕ | ಪಾತಕ ಬುದ್ಧಿಯು | ೫೧ | ೧ |
| ಬಿಟ್ಟನು | ಬಿಟ್ಟ(ದ್ದ?)ನು | ೫೨ | ೭ |
| ಕಾಂತಿ | [ಕಾಶಿ] | ೫೩ | ೫ |
| ಹಂಸನಟ್ಟಿವರೆ | ಕಂಸನಟ್ಟಿದರೆ | ೫೫ | ೯ |
| ಅನಡುಹ (ದ್ವ?) | ಅನಡುಹ (ಡ್ವ?) | ೫೬ | ೨೮ |
| ಸುರರ ತನ್ನಿಚ್ಛೆಯಲಿ | ಸುರರಾತನಿಚ್ಛೆಯಲಿ | ೫೩ | ೪ |
| ಸೂಚಿಪವು | ಸೂಚಿಪವು | ೫೭ | ೧೦ |
| ದಿ(ಕ್ಕು?)ಗಳ | ದಿಕ್ಷುಗಳ | ೫೭ | ೧೬ |
| ಪ್ರಸನ್ನ | ಪ್ರಪನ್ನ | ೫೭ | ೪೨ |
| ಮುಕೊಂದ | ಮುಕುಂದ | ೫೯ | ೧೦ |